# ಮೈಸೂರು ವಿಶ್ವವಿದ್ಯಾನಿಲಯ

## "ಚನ್ನರಾಯಪಟ್ಟಣ ಪ್ರದೇಶದಲ್ಲಿನ ಶಾಸನಗಳ ಒಂದು ಸಾಂಸ್ಕೃತಿಕ ಅಧ್ಯಯನ"

**ಪಿ ಹೆಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧ**


ಸಂಶೋಧಕರು

**ಎನ್.ಎಸ್. ಶಶಿಕಲಾ**

ಇತಿಹಾಸ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು-570 006

ಮಾರ್ಗದರ್ಶಕರು

**ಡಾ. ಆರ್. ರಾಜಣ್ಣ**

ಎಂ.ಎ., ಪಿಎಚ್.ಡಿ.,

ಪ್ರಾಧ್ಯಾಪಕರು

ಇತಿಹಾಸ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು-570 006


**2013-2014**

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ಎನ್.ಎಸ್. ಶಶಿಕಲಾ ಇವರು **ಚನ್ನರಾಯಪಟ್ಟಣ ಪ್ರದೇಶದಲ್ಲಿನ ಶಾಸನಗಳ ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನಾ ಮಹಾ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಹೆಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಶೋಧನಾ ಮಹಾಪ್ರಬಂಧವನ್ನು ಇದುವರೆವಿಗೂ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ: ಮೈಸೂರು

ಮಾರ್ಗದರ್ಶಕರು
ಡಾ. ಆರ್. ರಾಜಣ್ಣ
ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು

## ಪ್ರಮಾಣ ಪತ್ರ

ಶ್ರೀಮತಿ ಎನ್.ಎಸ್. ಶಶಿಕಲಾ ಆದ ನಾನು ಇತಿಹಾಸ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾದ ಡಾ. ಆರ್. ರಾಜಣ್ಣರವರ ಮಾರ್ಗದರ್ಶನದಲ್ಲಿ ನಡೆಸಿದೆ ಸಂಶೋಧನೆಯ ಪಲವಾಗಿ ಈ ಪ್ರಬಂಧವನ್ನು ಸಿದ್ಧಪಡಿಸಿದ್ದೇನೆ. ನಾನು ಈ ಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ವಿಷಯದಲ್ಲಿ ಡಾಕ್ಟರ್ ಆಫ್ ಫಿಲಾಸಫಿ ಪದವಿಯನ್ನು ಪಡೆಯಲು ಮಂಡಿಸುತ್ತಿದ್ದೇನೆ.

ಈ ಪ್ರಬಂಧ ಈ ಮೊದಲು ಯಾವುದೇ ಪದವಿ ಅಥವಾ ಡಿಪ್ಲೋಮಾ ಪದವಿ ಪಡೆಯಲು ನನ್ನಿಂದ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಮಂಡನೆಯಾಗಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸಂಶೋಧನಾ ಅಭ್ಯರ್ಥಿ ಸಹಿ
ದಿನಾಂಕ:

ಮಾರ್ಗದರ್ಶಕರು

ದಿನಾಂಕ;

ಡಾ. ಆರ್. ರಾಜಣ್ಣ
ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು

ಕೌಂಟರ್ ಸಹಿ
ಸಂಸ್ಥೆಯ ಮುಖ್ಯಸ್ಥರ

# ಕೃತಜ್ಞತೆಗಳು

ಜೈನ ಪರಂಪರೆ ಪ್ರಸಿದ್ಧಿ ಪಡೆದ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನಲ್ಲಿ ಹುಟ್ಟಿ ಬೆಳೆದ ನನ್ನನು ಸಂಶೋಧನೆಯತ್ತ ತೊಡಗಿಸಿಕೊಳ್ಳಲು ನನಗೆ ಪ್ರೋತ್ಸಾಹ ಹಾಗೂ ಪ್ರೇರಣೆಯ ಶಕ್ತಿಯನ್ನು ನೀಡಿ ಮಾರ್ಗದರ್ಶನ ನೀಡಿದ ನನ್ನ ಸಂಶೋಧನಾ ಗುರುಗಳಾದ ಡಾ. ಆರ್. ರಾಜಣ್ಣ, ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ ನನ್ನ ಪ್ರೀತಿ ಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ಡಾ. ಆರ್. ರಾಜಣ್ಣರವರು ನನ್ನ ಸಂಶೋಧನಾ ಅವಧಿಯಲ್ಲಿ ಕ್ಷೇತ್ರಕಾರ್ಯ ಸಂಗ್ರಹವನ್ನು ತಾಳ್ಮೆಯಿಂದ ಪರಿಶೀಲಿಸುತ್ತಾ ಮಾರ್ಗದರ್ಶನದ ಹೊಣೆಯನ್ನು ಹೊತ್ತು ಈ ಮಹಾಪ್ರಬಂಧವನ್ನು ಸಿದ್ದಪಡಿಸಲು ಸಹಾಯ ಮಾಡಿದಕ್ಕಾಗಿ ನನ್ನ ಸದಾಕಾಲ ನೆನೆಯುತ್ತೇನೆ.

ಈ ಮಹಾಪ್ರಬಂಧ ಮಂಡಿಸಲು ಮೊದಲಿನಿಂದಲೂ ನನಗೆ ಆಗಾಗೆ ಸೂಕ್ತ ಸಲಹೆ ಹಾಗೂ ಪ್ರೋತ್ಸಾಹ ನೀಡುತ್ತಾ ಸಹಕರಿಸಿ ಬೆಂಬಲಿಸಿದ ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಇಲ್ಲಿನ ಮುಖ್ಯಸ್ಥರಾದ ಡಾ. ಅಶ್ವತ್ ನಾರಾಯಣರವರಿಗೂ ನನ್ನ ಕೃತಜ್ಞತೆಗಳು. ಈ ಪ್ರಬಂಧದ ವಿಷಯ ಸಂಗ್ರಹ ಕಾಲದಲ್ಲಿ ವಿಶೇಷವಾಗಿ ಅಗತ್ಯ ಮಾಹಿತಿ ನೀಡಿ ಸಹಕರಿಸಿದ ಡಾ. ಸುಗೀತ ಸುವರ್ಣ,ಡಾ. ಸೆಬಾಸ್ಟಿಯನ್ ಜೋಸೆಫ್, ಡಾ. ಎನ್. ಸರಸ್ವತಿ, ಡಾ. ಸದಾಶಿವ ಇವರಿಗೂ ಸಹ ನನ್ನ ಕೃತಜ್ಞತೆಗಳು ಹಾಗೂ ಡಾ. ನಾಯಕವಾಡಿ. ಡಾ. ಸೋಮಶೇಖರ್, ಡಾ. ಪುಟ್ಟಯ್ಯ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು. ನನ್ನ ಸಂಶೋಧನಾ ಕಾರ್ಯದಲ್ಲಿ ಕೆಲವೊಂದು ಸೂಕ್ತಸಲಹೆಗಳನ್ನು ನೀಡಿ ಸ್ಫೂರ್ತಿ ತುಂಬಿ ಸಹಕರಿಸಿದ ಡಾ. ಬಿ. ಬಸವರಾಜುರವರಿಗೂ ಹಾಗೂ ಈ ಮಹಾಪ್ರಬಂಧವನ್ನು ಸುಂದರವಾಗಿ ಮತ್ತು ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿಕೊಟ್ಟ ಸನತ್ ಕುಮಾರ್‌ರವರನ್ನು ಸಹ ಸ್ಮರಿಸುತ್ತೇನೆ. ಅಲ್ಲದೆ ಸಂಶೋಧನೆಗೆ ಪೂರಕವಾಗಿ ನನ್ನ ಒಟ್ಟಿಗೆ ಸದಾ ಜೊತೆಯಲ್ಲಿ ಸಹಾಯ ಮಾಡಿದ ನನ್ನ ಪತಿ ಎಂ.ಎನ್. ಜಗದೀಶ್ ಸಹಕರಿಸಿರುತ್ತಾರೆ. ನನ್ನ ಸಂಶೋಧನೆಗೆ ನೆರವಾದ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ ಸಿಬಂದಿಗೆ ಹಾಗೂ ಇತಿಹಾಸ ಅಧ್ಯಯನ ವಿಭಾಗದ ಗ್ರಂಥಾಲಯವನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿದ ಭಾರತೀಯ ಪುರಾತತ್ವ ಸರ್ವೇಕ್ಷಣ ಅಧಿಕಾರಿಯಾದ ಶಾಸನ ಶಾಸ್ತ್ರದ ನಿರ್ದೇಶಕರಿಗೂ ಅವರ ಸಿಬ್ಬಂದಿ ವರ್ಗದವರಿಗೂ ಕರ್ನಾಟಕ ಸರ್ಕಾರದ ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರಿಗೂ ಮತ್ತು ಸಿಬ್ಬಂದಿವರ್ಗದವರಿಗೂ ನನ್ನ ಅನಂತ ವಂದನೆಗಳು.

ಅಧ್ಯಯನಕ್ಕೆ ಅನುಕೂಲವಾಗಲು ಕ್ಷೇತ್ರಕಾರ್ಯದಲ್ಲಿ ಅನೇಕ ಮಾಹಿತಿಗಳನ್ನು ನೀಡಿದ ಎಲ್ಲಾ ದೇವಾಲಯಗಳ ಅರ್ಚಕವರ್ಗ ಮತ್ತು ದೇವಾಲಯದ ಮಂಡಳಿರವರಿಗೂ ನಾನು ಅಭಾರಿಯಾಗಿದ್ದೇನೆ. ಕೊನೆಯದಾಗಿ ಈ ಮಹಾಪ್ರಬಂಧದ ರಚನೆ ಮತ್ತು ಸಿದ್ಧತೆ ಕಾಲದಲ್ಲಿ ಸೂಕ್ತ ಸಲಹೆ ಮತ್ತು ಸಹಕಾರ ನೀಡಿದ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯಮಾಡಿದ ಎಲ್ಲಾ ಸ್ನೇಹಿತರಿಗೂ ಹಾಗೂ ಹಿತೈಷಿಗಳಿಗೂ ತುಂಬು ಹೃದಯದ ಕೃತಜ್ಞತೆಗಳು.

**(ಎನ್. ಎಸ್. ಶಶಿಕಲಾ)**

## ಪರಿವಿಡಿ

# ಅಧ್ಯಾಯ–1

**ಪ್ರಸ್ತಾವನೆ:–**

**(ಪೀಠಿಕೆ)**

(ಹಾಸನ ಜಿಲ್ಲೆಯಲ್ಲಿ ಒಟ್ಟು 2275 ಶಾಸನಗಳಿವೆ. ಆದರೆ ಚನ್ನರಾಯಪಟ್ಟಣ ತಾಲೂಕಿಗೆ ಪೂರಕವಾಗಿ ಸುಮಾರು 50 ಊರುಗಳಲ್ಲಿ 175 ಶಿಲಾ ಶಾಸನಗಳು ದೊರೆತಿವೆ. ಹಾಸನ ಜಿಲ್ಲೆಯ ಒಟ್ಟು 7 ತಾಲೂಕುಗಳಲ್ಲಿ ಶ್ರವಣಬೆಳಗೊಳಕ್ಕೆ ಸಿಂಹಪಾಲು ಇದೇ ಎಂದರೆ ತಪ್ಪಾಗಲಾರದು. ಚನ್ನರಾಯಪಟ್ಟಣ ತಾಲೂಕಿನ 50 ಊರುಗಳಲ್ಲಿ 171 ಶಾಸನಗಳು, ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿ 271 ಶಾಸನಗಳು, ದೊಡ್ಡಬೆಟ್ಟದಲ್ಲಿ 172 ಶಾಸನಗಳು, ಶ್ರವಣಬೆಳಗೊಳದ ಇನ್ನಿತರ ಊರುಗಳಲ್ಲಿ 80 ಶಾಸನಗಳು ಮತ್ತು ಶ್ರವಣಬೆಳಗೊಳದ ಹೋಬಳಿಗೆ ಸೇರಿದ ಸಮೀಪ ಗ್ರಾಮಗಳಲ್ಲಿರುವ 50 ಶಾಸನಗಳು ಸೇರಿವೆ. ಆದ ಕಾರಣ ಒಟ್ಟು ಚನ್ನರಾಯಪಟ್ಟಣ ತಾಲೂಕಿನಲ್ಲಿ ಸುಮಾರು 744 ಶಾಸನಗಳು ಕಂಡುಬಂದಿವೆ. ಇನ್ನು ಮುಂದೆಯು ಸಹ ದೊರಕಲುಬಹುದು. ಈ ಹಿನ್ನೆಲೆಯಲ್ಲಿ ಕೆಲವೊಂದು ಶಾಸನಗಳ ಆಧಾರವನ್ನಿಟ್ಟುಕೊಂಡು ಸಂಶೋಧನೆಯನ್ನು ನಡೆಸಲಾಗಿರುತ್ತದೆ.

ಚನ್ನರಾಯಪಟ್ಟಣ ತಾಲೂಕಿನಲ್ಲಿ ನೂರಾರು ಸಂಖ್ಯೆಯಲ್ಲಿ ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ದೊರೆಯುತ್ತವೆ. ಆದರೆ ಸಂಶೋಧನೆಗೆ ಪೂರಕವಾಗಿ ಕೆಲವೆ ಕೆಲವು ವೀರಗಲ್ಲುಗಳನ್ನು ಮಾತ್ರ ಚರ್ಚಿಸಲಾಗಿರುತ್ತದೆ.)

ಇತಿಹಾಸ ಎಂಬುದು ಇತಿಹಾಸದ ಅರ್ಥವ್ಯಾಪ್ತಿಯು ಇಂದು ರಾಜನುರಾಜರ ಚರಿತ್ರೆಗೆ ಪೂರಕವಾಗಿದೆ. ಜನ ಸಾಮಾನ್ಯರ ಬದುಕಿದ ಅಧ್ಯಯನಕ್ಕಾಗಿ ವಿಸ್ತೃತಗೊಂಡಿರುವುದು ತಿಳಿದು ಬರುತ್ತದೆ. ಇಂತಹ ಒಂದು ಆಯಾಮವನ್ನು ನಾವು ಶಾಸನಗಳು ಮತ್ತು ದೇವಾಲಯಗಳು, ದೇವಾಲಯಗಳ ಮತ್ತು ಸಮಾಜದ ನಡುವಿನ ಸಂಬಧದಲ್ಲಿ ಗಮನಿಸಬಹುದಾಗಿದೆ. ದೇವಾಲಯಗಳು ಮಾನವ ಬದುಕಿನಲ್ಲಿ ಮಹತ್ವದ ಪಾತ್ರವಹಿಸಿದೆ. ಮೂಲತಃ ದೇವಾಲಯ ಎಂಬುದು ಒಂದು ಕಟ್ಟಡ. ಸಾಮಾಜಿಕ ಪೂಜೆ, ಪ್ರಾರ್ಥನೆಯನ್ನು ಸಲ್ಲಿಸಲು ಅನುಕೂಲವಿರುವ ಒಂದು ತಾಣ. ಯಾವುದೇ ಮತಧರ್ಮದಲ್ಲಾದರೂ ದೇವಾಲಯಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ದೇವಾಲಯಗಳು ಮತ್ತು ಶಾಸನಗಳು ಅಂದಿನ ಕಾಲದ ಜನಜೀವನದಲ್ಲಿ ಮಹತ್ವದ ಪಾತ್ರವಹಿಸಿದೆ. ಇವುಗಳು ಕೇವಲ ಭಕ್ತಿ ಕೇಂದ್ರಗಳಾಗಿರದೆ ಅಂದಿನ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯ ರೂಪಗಳ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರಿದೆ.

ಶಾಸನಗಳು, ದೇವಾಲಯಗಳು ಜನರಲ್ಲಿ ಬೇರೂರಿದ ಶ್ರದ್ಧೆ ಮತ್ತು ನಿಷ್ಟೆಗಳ ಪ್ರತೀಕಗಳಾಗಿವೆ. ದೇವಾಲಯಗಳು ಜೀವಂತ ಕೇಂದ್ರಗಳು ಮಾತ್ರವಲ್ಲ, ಇಡೀ ನಾಡಿನ ನಾಡಿಯನ್ನು ಹಿಡಿದು ನಡೆಸುತ್ತಿದ್ದ ಸಾಂಸ್ಕೃತಿಕ ಕೇಂದ್ರಗಳು ಆಗಿದ್ದವು, ದೇವಾಲಯಗಳು ಕೇವಲ ದೇವ ಪೂಜಾ ಮಂದಿರಗಳಾಗಿ ಮಾತ್ರ ಕಾರ್ಯ ನಿರ್ವಹಿಸದೆ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಿರುವುದನ್ನು ಶಾಸನಗಳು ತಿಳಿಸುತ್ತವೆ. ವಾಸ್ತುಶಿಲ್ಪ, ಮೂರ್ತಿಶಿಲ್ಪದ ಬೆಳವಣಿಗೆಗೆ ಮಾತ್ರವೇ ಅಲ್ಲದೆ ವಿದ್ಯಾಭ್ಯಾಸ, ಧರ್ಮ, ಸಂಗೀತ, ನೃತ್ಯ, ಚಿತ್ರಕಲೆ, ಲಲಿತಕಲೆಗಳಿಗೆ ವೈದ್ಯಕೀಯ ವ್ಯವಸ್ಥೆಗಳ ಮೂಲಕ ಜನ ಸಮುದಾಯಕ್ಕೆ ದೇವಾಲಯಗಳು ಪ್ರಮುಖ ಕೇಂದ್ರಗಳಾಗಿವೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಮಹತ್ವ ಪಡೆದ ದೇವಾಲಯಗಳಲ್ಲಿ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕು ಪ್ರಾಂತ್ಯದಲ್ಲಿ ಕಂಡು ಬರುವ ಪ್ರಮುಖ ದೇವಾಲಯಗಳು ಇವೆ. ಈ ಹಿನ್ನೆಲೆಯಿಂದ ಈ ಜಿಲ್ಲೆಯ ಇತಿಹಾಸದೊಂದಿಗೆ ಚೆನ್ನರಾಯಪಟ್ಟಣ ಪ್ರದೇಶದಲ್ಲಿನ ಶಾಸನಗಳ ಹಿನ್ನೆಲೆಯಲ್ಲಿ ಒಂದು ಸಾಂಸ್ಕೃತಿಕ ಅಧ್ಯಯನವನ್ನು ನಡೆಸಲಾಗಿರುತ್ತದೆ.[1] ಕರ್ನಾಟಕದ ಭಾಷೆ, ಸಂಸ್ಕೃತಿ, ಕಲೆ ಮತ್ತು ಇತಿಹಾಸಕ್ಕೆ ಪೂರಕವಾದ ವಿಷಯಕ್ಕೆ ಮೊದಲನೆಯ ಜಿಲ್ಲೆಯಾಗಿರುವ ಹಾಸನ ಜಿಲ್ಲೆಯು ಬಯಲು ಸೀಮೆ ಮತ್ತು ಪಶ್ಚಿಮ ಘಟ್ಟಗಳ ನಡುವೆ ಇರುವ ಪರಿಸರದ ಒಂದು ಅದ್ಭುತ ರಮ್ಯ ರಮಣೀಯ ಜಿಲ್ಲೆ. ಇದು ಹಲವು ವಿಶೇಷತೆಗಳನ್ನು ಹೊಂದಿರುವ ಈ ಜಿಲ್ಲೆಯು ಕರ್ನಾಟಕದ ಮುಕಟಮಣಿ ಎಂದೇ ಹೇಳುವ ಸಂಪ್ರದಾಯ ಹಾಗೂ ಪರಿಪಾಠವಿದೆ.

ವಿಶ್ವವಿಖ್ಯಾತ ಶ್ರವಣಬೆಳಗೊಳದ ಬಾಹುಬಲಿ ವಿಗ್ರಹವಿರುವ ಏಕಶಿಲಾ ಮೂರ್ತಿಯ ಏಕೈಕ ಜಿಲ್ಲೆ ಇದು. ಬೇಲೂರು, ಹಳೆಬೀಡುಗಳಂತಹ ವಿಶ್ವ ಶ್ರೇಷ್ಟವಾಸ್ತು ಶಿಲ್ಪದ ಕಿರೀಟ ರತ್ನಗಳು ಈ ಜಿಲ್ಲೆಯಲ್ಲಿಯೇ ಕಂಡು ಬರುತ್ತವೆ. ಒಂದೆಡೆ ಹಚ್ಚ ಹಸುರಿನ ದಟ್ಟವಾದ ಕಾಡು, ಇನ್ನೊಂದೆಡೆ ಬೆಟ್ಟಬಯಲಿನ ತೆಂಗಿನ ತೋಟ, ಹೊಲ ಗದ್ದೆಗಳ ಪ್ರಶಾಂತ ಪರಿಸರದ ಬಯಲು ಸೀಮೆ, ಇದರ ನಡುವೆ ಜಿಲ್ಲೆಯ ಪುರಾತನ ಕಾಲದಿಂದ ಪ್ರಸ್ತುತ ಕಾಲದವರೆಗೆ ಹಲವು ಹೆಜ್ಜೆ ಗುರುತುಗಳು ಇವೆ. ಇದರ ಫಲವಾಗಿ ಹಾಸನ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಬೆಳೆದು ನಿಂತಿದೆ. ಕರ್ನಾಟಕವೆಂದರೆ ಬೇಲೂರು, ಹಳೆಬೀಡು, ಶ್ರವಣಬೆಳಗೊಳ ಎನ್ನುವಷ್ಟರ ಮಟ್ಟಿಗೆ ವಿದೇಶಿಯರಿಗೆ ಚಿರಪರಿಚಿತವಾಗಿ ನಿಂತಿದೆ. ಈ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದರೆ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಇತ್ತೀಚಿನವರೆಗೂ ತನ್ನದೇ ಆದಂತಹ ವಿಶಿಷ್ಟವಾದ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದೆ. ಐತಿಹಾಸಿಕ ಅಧ್ಯಯನಕ್ಕೆ ದೊರಕುವ ವಿಶಿಷ್ಟವಾದ ಸಾಮಾಗ್ರಿಗಳೆಂದರೆ ಶಾಸನಗಳು ಮತ್ತು ದೇವಾಲಯಗಳು. ಆದ್ದರಿಂದ ದೇವಾಲಯಗಳ ಚರಿತ್ರೆಯೆಂದರೆ ಒಂದು ಜನಾಂಗದ ಅಭಿರುಚಿಯ ಚರಿತ್ರೆ, ಹಾಸನ ಜಿಲ್ಲೆಯ

ಕೆಲವೊಂದು ದೇವಾಲಯಗಳು ವಿಪುಲವೂ ವೈವಿಧ್ಯಮಯವೂ ಆದ ದೇವಾಲಯಗಳ ಚರಿತ್ರೆಯನ್ನು ಹೊಂದಿದೆ. ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕಿನ ಸಂಶೋಧನೆಗೆ ಪೂರಕವಾಗಿ ಶಾಸನಗಳು, ದೇವಾಲಯಗಳು, ಧರ್ಮ, ಸಾಹಿತ್ಯ, ಜಾನಪದ ಹೀಗೆ ಸಂಶೋಧನೆಗೆ ಪೂರಕವಾದ ವಿಭಿನ್ನ ವಿಷಯಗಳನ್ನು ಭೌಗೋಳಿಕ ವ್ಯಾಪ್ತಿಗೆ ಸೇರಿದಂತೆ ಅಧ್ಯಯನವನ್ನು ನಡೆಸಲಾಗಿರುತ್ತದೆ. [2]

ಚೆನ್ನರಾಯಪಟ್ಟಣ ತಾಲೂಕು ಕರ್ನಾಟಕ ರಾಜ್ಯದ ಹಾಸನ ಜಿಲ್ಲೆಗೆ ಸೇರಿದ ಒಂದು ತಾಲೂಕು ಕೇಂದ್ರ. ಒಂದು ತಾಲೂಕಿನ ಇತಿಹಾಸವೆಂದರೆ ಆ ತಾಲೂಕಿನ ಅಭಿವೃದ್ಧಿಗೆ ಪೂರಕವಾಗಿ ಕಾಲದಿಂದ ಕಾಲಕ್ಕೆ ಆಳ್ವಿಕೆ ನಡೆಸಿದ ರಾಜರುಗಳ ಇತಿಹಾಸ ಎಂಬ ಭಾವನೆ ಬಹುಮುಖ್ಯವಾಗಿ ಪ್ರಚಲಿತದಲ್ಲಿರುತ್ತದೆ. ಆದರೆ ಇತಿಹಾಸವನ್ನು ಬರೆಯುವ ಆಕರಗಳಲ್ಲಿ ರಾಜಕೀಯ ಇತಿಹಾಸವೇ ಪ್ರಮುಖವಾಗಿರುತ್ತದೆ. ನಂತರ ನೋಡುವುದಾದರೆ ತಾಲೂಕಿನ ಸಾಮಾಜಿಕ, ಆರ್ಥಿಕ, ಕಲೆ ವಾಸ್ತುಶಿಲ್ಪ ಮತ್ತು ಧರ್ಮಗಳು ಮುಂತಾದ ವಿಚಾರಗಳನ್ನು ಕುರಿತು ನೋಡಬೇಕಾಗುತ್ತದೆ. ಯಾವುದೇ ಇತಿಹಾಸವನ್ನು ರಚಿಸಬೇಕಾದರೆ ಅದು ದೇಶ, ರಾಜ್ಯ ಅಥವಾ ಜಿಲ್ಲೆಗೆ ಪೂರಕವಾಗಿರಲೇಬೇಕು. ಈ ಹಿನ್ನೆಲೆಯಿಂದ ಮೊದಲಿಗೆ ಜಿಲ್ಲೆಯ ಪರಿಸರವನ್ನು ತಿಳಿಸಿ ನಂತರ ತಾಲೂಕಿಗೆ ಬರಬೇಕಾಗುತ್ತದೆ.

ಹಾಸನ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅತ್ಯಂತ ಸಮೃದ್ಧವಾದ ಶ್ರೀಮಂತಿಕೆಯನ್ನು ಹೊಂದಿರುವ ಜಿಲ್ಲೆಯಾಗಿದೆ. ಈ ಜಿಲ್ಲೆ ಹಾಸನ, ಆಲೂರು, ಅರಕಲಗೂಡಿ, ಅರಸೀಕೆರೆ, ಬೇಲೂರು, ಸಕಲೇಶಪುರ, ಹೊಳೆನರಸೀಪುರ ಮತ್ತು ಚನ್ನರಾಯಪಟ್ಟಣ ಎಂಬ ಎಂಟು ತಾಲೂಕು ಕೇಂದ್ರಗಳನ್ನು ಹೊಂದಿದೆ. ಭೌಗೋಳಿಕ ಹಿನ್ನಲೆಯನ್ನು ಗಮನಿಸಿದರೆ ಹಾಸನ ಜಿಲ್ಲೆಯು 12° ,13° ಮತ್ತು 13°, 33°, ಉತ್ತರ ಅಕ್ಷಾಂಶ ಹಾಗೂ 75°, 35° ಮತ್ತು 76°,38 °ಪೂರ್ವ ರೇಖಾಂಶದಿಂದ ಕೂಡಿದೆ. ತುಮಕೂರು ಮತ್ತು ಮಂಡ್ಯ ಜಿಲ್ಲಾ ಪ್ರದೇಶಗಳು ಹಾಸನ ಜಿಲ್ಲೆಯ ಪೂರ್ವ ದಿಕ್ಕಿನಲ್ಲಿದೆ. ದಕ್ಷಿಣ ಕೊಡಗು, ಮೈಸೂರು ಜಿಲ್ಲೆಗಳು ಉತ್ತರಕ್ಕೆ ಚಿಕ್ಕಮಗಳೂರು, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಜಿಲ್ಲೆಯ ಗಡಿಗಳನ್ನು ಹೊಂದಿದೆ. ಎಲ್ಲೆಯ ಉತ್ತರ ದಕ್ಷಿಣಕ್ಕೆ 129ಕಿಲೋ ಮೀಟರ್ ಹಾಗೂ ಪೂರ್ವ ಪಶ್ಚಿಮಕ್ಕೆ 116 ಕಿಲೋ ಮೀಟರ್ ವಿಸ್ತೀರ್ಣವನ್ನು ಹೊಂದಿದ್ದು ಸರಾಸರಿ ಸುಮಾರು 6826 ಚದುರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಆದರೆ ನನ್ನ ಪಿಹೆಚ್.ಡಿಯ ಸಂಶೋಧನಾ ಕ್ಷೇತ್ರ ಕೇವಲ ಚನ್ನರಾಯಪಟ್ಟಣ ತಾಲೂಕಿಗೆ ಮಾತ್ರ ಸೀಮಿತವಾಗಿರುತ್ತದೆ. ಪ್ರಾಗೈತಿಹಾಸಿಕ ವಾಗಿಯೇ ಈ ಭಾಗ ಆದಿ ಹಳೆಯ ಬೃಹತ್ ಶಿಲಾಯುಗ ಮತ್ತು ನವಶಿಲಾಯುಗ

ಸಂಸ್ಕೃತಿಯ ಕಾಲದಿಂದ ಹಿಡಿದು ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯನ್ನು ಗಮನಿಸಬಹುದಾಗಿದೆ. ಚಾರಿತ್ರಿಕ ಅವಧಿಯಲ್ಲಿ ಈ ಭಾಗದ ಮೇಲೆ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಹಲವಾರು ಆಧಾರಗಳಿಂದ ತಿಳಿದುಬರುತ್ತದೆ.

ಈ ಭಾಗದ ಮೇಲೆ ಶಾತವಾಹನರ ಮತ್ತು ಪಲ್ಲವರ ನೇರವಾದ ಆಡಳಿತದ ಪ್ರಭಾವ ಕಂಡು ಬರುವುದಿಲ್ಲ. ಕ್ರಿ.ಶ. 4–5ನೇ ಶತಮಾನದ ವೇಳೆಗೆ ಬಹುಮಟ್ಟಿಗೆ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದಾಗಿದೆ.[3] ಇಡೀ ದಕ್ಷಿಣ ಭಾರತದಲ್ಲಿ ಅತ್ಯಂತ ಆಸಕ್ತಿದಾಯಕ ಸ್ಥಳವೆನಿಸಿಕೊಂಡುರುವ ಹಾಸನ ಜಿಲ್ಲೆಯಲ್ಲಿ ಹಲವಾರು ನೆಲೆಗಳಿವೆ. ಶ್ರವಣಬೆಳಗೊಳ ಪರಂಪರೆಯು ನಮ್ಮನ್ನು ಭಾರತದ ಇತಿಹಾಸದಲ್ಲಿ ಅತ್ಯಂತ ಆಸಕ್ತಿದಾಯಕ ಮಾಹಿತಿಗಳು ಕಾಲಕ್ಕೆ ಕರೆದೊಯ್ಯುತ್ತದೆ. ಶಿಲಾಯುಗದ ಕಾಲದಿಂದ ಹಿಡಿದು ಇಂದಿನವರೆಗೆ ಅದು ತನ್ನ ಅಭಿವೃದ್ಧಿ ಪಥದಲ್ಲಿ ಮುಂದುವರಿದು ಕರ್ನಾಟಕ ಸಂಸ್ಕೃತಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಹಿತ್ಯಿಕ, ಧಾರ್ಮಿಕ ವಿಷಯಗಳಲ್ಲಿ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಲೇ ಬಂದಿವೆ. ಕೊನೆಯ ಶೃತಕೇವಲ ಎಂದೇ ಖ್ಯಾತರಾಗಿದ್ದ ಭದ್ರಬಾಹು ಸ್ವಾಮಿಗೆ ನೆಲೆಯನ್ನು ಒದಗಿಸಿದ ನಾಡು ಶ್ರವಣಬೆಳಗೊಳದ ಗೊಮ್ಮಟೇಶ್ವರನ ಬೀಡು ಎಂದರೆ ಅತಿಶಯೋಕ್ತಿಯಲ್ಲ. ಇಂತಹ ಜಿಲ್ಲೆಯ ಶ್ರೇಷ್ಟತೆಯಿಂದ ಆಕರ್ಷಿತರಾದ ಹೊಯ್ಸಳರು ಈ ಜಿಲ್ಲೆಯ ಉದ್ದಗಲವನ್ನು ವಾಸ್ತುಶಿಲ್ಪ ಕಲೆಯ ಬೀಡಾಗಿ ಮಾಡಿದ್ದಾರೆ. ಐತಿಹಾಸಿಕ ಕಾಲದಲ್ಲಿ ಮೌರ್ಯ, ಕದಂಬ, ಗಂಗ, ರಾಷ್ಟ್ರಕೂಟ, ಬಾಣ ಮತ್ತು ಕಲ್ಯಾಣ ಚಾಲುಕ್ಯರು ರಾಜಮನೆತನಗಳು ಕ್ರಿ.ಶ. 1000ರವರೆಗೆ ನಂತರ ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರ್, ಸ್ಥಳೀಯ ಕಾನಕಾನಹಳ್ಳಿ ಪ್ರಭುಗಳು, ಬೇಲೂರ ನಾಯಕರು, ದಿಗೂರ ಪ್ರಭುಗಳು, ಜಾವಗಲ್ಲು ಪ್ರಭುಗಳು, ಚಂಗಾಳ್ವರು ಆಳ್ವಿಕೆ ನಡೆಸಿರುತ್ತಾರೆ.

ಎಪಿಗ್ರಾಫಿಯ ಕರ್ನಾಟಕ ಸಂಪುಟ ಸಂಖ್ಯೆ ಎರಡರಲ್ಲಿ ಶಾಸನಗಳ ಸಂಖ್ಯೆ 573, 645ರ ಸಂಪುಟ 10ರಲ್ಲಿ 471, ಅರಕಲಗೂಡು, ಅರಸೀಕೆರೆ, ಆಲೂರು, ಬೇಲೂರು, ಸಕಲೇಶಪುರ, ಹೊಳೆನರಸೀಪುರ ಅಲ್ಲದೆ ಸಂಶೋಧನೆಗೆ ಪೂರಕವಾದ ಚನ್ನರಾಯಪಟ್ಟಣ ತಾಲೂಕನ್ನು ಸೇರಿದಂತೆ ಈ ಎಲ್ಲಾ ತಾಲೂಕುಗಳ ಹಳ್ಳಿ, ಪಟ್ಟಣ, ಹೊಲಗದ್ದೆಗಳಲ್ಲಿ ಸಿಗುವ ಶಾಸನಗಳು ಒಟ್ಟು 2275ರಷ್ಟು ಇದೆ.[4] ಶ್ರವಣಬೆಳಗೊಳದ ಶಾಸನಗಳಿಗೆ ಸಿಂಹಪಾಲು, ಚಾರಿತ್ರಿಕ ಹಾಗೂ ಹಲವು ನಿಟ್ಟಿನಿಂದ ಮನ್ನಣೆಗಳಿಸಿರುವ ಶಿಲಾ ಶಾಸನಗಳು ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿ (ಚಂದ್ರಗಿರಿ) ಉತ್ಕೀರ್ಣವಾಗಿದೆ. ಆರನೆಯ ಶತಮಾನದಿಂದ ಆರಂಭವಾಗಿ ಏಳನೆಯ ಶತಮಾನದ ಹೊರಳು ದಾರಿಯಲ್ಲಿ ಬರೆಯಲಾದ ಈ ಕಲ್ಲುರೆಹಗಳ ಹಿರಿಮೆಯನ್ನು

ಹಿರಿಯರು ತಿಳಿಸುತ್ತಾ ಬಂದಿದ್ದಾನೆ. ಕರ್ನಾಟಕಕ್ಕೆ ಹಲವಾರು ಧರ್ಮಗಳು, ಪಂಥಗಳು ಬೇರೆ ಬೇರೆ ಪ್ರಾಂತ್ಯದಿಂದ ಬಂದು ಚನ್ನರಾಯಪಟ್ಟಣ ತಾಲೂಕಿನ ಪ್ರಮುಖ ನೆಲಗಳಲ್ಲೂ ಇತ್ತು ಎಂಬುದು ತಿಳಿದು ಬರುತ್ತದೆ. ಆಶ್ರಯ ಪಡೆದ ಧರ್ಮಗಳಲ್ಲಿ ಜೈನ ಧರ್ಮವೂ ಕೂಡ ಕರ್ನಾಟಕಕ್ಕೆ ಬಂದು, ಧರ್ಮಗಳಲ್ಲಿ ಅತ್ಯಂತ ಪ್ರಾಚೀನವಾದದು ಎಂದು ಹೇಳಬಹುದಾಗಿದೆ. ಆದರೆ ಜೈನಧರ್ಮ ಕರ್ನಾಟಕಕ್ಕೆ ಯಾವ ಕಾಲದಲ್ಲಿ ಹೇಗೆ ಬಂದಿತ್ತು ಎಂಬುದರ ಬಗ್ಗೆ ಹಿರಿಯ ವಿದ್ವಾಂಸರಲ್ಲಿಯೇ ಬಿನ್ನಾಭಿಪ್ರಾಯಗಳಿವೆ. ಶಾಸನ ಮತ್ತು ಸಾಹಿತ್ಯಗಳ ಆಧಾರಗಳಿಂದ ಉತ್ತರಭಾರತದಿಂದ ಶ್ರವಣಬೆಳಗೊಳಕ್ಕೆ ಆಗಮಿಸಿದ ಚಂದ್ರಗುಪ್ತ ಮುನಿಯೊಂದಿಗೆ ಜೈನ ಧರ್ಮವನ್ನು ಹಲವಾರು ವಿದ್ವಾಂಸರು ಹೆಚ್ಚಿನ ಸಂಖ್ಯೆಯಲ್ಲಿ ಒಪ್ಪಿಕೊಳ್ಳುತ್ತಾರೆ.

ಆದರೆ ಶ್ರವಣಬೆಳಗೊಳಕ್ಕೆ ಭದ್ರಬಾಹು ಮುನಿಯೊಂದಿಗೆ ಬಂದ ಚಂದ್ರಗುಪ್ತನು ಯಾರು ಎಂಬ ಬಗ್ಗೆ ಬಿನ್ನಾಭಿಪ್ರಾಯಗಳಿವೆ. ಜೈನ ಪವಿತ್ರ ಕ್ಷೇತ್ರ ಶ್ರವಣಬೆಳಗೊಳಕ್ಕೆ ಬಂದ ಅನೇಕ ಮಹಾಪುರುಷರಲ್ಲಿ ಚಂದ್ರಗುಪ್ತ ಮತ್ತು ಭದ್ರಬಾಹುಮುನಿಗಳು ಅತ್ಯಂತ ಪ್ರಮುಖರು ಭದ್ರಬಾಹು ಮುನಿಗಳು, ಜೈನ ಧರ್ಮದ ಆಚಾರ-ವಿಚಾರ ಪರಂಪರೆಯಲ್ಲಿ ಅಚಿತಿಮ ಶೃತ ಕೇವಲಿ ಎಂದು ಪ್ರಸಿದ್ಧರಾದರು ಅವರು ತಾವಿರುವಲ್ಲಿ ಮಹಾಕ್ಷಾಮ ಬರುವುದೆಂಬುದನ್ನು ಅರಿತು ತಮ್ಮ ಜೊತೆಯಲ್ಲಿದ್ದ ಜೈನ ಯತಿಗಳೊಂದಿಗೆ ಕರ್ನಾಟಕಕ್ಕೆ ಬಂದವರೆಂದು ಅವರ ಜೊತೆಯಲ್ಲಿಯೇ ಚಂದ್ರಗುಪ್ತನೂ ಆಗಮಿಸಿದನೆಂದು ದಿಗಂಬರ ಮತ್ತು ಶ್ವೇತಾಂಬರರ ಐತಿಹ್ಯಗಳು ತಿಳಿಸುತ್ತವೆ. ಮಹಾವೀರ ಪರಂಪರೆಯಲ್ಲಿ ಕಡೆಯ ಶ್ರುತಕೇವಲಿ (ಶ್ವೇತಾಂಬರರಲ್ಲಿ ಪಂಚಮ ಶ್ರುತ ಕೇವಲಿ ಯಾದುದರಿಂದ) ಕರ್ನಾಟಕಕ್ಕೆ 12080ಜನ ಶಿಷ್ಯರ ಜೊತೆಗೆ ಶ್ರವಣಬೆಳಗೊಳಕ್ಕೆ ಬಂದರೆಂದು ಹಲವಾರು ಪ್ರಾಚೀನ ಉಲ್ಲೇಖಗಳು ತಿಳಿಸುತ್ತವೆ. ಕೆಲವು ಸಾಹಿತ್ಯ ಕೃತಿಗಳು ಚಂದ್ರಗುಪ್ತನ ಬಗ್ಗೆ ಮಾಹಿತಿ ನೀಡುತ್ತದೆ. ಹರಿಸೇನನ ಬೃಹತ್ಕಥಾ ಕೋಶದಲ್ಲಿ ಚಂದ್ರಗುಪ್ತನ ಬಗ್ಗೆ ಒಂದು ಕಥೆ ಇದೆ. ಪಂಚಮ ಶ್ರುತಕೇವಲಿಯಾದ ಭದ್ರಬಾಹುವು ಮುಂದೆ 12 ವರ್ಷಗಳ ಕ್ಷಾಮ ಬರುವುದೆಂಬುದನ್ನು ಅರಿತು ತನ್ನ ಶಿಷ್ಯರಿಗೆ ದಕ್ಷಿಣಕ್ಕೆ ಹೋಗುವಂತೆ ಆಜ್ಞಾಪಿಸಿದನು. ಅರಸನಾದ ಚಂದ್ರಗುಪ್ತನು ಭದ್ರಬಾಹುವಿನಿಂದ ದೀಕ್ಷೆ ಪಡೆದು ಮುನಿ ಸರ್ವಸಂಗಗಳ ನಾಯಕನಾಗಿ ವಿಶಾಖಾಚಾರಿ ಎಂದು ಹೆಸರಾದನು. ಅನಂತರ ಭದ್ರಬಾಹುವಿನ ಆಜ್ಞೆಯಂತೆ ದಕ್ಷಿಣ ಭಾರತದಲ್ಲಿನ ಕರ್ನಾಟಕದ ಪುನ್ನಾಟ ದೇಶಕ್ಕೆ ಹೋದನು.

12 ವರ್ಷಗಳ ಕ್ಷಾಮದ ನಂತರ ವಿಶಾಖಾಚಾರಿಯನ್ನು ಸಂಗದೊಂದಿಗೆ ದಕ್ಷಿಣದಿಂದ ಮರಳಿ ಮಧ್ಯಪ್ರದೇಶದಲ್ಲಿ ಸೇರಿದನು. ಹಾಸನ ಜಿಲ್ಲೆಯ ಇತಿಹಾಸದ ಆರಂಭಕಾಲದ ಅತ್ಯಂತ ಮಹತ್ವದ ಘಟನೆ ಎಂದರೆ ಶ್ರವಣಬೆಳಗೊಳಕ್ಕೆ ಶ್ರುತ ಕೇವಲಿ ಭದ್ರಬಾಹು ಭಟಾರರ ಮತ್ತು

ಅವರ ಶಿಷ್ಯನಾದ ಮೌರ್ಯ ವಂಶದ ದೊರೆ ಚಂದ್ರಗುಪ್ತನ ಆಗಮನ ಮತ್ತು ಕೆಲಕಾಲದ ತಪ್ಪಸ್ಸಿನ ನಂತರ ಜೈನ ಧರ್ಮ ರೀತ್ಯಾ ಇಲ್ಲಿಯೇ ಅವರು ಧಾರ್ಮಿಕ ಮರಣ ಪಡೆದಿದ್ದು ಈ ಘಟನೆಯ ಕಾಲವನ್ನು ಕ್ರಿ.ಶ. 298 ಎಂದು ಹಾಸನ ಜಿಲ್ಲೆಯ ಗೆಜೆಟಿಯರ್‌ನಲ್ಲಿ ತಿಳಿದುಬರುತ್ತದೆ. [5]

ಈ ಜೈನರಾಗಮನದ ಕಾಲಕ್ಕೆ ಹಾಸನ ಜಿಲ್ಲೆಯ ಪ್ರದೇಶವು ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಮತ್ತು ಮೌರ್ಯರ ನಂತರ ದಕ್ಷಿಣ ಭಾರತದಲ್ಲಿ ಅದರ ಉತ್ತರಾಧಿಕಾರಿಗಳಾದ ಶಾತವಾಹನರ ಜಿಲ್ಲೆಯ ನೆರೆಯ ಪ್ರದೇಶಗಳಾದ ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಲ್ಲಿ ದೊರೆತಿರುವ ಅದರ ಶಾಸನ ಮತ್ತು ಸ್ಮಾರಕ ಅವಶೇಷಗಳಿಂದ ಗುರುತಿಸಬಹುದಾಗಿದೆ. ಆದರೆ ಈ ಜಿಲ್ಲೆಯನ್ನು ಸ್ವತಂತ್ರವಾಗಿ ಆಳಿದ ಮೊಟ್ಟ ಮೊದಲ ಕನ್ನಡನಾಡಿನ ರಾಜಮನೆತನವೆಂದರೆ ಬನವಾಸಿಯ ಕದಂಬರು. ಇವರು ಕ್ರಿ.ಶ. 280-566 ಎಂದು ಶಾಸನಾಧಾರಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಕದಂಬ ರಾಜ್ಯ ಸ್ಥಾಪಕನಾದ ಮಯೂರಶರ್ಮ ಸಿಂಹಾಸನಾರೋಹಣ ಕದಂಬರ ರಾಜಧಾನಿಯಾದ ಬನವಾಸಿಯಲ್ಲಿ ಕ್ರಿ.ಶ. 280ರಲ್ಲಿ ಜರುಗಿತ್ತೆಂದು ಇತ್ತೀಚೆಗೆ ಕದಂಬರ ಬಗ್ಗೆ ಅಧ್ಯಯನ ನಡೆಸಿರುವ ಪ್ರೊ. ಎಲ್.ಪಿ. ಶರ್ಮ ಮತ್ತು ಜೆ. ಹೆಚ್. ಶ್ರೀಧರ್‌ರವರು ಅಭಿಪ್ರಾಯ ಪಡುತ್ತಾರೆ.

ಆದರೆ ನಾನು ನನ್ನ ಸಂಶೋಧನೆಯಲ್ಲಿ ಈ ಭಾಗದ ಮೇಲೆ ಇದರ ಮತ್ತಷ್ಟು ಕೊಡುಗೆ ಏನು ಎಂಬುದರ ಬಗ್ಗೆ ಅಧ್ಯಯನವನ್ನು ನಡೆಸಿದ್ದು ಕದಂಬರಿಂದಲೇ ಕರ್ನಾಟಕದ ರಾಜಕೀಯ ಇತಿಹಾಸ ಪ್ರಾರಂಭವಾಗುತ್ತದೆ. ಕನ್ನಡ ಭಾಷೆಯಲ್ಲಿ ಈವರೆಗೆ ದೊರೆತಿರುವ ಮೊಟ್ಟ ಮೊದಲ ಶಾಸನವು ಕದಂಬ ದೊರೆ ಕಾಕುಸ್ಥವರ್ಮನಿಂದ ಕ್ರಿ.ಶ. ಸುಮಾರು 450ರಲ್ಲಿ ಹಾಕಿಸಲ್ಪಟ್ಟಿದ್ದು ಇದು ಹಾಸನ ಜಿಲ್ಲೆಯ ಬೇಲೂರು ತಾಲೂಕಿಗೆ ಸೇರಿದ ಹಲ್ಮಿಡಿ ಗ್ರಾಮದ ಹಲ್ಮಿಡಿ ಶಾಸನವಾಗಿದೆ.

ಡಾ. ಚಿದಾನಂದ ಮೂರ್ತಿರವರ ಪ್ರಕಾರ ಹನಿಮಿಡಿಯಲ್ಲಿ ದೊರೆತಿರುವ ಹಲ್ಮಿಡಿ ಶಾಸನವೇ ಆಗಿದೆ. ಕದಂಬರು ಸ್ವತಃ ಬ್ರಾಹ್ಮಣರಾಗಿ ವೈಧಿಕ ಯಜ್ಞಯಾಗಾದಿಗಳನ್ನು ಆಚರಿಸಿದಲ್ಲದೆ ಷಟ್ಕರ್ಮ ನಿರತ, ವೇದಾಧ್ಯಯನ ಸಂಪನ್ನ, ಬ್ರಹ್ಮನಿಷ್ಠ ಬ್ರಾಹ್ಮಣರಿಗೆ ಗ್ರಾಮದಾನ, ಭೂದಾನ, ಕರದಾನ ನೀಡಿ ಗೌರವ ಮತ್ತು ಪೋಷಣೆ ನೀಡುತ್ತಿದ್ದರು. ವೈಧಿಕ, ಶೈವ, ವೈಷ್ಣವ ಧರ್ಮಗಳನ್ನು ಪುರಸ್ಕರಿಸುತ್ತಿದ್ದರು. ಅಲ್ಲದೆ ನಾಸ್ತಿಕ ಮತ ಧರ್ಮಗಳಾದ ಜೈನ ಮತ್ತು ಬೌದ್ಧ ಧರ್ಮಗಳಿಗೂ ಪ್ರೋತ್ಸಾಹ ನೀಡಿದ್ದರು. ಶಾಸನಗಳನ್ನು ಬರೆಸುವ ಪರಿಪಾಠ ಪರಂಪರೆಯನ್ನು ಸಮೃದ್ಧಗೊಳಿಸಿದರು. ಆ ಮೂಲಕ ಕರ್ನಾಟಕದ ರಾಜ್ಯ ಪರಂಪರೆಗೂ

ಆಡಳಿತ ಪದ್ಧತಿಗೂ ಬುನಾದಿಯನ್ನೊದಗಿಸಿದರು. ಹಾಸನ ಜಿಲ್ಲೆಯ ಬೇಲೂರು ಪ್ರದೇಶವು ಕದಂಬರ ಈ ಕಾರ್ಯ ಸಾಧನೆಗಳ ನೆಲೆಯಾಗಿತ್ತೆಂಬುದು ಗಮನಾರ್ಹವಾದ ವಿಚಾರ, ಬನವಾಸಿಯ ಕದಂಬರ ಆಡಳಿತ ಮುಗಿದ ನಂತರವೂ ಕ್ರಿ.ಶ. 10–11ನೇ ಶತಮಾನದಲ್ಲಿ ಕದಂಬರು ಹಾಸನ ಜಿಲ್ಲೆಯನ್ನೊಳಗೊಂಡಂತೆ ರಾಜ್ಯಭಾರ, ರಾಜ್ಯಪಾಲನೆ ಮಾಡಿರುವುದರ ಬಗ್ಗೆ ತಾಲ್ಲೂಕುಗಳಲ್ಲಿ ಶಾಸನ ಉಲ್ಲೇಖಗಳು ಕಂಡುಬರುತ್ತವೆ. ಇದರ ಆಧಾರದ ಹಿನ್ನೆಲೆಯಲ್ಲಿ ಸಂಶೋಧನೆಯನ್ನು ನಡೆಸಲಾಗಿರುತ್ತದೆ. [6]

ತದ ನಂತರ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಕದಂಬರು ಆಳುತ್ತಿದ್ದರು ಇವರ ಏಳು ಶಾಸನಗಳು ಈ ಭಾಗದಲ್ಲಿ ದೊರೆತಿವೆ. ಈ ಶಾಸನಗಳು ನೀಡುವ ವಿಚಾರ ಕ್ರಿ.ಶ. 1026 ರಿಂದ 1035ರವರೆಗೆ ಆಳಿದ ನೀತಿ ಮಹಾರಾಜ ಕದಂಬನ ದಾನಗಳ ಬಗ್ಗೆ ಜೈನ ಸನ್ಯಾಸನ ವಿಧಿಯನ್ನಾಚರಿಸಿ ಮಾಡಿದ ಬಗ್ಗೆ ದಯಾಸಿಂಹ ಮಹಾರಾಜನ ತಾಯಿ ಮಹಾದೇವಿಯು ಕೆರೆಯನ್ನು ಮತ್ತು ಶಿವ ದೇವಾಲಯವನ್ನು ಕಟ್ಟಿಸಿ ಅರಸಿಯಪುರವೆಂಬ ಹೆಸರಿನಲ್ಲಿ ಎರಡು ಗ್ರಾಮಗಳನ್ನು ಐದು ಮಂದಿ ಬ್ರಾಹ್ಮಣರಿಗೆ ದಾನವಾಗಿ ನೀಡಿದ ಬಗ್ಗೆ ತಿಳಿದು ಬರುತ್ತದೆ. ಇವರು ಅಲ್ಲದೆ ಈ ಜಿಲ್ಲೆಯಲ್ಲಿ ಕ್ರಿ.ಶ. 5ನೇ ಶತಮಾನದಿಂದ ಕ್ರಿ.ಶ. 11ನೇ ಶತಮಾನದವರೆಗೂ ಸುಮಾರು ಏಳನೂರು ವರ್ಷಗಳ ಕಾಲ ಆಳಿದ ಅತ್ಯಂತ ಪ್ರಸಿದ್ಧ ರಾಜಮನೆತನವೆಂದರೆ ಪಶ್ಚಿಮ ಗಂಗರು. ಗಂಗರ ಕಾಲದ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಹಾಸನ ಜಿಲ್ಲೆಯಲ್ಲಿ ದೊರೆತಿವೆ. ಇವುಗಳ ಬಗ್ಗೆ ಸುದೀರ್ಘವಾದ ಸಂಶೋಧನೆ ನಡೆದಿಲ್ಲ.

ಶಾಸನಗಳಲ್ಲಿ ಗಂಗ ವಂಶದ ಅರಸರನ್ನು ಅವರ ಬಿರುದುಗಳನ್ನು ತಿಳಿಸುತ್ತದೆ. ಉದಾಹರಣೆಗೆ ಕೊಂಗಿಣಿವರ್ಮ ಮಹಾರಾಜಾಧಿರಾಜ, ನಂದಗಿರಿನಾಥ, ಕುಲಾಲಪುರವೇಶ್ವರ ಎಂಬ ಹೆಸರುಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಹಾಸನ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲೂ ಸಹ ಗಂಗರ ಶಾಸನಗಳು ದೊರೆಯುತ್ತವೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಗಂಗರ ಶಾಸನಗಳು ಹೆಚ್ಚಾಗಿ ದೊರೆತಿವೆ. ಶ್ರವಣಬೆಳಗೊಳದಲ್ಲಿ ಗಂಗರಿಗೆ ಸಂಬಂಧಿಸಿದಂತೆ ಚಾವುಂಡರಾಯನ ಶಾಸನಗಳು ಜಿನದೇವಣ್ಣನ ಶಾಸನ ಮತ್ತು ಗಂಗದೊರೆ ಮಾರಸಿಂಹನ ಸಮಾಧಿ, ಮರಣ ಶಾಸನಗಳು ಕಂಡು ಬರುತ್ತವೆ.

ಮಾರಸಿಂಹ ಮತ್ತು ಅವನ ಮಗ ನಾಲ್ವಡಿ ರಾಜಮಲ್ಲನ ಮಂತ್ರಿಯಾಗಿದ್ದವನೇ ಚಾವುಂಡರಾಯ. ಗಂಗರ ಅಧಿರಾಜನಾಗಿದ್ದ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಆದೇಶದ ಮೇರೆಗೆ ಉಜ್ಜಯಿನಿ ಭುಜಂಗ ಎಂಬ ಬಿರುದುಗಳನ್ನು ಪಡೆದುಕೊಳ್ಳುತ್ತಾನೆ. ಈ ಚಾವುಂಡರಾಯನೇ ಶ್ರವಣಬೆಳಗೊಳದ ದೊಡ್ಡಬೆಟ್ಟ ಅಥವಾ ಇಂದ್ರಗಿರಿಯ ಕೋಡುಗಲ್ಲಿನಲ್ಲಿ 57 ಅಡಿ ಎತ್ತರದ

ಬಾಹುಬಲಿ ಅಥವಾ ಗೊಮ್ಮಟ ಮೂರ್ತಿಯನ್ನು ತನ್ನ ತಾಯಿ ಕಳಲಾದೇವಿಯ ಅಪೇಕ್ಷೆಯ ಮೇರೆಗೆ ಶಿಲ್ಪಿ ಅಧಿಷ್ಠನೇಮಿಯಿಂದ ಕಡೆಸಿ ನಿಲ್ಲಿಸಿದನು ಮತ್ತು ತ್ಯಾಗದ ಬ್ರಹ್ಮದೇವರ ಸ್ತಂಭವನ್ನು ಸ್ಥಾಪಿಸಿದರು. ಈ ಬಗ್ಗೆ ಶ್ರವಣಬೆಳಗೊಳದ ದೊಡ್ಡ ಬೆಟ್ಟದಲ್ಲಿ ತಮಿಳು ಮತ್ತು ಮರಾಠಿ ಭಾಷೆಗಳಲ್ಲಿ ಶಾಸನಗಳಿವೆ, ಇವುಗಳ ಬಗ್ಗೆ ಸೂಕ್ತವಾಗಿ ಅಧ್ಯಯನ ನಡೆಸಲಾಗುತ್ತದೆ.

ಮಾರಸಿಂಹನ ಆಳ್ವಿಕೆಗೆ ಸೇರಿದ ಮೂರು ವೀರಗಲ್ಲು, ಶಾಸನಗಳು ಹಾಸನ ಜಿಲ್ಲೆಯ ಅರಸೀಕೆರೆ ಮತ್ತು ಚನ್ನರಾಯಪಟ್ಟಣ ತಾಲೂಕುಗಳಲ್ಲಿವೆ. ಗಂಗರಿಗೂ–ನೊಳಂಬರಿಗೂ ಉಳನೂರು ಎಂಬಲ್ಲಿ ನಡೆದ ಕದನದಲ್ಲಿ ಅಸಗಯ್ಯನು ಮೃತಪಟ್ಟನು. ರಾಜಾಧಿತ್ಯ ಚೋಳನೂ ಗಂಗರೊಂದಿಗೆ ಸಂಭವಿಸಿದ ಯುದ್ಧವೊಂದರಲ್ಲಿ ಮರಣ ಹೊಂದಿದನು ಎಂದು ಗಂಗ–ನೊಳಂಬ, ಗಂಗ–ಚೋಳರ ನಡುವಣ ಹೋರಾಟದ ಬಗ್ಗೆ ಸಾಕ್ಷಿ ನುಡಿಯುತ್ತದೆ. ನೊಳಂಬ ಮಹೇಂದ್ರನನ್ನು ಯುದ್ಧದಲ್ಲಿ ಕೊಂದು ಮಾರಸಿಂಹನು ನೊಳಂಬಾತಕ ಎಂಬ ಬಿರುದನ್ನು ಪಡೆದನು. ಯುದ್ಧದಲ್ಲಿ ಮಡಿದ ವೀರನ ಮಗನಾದ ಶಂಕರಗೌಡನಿಗೆ ಮಹಾ ಸಾಮಂತ ಬೇಸಯ್ಯನು ಕಲ್ಕಣಿ ನಾಡಿನಲ್ಲಿ ಭೂಮಿ ನೀಡಿದ್ದನ್ನು ಶಾಸನ ಪಾಠದಿಂದ ತಿಳಿದು ಬರುತ್ತದೆ. ಮಾರಸಿಂಹನ ನಂತರ ಸತ್ಯವಾಕ್ಯ ರಾಚಮಲ್ಲ, ನೀತಿ ಮಾರ್ಗ, ಗೋವಿಂದನ ಮತ್ತು ಸತ್ಯವಾಕ್ಯ ಗೋವಿಂದನು ಆಳಿದರು ಎಂದು ಶಾಸನ ತಿಳಿಸುತ್ತದೆ.

ನಾಲ್ಕನೇ ರಾಚಮಲ್ಲ ನಂತರ ಆತನ ಸಹೋದರ ತಕ್ಕಸ ಗಂಗನು ಕ್ರಿ.ಶ. 985ರಲ್ಲಿ ಅಧಿಕಾರಕ್ಕೆ ಬಂದು ಕ್ರಿ.ಶ. 1024ರವರೆಗೆ ಆಳಿದನು. ರಕ್ಸಗಂಗನ ಆಳ್ವಿಕೆಯ ಉತ್ತರಾರ್ಧದಲ್ಲಿ ಚೋಳರ ಮತ್ತು ಕಲ್ಯಾಣದ ಚಾಲುಕ್ಯರ ದಾಳಿಗಳನ್ನು ಎದುರಿಸಬೇಕಾಯಿತು. ಕ್ರಿ.ಶ. 1006ರಲ್ಲಿ ರಾಜೇಂದ್ರ ಚೋಳನು ಗಂಗವಾಡಿಯ ರಾಜಧಾನಿ ತಲಕಾಡನ್ನು ವಶಪಡಿಸಿಕೊಂಡು ಗಂಗರ ಅವನತಿಗೆ ಕಾರಣನಾದನು. ರಕ್ಕಸ ಗಂಗನೂ ಚೋಳರ ಸಾಮಂತರಾಗಿ 1024ರವರೆಗೆ ತನ್ನ ಆಳ್ವಿಕೆಯನ್ನು ಮುಂದುವರಿಸಿದನು.[7] ಶ್ರವಣಬೆಳಗೊಳದಲ್ಲಿ ಗಂಗರ ಕಾಲದ ಅನೇಕ ನಿಶಧಿ ಶಾಸನಗಳಿವೆ. ಗಂಗ ದೊರೆ ದಂಡಿಗನ ಸಮಕ್ಷಮದಲ್ಲಿ ಆಚಾರ್ಯ ಅಧಿಷ್ಟನೇಮಿ ಬಾಹ್ಯಾಭ್ಯಂತರ ಪರಿಗ್ರಹಗಳನ್ನು ತೊರೆದು ಶುಕ್ಲ ಧ್ಯಾನದಲ್ಲಿ ತನ್ಮಯರಾಗಿ ಸಮಾಧಿ ಪಡೆದ ಸಂದರ್ಭದಲ್ಲಿ ಸಿದ್ದರೂ, ವಿದ್ಯಾಧರರಿಂದ ಗೌರವಿಸಲ್ಪಟ್ಟರು ಎಂಬುದು ಸುಮಾರು ಕ್ರಿ.ಶ. 400ರ ಶಾಸನದಿಂದ ತಿಳಿದು ಬರುತ್ತದೆ. ನಂತರ ರಾಷ್ಟ್ರಕೂಟರು ಆಳ್ವಿಕೆ ಪ್ರಾರಂಭಿಸಿದರು.

ಗಂಗ ದೊರೆ ಶ್ರೀಪುರುಷನನ್ನು ಮಣ್ಣೆಯಲ್ಲಿ ಸೋಲಿಸಿ ಅವನ್ನನು ಅಲ್ಲಿಂದ ಓಡಿಸಿದ ರಾಷ್ಟ್ರಕೂಟ ದೊರೆ ಮೊದಲನೆ ಕೃಷ್ಣನು ಗಂಗವಾಡಿಯ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ ಗಂಗವಾಡಿ ಪ್ರಾಂತ್ಯಕ್ಕೆ ತನ್ನ ಕಿರಿಯ ಮಗ ಧ್ರುವ (ದೋರ)ನು ಪ್ರಾಂತ್ಯಪಾಲನಾಗಿ

ನೇಮಿಸಿದನು. ಈ ಧ್ರುವನೇ ಹಾಸನ ಜಿಲ್ಲೆಯ ಹಳೆಬೀಡಿನಲ್ಲಿ ಕೆರೆಯೊಂದನ್ನು ಕಟ್ಟಿಸಿ ತನ್ನ ನೆಲೆಯಾಗಿ ಮಾಡಿಕೊಂಡನು ಅಂದಿನಿಂದ ಅದಕ್ಕೆ ದೋರ ಸಮುದ್ರವೆಂದೇ ಕರೆಯಲಾಯಿತು. ಮುಂದೆ ಧ್ರುವನು ರಾಜನಾದಾಗ ತನ್ನ ಹಿರಿಯ ಮಗ ಕಂಬ ಅಥವಾ ಸ್ಥಂಭನನ್ನು ಗಂಗವಾಡಿಯ ಆಡಳತಾಧಿಕಾರಕ್ಕೆ ನೇಮಿಸಿದನು. ಹೀಗೆ ರಾಷ್ಟ್ರಕೂಟರು ಗಂಗವಾಡಿಗೆ ಸೇರಿದ ಹಾಸನ ಜಿಲ್ಲೆಯ ಕೆಲವೊಂದು ಪ್ರದೇಶಗಳನ್ನು ಆಳ ತೊಡಗಿದರು.

ಕ್ರಿ.ಶ. ೮೦೦ರಲ್ಲಿ ವಲ್ಲಭ ಮಹಾರಾಜಾಧಿರಾಜ (ಧ್ರುವ)ನ ಮಗನಾದ ರಣಾವಲೋಕ ಕಂಬಯ್ಯನು ಆಳುತ್ತಿರುವಾಗ ಮನಸಿಜರಾಜನ ಅರಸಿ ಜಿನವಟ್ಟಿಯು ಖಾಯಿಲೆಬಿದ್ದಾಗ ಮೌನವ್ರತವನ್ನಾಚರಿಸಿ ಮಡಿಯಲು ಇಲ್ಲಿ ಅವನ ಹೆಸರಿನಲ್ಲಿ ಮರಣ ಶಾಸನವನ್ನು ಹಾಕಿಸಲಾಯಿತು. ರಾಷ್ಟ್ರಕೂಟ ಧ್ರುವನ ಮಗನಾದ ಕದಂಬನು ಗಂಗವಾಡಿಯನ್ನಾಳುತ್ತಿದ್ದಾಗ ಈಗಿನ ಕಂಬದ ಹಳ್ಳಿಯಲ್ಲಿ ಬಸದಿ ನಿರ್ಮಿಸಿದ್ದು ಬಸದಿಯ ಮುಂದಿನ ಉನ್ನತ ಮಾನಸ್ತಂಭದಿಂದ ಕಂಬದ ಹಳ್ಳಿಗೆ ಕಂಬನ ಹೆಸರು ಬಂದಿರಬಹುದೇ ಎಂಬುದರ ಬಗ್ಗೆ ಇನ್ನೂ ಸಂಶೋಧನೆ ನಡೆಸಲ್ಲಿದ್ದೇನೆ. [೮]

ರಾಷ್ಟ್ರಕೂಟರನ್ನು ಸೋಲಿಸಿ ರಾಜ್ಯವನ್ನಾಳಿದ ಕಲ್ಯಾಣದ ಚಾಲುಕ್ಯರು ಆಳ್ವಿಕೆಯ ಪ್ರಾರಂಭದಲ್ಲಿ ಪರಮಜಿನ ಭಕ್ತೆ, ಕವಿಚಕ್ರವರ್ತಿ, ಪುನ್ನನ ಪುರಾಣವನ್ನು ಸಾವಿರ ಪ್ರತಿ ಮಾಡಿಸಿ ಹಾಗೂ ಸಾವಿರ ಜಿನ ಬಿಂಬಗಳನ್ನು ಮಾಡಿಸಿ ದಾನ ಮಾಡಿ ದಾನ ಚಿಂತಾಮಣಿ ಎನಿಸಿದ ಕವಿಚಕ್ರವರ್ತಿ ರನ್ನನಿಗೆ ಕಾವ್ಯ ರಚನೆಗಾಗಿ ಪ್ರೋತ್ಸಾಹಿಸಿ ಕವಿ ಕಾಮಧೇನು ಎನಿಸಿದ ಅಜಿತ ಸೇನಾಚಾರ್ಯರ ಶಿಷ್ಯಳಾದ ಅತ್ತಿಮಬ್ಬೆಯು ತನ್ನ ವೃದ್ಧಾಪ್ಯದಲ್ಲಿ ಬಾಹುಬಲಿ ದರ್ಶನಕ್ಕಾಗಿ ಶ್ರವಣಬೆಳಗೊಳಕ್ಕೆ ಬಂದು ಪ್ರಯಾಸದಿಂದ ದೊಡ್ಡ ಬೆಟ್ಟವನ್ನೇರಿ ಬಾಹುಬಲಿ ಮೂರ್ತಿಯನ್ನು ನೋಡಿಕೊಂಡು ಆಚಾರ್ಯ ಅಜಿತಸೇನರ ಪಾದಗಳಿಗೆ ಮಣಿದು ಚಾವುಂಡರಾಯನನ್ನು ಸಂದರ್ಶಿಸಿ ಕೃತಕೃತ್ಯಳಾದಳು. ಗಂಗರ ನಂತರ ಪ್ರಾಚೀನ ಆಳುಪದ ಶಾಖಾ ಮನಿತನದವರಾದ ಕೊಂಗಾಳ್ವರು ಚೋಳರ ಅಧೀನತೆಯಲ್ಲಿ ಹಾಸನ ಜಿಲ್ಲೆಯ ಹಲವು ಭಾಗಗಳಲ್ಲಿ ಆಳ್ವಿಕೆ ನಡೆಸಿರುತ್ತಾರೆ. ಕ್ರಿ.ಶ. 11 ಮತ್ತು 12ನೇ ಶತಮಾನದಲ್ಲಿ ಆಳಿದರು. ರಾಜ ರಾಜ ಚೋಳನು ಚೆಂಗಾಳ್ವರ ಮೇಲೆ ಕೈಗೊಂಡ ಯುದ್ಧದಲ್ಲಿ ತೋರಿದ ಶೌರ್ಯಕ್ಕಾಗಿ ಪಂಚಮ ಮಹಾರಾಯನಿಗೆ ಕ್ಷತ್ರಿಯ ಶಿಖಾಮಣಿ ಎಂಬ ಬಿರುದನ್ನು ವೆಂಗಿಮಂಡಲ ಚೋಳ ಮಂಡಲದ ಮಹಾದಂಡ ನಾಯಕ ಪದವಿಗಳನ್ನು ನೀಡಿದನು ಪೃಥ್ವೀಮಹಾರಾಜ ಕೊಂಗಾಳ್ವನು ಹೊಯ್ಸಳ ನೃಪಕಾಮನೊಡನೆ ಸೆಣಸಿದನು, ಮಣ್ಣಿಯ ಕದನದಲ್ಲಿ ವಿಜಯಶಾಲಿಯಾದನು, ನಂತರ ಕಲ್ಯಾಣ ಚಾಲುಕ್ಯದೊರೆ ಆರನೇ ವಿಕ್ರಮಾದಿತ್ಯನು ಕೊಂಗಾಳ್ವರ ಮೇಲೆ ಯುದ್ಧಕ್ಕಾಗಿ

ತನ್ನ ಸೇನಾನಿ ಮಲ್ಲಿದೇವನನ್ನು ಕಳುಹಿಸಿದನು. ಮಲ್ಲಿದೇವನು ಕೊಂಗಾಳ್ವನ ನಂತರ ರಾಜೇಂದ್ರ ಪೃಥ್ವಿಕೊಂಗಾಳ್ವ ದೇವಡರಾದಿತ್ಯ ಅಥವಾ ತ್ರಿಭುವನ ಮಲ್ಲಚೋಳ ಕೊಂಗಾಳ್ವನು ಕ್ರಿ.ಶ. 1066 ರಿಂದ 1100 ರವರೆಗೆ ಆಳಿದನು. ಇವನು ಚೆಂಗಾಳ್ವರನ್ನು, ಕದಂಬರನ್ನು ಸೋಲಿಸಿದನು.

ದುದ್ದಮಲ್ಲರಸ ಕೊಂಗಾಳ್ವನು ಹೆನ್ನಗಂಡಂಗದಲ್ಲಿದ್ದಾಗ ಏಬವಳ್ಳಿ ಗ್ರಾಮವನ್ನು ಪ್ರಂಭಾಚಂದ್ರ ದೇವರಿಗೆ ಜಿನಾಲಯದ ನಿರ್ಮಾಣ ಮತ್ತು ಜೀರ್ಣೋದ್ಧಾರಕ್ಕಾಗಿ ನೀಡಿದನು. ಹಾಸನ ಶಾಸನಗಳು ತ್ರಿಭುವನಮಲ್ಲ ಚೋಳ ಕೊಂಗಾಳ್ವನು ಜೈನನಾಗಿದ್ದನೆಂದು ತಿಳಿಸುತ್ತದೆ. ವಿಷ್ಣುವರ್ಧನನು ಕೊಂಗಾಳ್ವ ರಾಜಕುಮಾರಿ ಚಂಡಲದೇವಿಯನ್ನು ಕ್ರಿ.ಶ. 1115-16ರಲ್ಲಿ ವಿವಾಹವಾದನು. ಇದರಿಂದ ಕೊಂಗಾಳ್ವರು ಹೊಯ್ಸಳ ಸಾಮಂತರಾದರು. ಶಾಸನಗಳಲ್ಲಿ ವೀರಚೋಳ ಕೊಂಗಾಳ್ವ ದೊರೆ ಮಹಾಮಂಡಲೇಶ್ವರನೆಂದು ಕರೆದಿದೆ. ಕ್ರಿ.ಶ. 1150ರಲ್ಲಿ ಕೊಂಗಾಳ್ವರು ಚೆಂಗಾಳ್ವರನ್ನು ಸೋಲಿಸಿದರು. ಕೊನೆಯ ಕೊಂಗಾಳ್ವ ದೊರೆ ತ್ರಿಭುವನ ವೀರ ದೊಡ್ಡ ಕೊಂಗಾಳ್ವ ದೇವನು ಕ್ರಿ.ಶ. 1171 ರಿಂದ 1177ರಲ್ಲಿ ಆಳಿದನು. ಅಧಿಕಾರಕ್ಕೆ ಬಂದ ಕೂಡಲೇ ಸ್ವತಂತ್ರನಾಗಲು ಹವಣಿಸಿ ಹೊಯ್ಸಳರ ವಿರುದ್ಧ ದಂಗಯೆದ್ದನು. ಆದರೆ ಹೊಯ್ಸಳರಿಗೆ ಪುನಃ ಮಣಿಯಬೇಕಾಯಿತು ಹಾಗೂ ಹೀಗೂ ಕೊಂಗಾಳ್ವರು 12ನೆಯ ಶತಮಾನದವರೆಗೂ ತಮ್ಮ ಆಳ್ವಿಕೆಯನ್ನು ಮುಂದುವರೆಸಿದರು.

ಇನ್ನೂರು ವರ್ಷಗಳ ಕಳೆದ ಮೇಲೆ ಪುನಃ ನಂತರದ ಚೆಂಗಾಳ್ವರು ವಿಜಯನಗರದ ಅರಸರ ಅಧೀನತೆಯಲ್ಲಿ ಆಳಿದರು. ಹೀಗೆ ಹಾಸನ ಜಿಲ್ಲೆಯು ಕ್ರಿ.ಶ.ಪೂರ್ವ ಸುಮಾರು 3ನೇ ಶತಮಾನದಿಂದ 13ನೇ ಶತಮಾನದವರೆಗೆ ಸಾವಿರದಿನ್ನೂರು ವರ್ಷಗಳಲ್ಲಿ ಮೌರ್ಯ, ಶಾತವಾಹನ, ಕದಂಬ, ಗಂಗ, ರಾಷ್ಟ್ರಕೂಟ, ಚೋಳ, ಕೊಂಗಾಳ್ವ, ಚೆಂಗಾಳ್ವ ಮತ್ತು ನಾಡಾಳ್ವ ವಂಶಗಳ ಅರಸರ ಆಳ್ವಿಕೆಗೆ ಒಳಪಟ್ಟಿದ್ದಿತು. ವಿಜಯನಗರದ ಅರಸರ ಕಾಲದಲ್ಲಿ ಶ್ರವಣಬೆಳಗೊಳ ಪ್ರಮುಖ ಜೈನ ಧಾರ್ಮಿಕ ಕೇಂದ್ರವಾಗಿತ್ತು. ಇದನ್ನು ಒಳಗೊಂಡಂತೆ ಸುತ್ತಮುತ್ತಲಿನ ಪ್ರದೇಶದಲ್ಲಿ ವಿಜಯನಗರದ ಕಾಲದಲ್ಲಿ ಮಹತ್ವದ ಬೆಳವಣಿಗೆಗಳು ಸಂಭವಿಸಿವೆ. ಇಲ್ಲಿನ ಶಾಸನಗಳು ಅಂದಿನ ಕಾಲದ ಇತಿಹಾಸ ಮತ್ತು ಸಾಂಸ್ಕೃತಿಕ ಬದುಕಿನ ಬಗ್ಗೆ ಅಪರೂಪದ ಮಾಹಿತಿಯನ್ನು ತಿಳಿಸುತ್ತದೆ. ನನ್ನ ಸಂಶೋಧನೆಗೆ ಪೂರಕವಾಗಿ ಚೆನ್ನರಾಯಪಟ್ಟಣ ತಾಲೂಕನ್ನು ಭೌಗೋಳಿಕ ಮಿತಿಯನ್ನಾಗಿ ಮಾಡಿಕೊಂಡು ಅಂದಿನ ಕಾಲದ ಮತ್ತು ಪ್ರಸ್ತುತ ಇರುವ ವ್ಯವಸ್ಥೆಯನ್ನು ಅಧ್ಯಯನವನ್ನು ಮಾಡಲಾಗಿರುತ್ತದೆ. ಶ್ರವಣಬೆಳಗೊಳದ ಅಕ್ಕನ ಬಸದಿಯಲ್ಲಿ ಅದರ ಪೂರ್ವ ಮತ್ತು ದಕ್ಷಿಣದ ಗೋಡೆಗಳ ಮೇಲೆ

ಒಂದೊಂದು ಶಾಸನಗಳಿವೆ. ಇವುಗಳು ಅಂದಿನ ಮಹತ್ವದ ಅಂಶವನ್ನು ತಿಳಿಸುತ್ತದೆ. ವಿಜಯನಗರದ ಅರಸ ದೇವರಾಯನ ರಾಣಿ ಭೀಮಾದೇವಿಯು ಶ್ರವಣಬೆಳಗೊಳದ ಮಂಗಾಯಿ ಬಸದಿಯಲ್ಲಿ ಶಾಂತಿನಾಥ ತೀರ್ಥಂಕರನ ಪ್ರತಿಮೆಯನ್ನು ನಿರ್ಮಿಸಿದಳು ಎಂಬ ವಿಚಾರ ತಿಳಿದು ಬರುತ್ತದೆ. ಅದರ ಶಿಲ್ಪ ಪರಿಪೂರ್ಣ ವಿಚಾರವನ್ನು ನನ್ನ ಸಂಶೋಧನೆಯಲ್ಲಿ ತಿಳಿಸಲಾಗುತ್ತದೆ.

ಇರುಗಪ್ಪ ದಂಡನಾಥ ಇಮ್ಮಡಿ ದೇವರಾಯನ ಪ್ರಮುಖ ಮಂತ್ರಿಗಳಲ್ಲೊಬ್ಬ ಇದನು ಬಾಹುಬಲಿಗಾಗಿ ತೋಡ ಮತ್ತು ತಟಾಕವನ್ನು ಕ್ರಿ.ಶ. 1422ರಲ್ಲಿ ನಿರ್ಮಿಸಿರುವುದರ ಮಾಹಿತಿ ತಿಳಿದುಬರುತ್ತದೆ. ಇದರ ವ್ಯವಸ್ಥೆಯಾದ ರೀತಿ ಇದೆ ಎಂಬುದರ ಬಳಿ ಅಧ್ಯಯನವನ್ನು ನಡೆಸಲಾಗುತ್ತದೆ. ನುಗ್ಗೇಹಳ್ಳಿ ಅಥವಾ ವೀರಸೋಮನಾಥಪುರದ ಆಡಳಿತವನ್ನು ಇಮ್ಮಡಿ ದೇವರಾಯನ ಅಧಿಕಾರಿಗಳಾದ ಕಳಗೆಯ ಗುಂಡಪ್ಪನಾಯಕ ಮತ್ತು ಅಮರೇಯ ನಾಯಕರು ನಿರ್ವಹಿಸುತ್ತಿದ್ದಾಗ ಅವರ ಮನೆಯ ಅಧಿಕಾರಿ ಆಗಿದ್ದವನು, ಎಲಹಂಕನಾಡ ಪ್ರಭು ಜಾಲದ ಭೀಮ ಸೆಟ್ಟಿಯ ಮಗ ಚಿಕ್ಕ ಭೀಮಣ್ಣ ಇವನು ಅಲ್ಲಿನ ಮಹಾಜನಗಳ ಜೊತೆಗೂಡಿ ಕ್ರಿ.ಶ. 1432ರಲ್ಲಿ ಸದಾಶಿವ ದೇವರ ಸಂಪ್ರೋಕ್ಷಣೆಯನ್ನು ಮಾಡಿಸಿದರ ಬಗ್ಗೆ ತಿಳಿದು ಬರುತ್ತದೆ. [೨]. ಇದೇ ಅಧಿಕಾರಿ ಎರಡು ವರ್ಷದ ನಂತರ ನುಗ್ಗೇಹಳ್ಳಿಯ ಪ್ರಸನ್ನ ಕೇಶವ ನರಸಿಂಹ ಮತ್ತು ಗೋಪಾಲ ದೇವನ ಪೂಜೆಯನ್ನು ನೆರವೇರಿಸಿದರುವ ಬಗ್ಗೆ ತಿಳಿದುಬರುತ್ತದೆ. ವಿಜಯನಗರದ ಅರಸ ವಿರುಪಾಕ್ಷನ ಅಮರನಾಯಕನಾದ ಸೋಮಣ್ಣ ಒಡೆಯನ ಅನುಜ್ಞಿಯ ಮೇರೆಗೆ ಅಮೃತಾಪುರ ಅಥವಾ ಕೊಳತೂರಿನ ಪ್ರಸನ್ನ ಕೇಶವ ದೇವಾಲಯದ ಮುಂದಿರುವ ಗೋಪುರವನ್ನು ಕ್ರಿ.ಶ. 1478ರಲ್ಲಿ ನಿರ್ಮಿಸಿದ ಇಂದು ಗೋಪುರ ಉಳಿದಿಲ್ಲ.

ಆದರೆ ಕೆಳಭಾಗ ದುಸ್ಥಿತಿಯಲ್ಲಿದೆ. ಬೊಮ್ಮೆಯ ನಾಯಕನು ಇದೇ ಸಮಯದಲ್ಲಿ ಪ್ರಸನ್ನ ದೇವರ ಸೇವೆಗಾಗಿ ಹಾಗೂ ಬ್ರಾಹ್ಮಣರ ಭೋಜನಕ್ಕಾಗಿ ಭೂದಾನವನ್ನು ಮಾಡಿದ ಬಗ್ಗೆ ತಿಳಿದು ಬರುತ್ತದ.ಎ ಕೊಳತ್ತೂರು ಇಂದಿನ ಚನ್ನರಾಯಪಟ್ಟಣವಾಗಿದೆ. ಹದಿನಾರನೇ ಶತಮಾನದ ವೇಳೆಗೆ ಈ ಗ್ರಾಮಕ್ಕೆ ಚೆನ್ನರಾಯಪಟ್ಟಣ ಎಂಬ ಹೆಸರು ಪ್ರಾಪ್ತವಾಯಿತು. ಜಂಬೂರಿನ ಜಕ್ಕೇಶ್ವರ ದೇವಾಲಯ ಹದಿನಾಲ್ಕನೇಯ ಶತಮಾನದಲ್ಲಿ ವಿಜಯನಗರ ಶೈಲಿಯಲ್ಲಿ ರಚನೆಯಾದ ವಾಸ್ತುಕೃತಿ ಚನ್ನರಾಯಪಟ್ಟಣದಲ್ಲಿ ದೊರೆತಿರುವ ಕೃಷ್ಣದೇವರಾಯನ ಕಾಲದ ತಾಮ್ರಪಟವು ವಿದ್ವಾಂಸರೊಬ್ಬರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ವಿಜಯನಗರದ ಅರಸರು ಮತ್ತು ಅವರ ಅಧಿಕಾರಿಗಳು ಅಷ್ಟೇ ಅಲ್ಲದೆ ಅವರ ಮಾಂಡಲೀಕರು ಅನೇಕ ಜನಹಿತ ಕಾರ್ಯಗಳನ್ನು ನಡೆಸಿದ್ದಾರೆ. ಶ್ರವಣಬೆಳಗೊಳದ ಭಂಡಾರದ

ಬಸದಿಯಲ್ಲಿರುವ ಶಾಸನವು ಅಲ್ಲಿರುವ ಸರಸ್ವತಿ ಮಂಟಪದ ಜೀರ್ಣೋದ್ಧಾರ ಕ್ರಿ.ಶ. 1526ರಲ್ಲಿ ನಡೆದ ಬಗ್ಗೆ ತಿಳಿದುಬರುತ್ತದೆ.

ನುಗ್ಗೇಹಳ್ಳಿ ಪ್ರಭುದೇವ ತಿಮ್ಮರಾಜ ಮತ್ತು ವಿರುಪಾಂಬಿಕರ ಪುತ್ರರಾದ ನೃಪನು ನುಗ್ಗೇಹಳ್ಳಿಯ ತಿರುವೆಂಗಳನಾಥ ದೇವಾಲಯವನ್ನು ಹದಿನಾರನೇ ಶತಮಾನದಲ್ಲಿ ನಿರ್ಮಿಸಿ ಕಟ್ಟಿಗಹಳ್ಳಿಯನ್ನು ದಾನವಾಗಿ ನೀಡಿದ ಬಗ್ಗೆ ತಿಳಿದುಬರುತ್ತದೆ. ಶ್ರವಣಬೆಳಗೊಳ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ವಿಜಯನಗರ ಕಾಲದ ಶಾಸನಗಳ ದೇವಾಲಯಗಳು ಶಿಲ್ಪಗಳು ಸಾಂಸ್ಕೃತಿಕ ಪರಂಪರೆಯ ಬಗ್ಗೆ ಮಾಹಿತಿ ನೀಡುವುದರ ಜೊತೆಗೆ ವಿಜಯನಗರದ ರಾಜಕೀಯ ಇತಿಹಾಸದ ಬಗೆ ಬೆಳಕು ಚೆಲ್ಲುತ್ತದೆ. ಈ ಹಿನ್ನಲೆಯಿಂದ ಚನ್ನರಾಯಪಟ್ಟಣ ತಾಲೂಕಿನಲ್ಲಿ ವಿಜಯನಗರ ಸಾಮ್ರಾಜ್ಯದ ಮೂಲದ ಬಗ್ಗೆ ಪುನರ್ ಚಿಂತನೆಯ ಮೂಲಕ ಸಾಂಸ್ಕೃತಿಕ ಇತಿಹಾಸವನ್ನು ರಚಿಸಲಾಗಿರುತ್ತದೆ. ಕ್ರಿ.ಶ. 1642ರ ವೇಳೆಗೆ ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲೂಕಿನ ಭಾಗಗಳು ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ. 1642ರ ಚನ್ನರಾಯಪಟ್ಟಣ ತಾಲೂಕಿನ ಶಾಸನ ಒಂದರಲ್ಲಿ ಮೈಸೂರಿನ ಕಂಠೀರವ ನರಸರಾಜ ಒಡೆಯನ ಆಳ್ವಿಕೆಯ ಕಾಲದಲ್ಲಿ ಚೆನ್ನರಾಯಪಟ್ಟಣ ಸ್ಥಳದ ತುಂಗಣಿನಾಡ ಸೀಮೆಯ ಕಾನಕಾರಹಳ್ಳಿಯ ಪ್ರಭು ಆಲೂರ ಭೀ ಎಂಬ ಉಲ್ಲೇಖ ಇದೆ. ಅದೇ ಪ್ರಭುಗಳಾದ ಚೆನ್ನ ವೀರಯ್ಯಗೌಡರ ಕುಮಾರ ದೊಡ್ಡಯ್ಯ ಅವರ ಮಗ ಬಸವಯ್ಯ ಅವರುಗಳನ್ನು ಉಲ್ಲೇಖಿಸುವ ಶಾಸನಗಳು ಕಂಡು ಬರುತ್ತವೆ. ಕ್ರಿ.ಶ. 1647ರಲ್ಲಿ ದೊಡ್ಡಯ್ಯನು ಚೆನ್ನರಾಯಪಟ್ಟಣದಲ್ಲಿ ಕಲ್ಲಿಕೋಟೆಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ.

ಕಾನಕಾರನಹಳ್ಳಿಯ ಪ್ರಭು ಮೈಸೂರು ಕಂಠೀರವ ನರಸರಾಜ ಒಡೆಯನ ಒಬ್ಬ ಅಧಿಕಾರಿಯಾಗಿ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣದ ಆಳ್ವಿಕೆಯಲ್ಲಿ ಪಾಲುದಾರನಾಗಿದ್ದನೆಂದು ತಿಳಿದುಬರುತ್ತದೆ. ಈತನು ಮೂಲತಃ ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿಯ (ಕನಕಪುರ) ಪ್ರಭುವಾಗಿದ್ದನು. ಇವರ ಶಾಸನಗಳಲ್ಲಿ ಮೈಸೂರು ರಾಜ್ಯ, ಮೈಸೂರು ಸೀಮೆ, ಚೆನ್ನರಾಯಪಟ್ಟಣದ ಸೀಮೆ, ಬಾಣಾವರದ ಸೀಮೆ, ಬಾಣವರದ ರಾಜ್ಯ, ಕೊಣನೂರು ನಾಡು ಎಂಬ ಹಲವು ಸ್ತರದ ಆಡಳಿತ ಘಟಕಗಳ ಉಲ್ಲೇಖಗಳು ಕಂಡು ಬರುತ್ತದೆ. ಅಲ್ಲದೆ ಮೈಸೂರು ನಗರದ ಹೋಬಳಿ ವಿಚಾರದ ಚಾವಡಿವಳಿತ ಆಚರಣೆ ಹೋಬಳಿ ಹೆರಗಿನ ಹೋಬಳಿ ಹಾಸನದ ಸ್ಥಳ, ಕೊಣನೂರು ಸಥಳ, ಬಳನಾಡ ಸ್ಥಳ ಹಾಗೂ ನರಸೀಪುರ ತಾಲೂಕು ಎಂಬುವ ಆಡಳಿತ ಘಟಕಗಳ ಉಲ್ಲೇಖಗಳು ಮೈಸೂರು ಅರಸರ ಆಳ್ವಕೆಯ ಶಾಸನಗಳಲ್ಲಿ ಬಂದಿವೆ. ಒಟ್ಟಾರೆ ಹಾಸನ ಜಿಲ್ಲೆ ಪ್ರದೇಶದಲ್ಲಿ ಶಾಸನಗಳಲ್ಲಿ ಉಕ್ತವಾಗಿರುವ ಪ್ರಾಚೀನ ಕಾಲದಿಂದ ಮೈಸೂರು

ಅರಸರ ಕಾಲದವರೆಗಿನ ಪ್ರಾದೇಶಿಕ ಇತಿಹಾಸವನ್ನು ಸಾಂಸ್ಕೃತಿಕ ಅಧ್ಯಯನ ರೂಪದಲ್ಲಿ ನೀಡಲಾಗಿದೆ.

ಹೈದರ್‌ಆಲಿ, ಟಿಪ್ಪು ಸುಲ್ತಾನ್ ಆಡಳಿತ ನಡೆಸಿದರು, 1802ರಲ್ಲಿ ಐಗೂರಿನ ರಾಜನನ್ನು ಬ್ರಿಟಿಷರು ಗಲ್ಲಿಗೇರಿಸಿದರು, ನಂತರ ಮೈಸೂರು ಸಂಸ್ಥಾನದ ಒಂದು ಭಾಗವಾಯಿತು. ಬಡವರ ಊಟಿ ಸಿಂಹಾಸನಪುರ ಎಂದು ಪ್ರಸಿದ್ಧವಾಗಿರುವ ಜಿಲ್ಲೆ, ರಾಜ್ಯ, ರಾಷ್ಟ್ರ, ಅಂತರ ರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿಗಳ ತಾಣಗಳಾಗಿ ಜನಪ್ರಿಯಗೊಂಡಿರುವ ಪ್ರಮುಖ ಸ್ಥಳಗಳಿವೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಆಯಾ ಧರ್ಮದ ಬಗ್ಗೆ ಮಾಹಿತ ಇದೆ. ಪ್ರಮುಖವಾಗಿ ಶೈವ, ವೈಷ್ಣವ, ಜೈನ ಮುಸ್ಲಿಂ, ಧರ್ಮಗಳು ಕಂಡು ಬರುವುದುಂಟು. ಪ್ರಮುಖವಾಗಿ ನುಗ್ಗೇಹಳ್ಳಿಯಲ್ಲಿ ಶೈವ, ವೈಷ್ಣವ ದೇವಾಲಯಗಳಿವೆ. ಶ್ರವಣಬೆಳಗೊಳ ಪ್ರಮುಖ ಜೈನ ನೆಲೆಯಾಗಿದೆ. ಚನ್ನರಾಯಪಟ್ಟಣದಲ್ಲಿ ಶೈವ ಧರ್ಮವು ದೇವಾಲಯಗಳ ನಿರ್ಮಾಣ ಮತ್ತು ನಿರ್ವಹಣೆ ಅಪಾರವಾಗಿ ಶ್ರಮಿಸಿದೆ. ಈ ಧರ್ಮ ಭಾರತದಲ್ಲಿ ಸಿಂಧೂ ಬಯಲಿನ ಸಂಸ್ಕೃತಿ ಕಾಲದಿಂದಲೂ ಹಲವು ದೇವತೆಗಳಿಗೂ ರೂಪುಗೊಂಡಿರುವುದು ತಿಳಿದು ಬಂದಿದೆ. ರುದ್ರ, ಶಿವ, ವಿಷ್ಣು ಇವರಲ್ಲದೆ ಪುರಾಣಗಳ ಮೂಲಕವೂ ಹಲವಾರು ದೇವತೆಗಳು ವ್ಯಕ್ತರಾಗಿದ್ದಾರೆ. ಪ್ರಪಂಚದ ಲಯಕರ್ತನೇ ಶಿವ ಎಂದು ಭಾರತೀಯರ ನಂಬಿಕೆ. ಶಿವನನ್ನು ಪಶುಪತಿಯಾಗಿ ಕಪಾಲಿಯಾಗಿ ತಾಂಡವಮೂರ್ತಿಯಾಗಿ ನಟರಾಜ ರುದ್ರನಾಗಿ ಪೂಜಿಸುತ್ತಾ ಅದಕ್ಕೆ ತಕ್ಕಂತೆ ಅವನನ್ನು ಅನುಸರಿಸಿದರೆ ಪಾಶುಪತರು, ಕಪಾಲಿಕರು ಎಂದರೆ ತಪ್ಪಾಗಲಾರದು. ವೈದಿಕ ತತ್ವಗಳನ್ನು ಬಿಡದೆಯೇ ದೇವಾಲಯಗಳು ಬೆಳೆಯಲು ಶೈವ ಧರ್ಮವು ಅತಿ ಹೆಚ್ಚಿನ ನೆರವು ನೀಡಿದೆ. ದೇವಾಲಯಗಳು ವಿದ್ಯಾಸ್ಥಾನಗಳಾಗಿ ಅನ್ನದಾನ ಸ್ಥಾನಗಳಾಗಿ ವಿಸ್ತಾರಗೊಳ್ಳಲು ಶೈವ ಧರ್ಮದ ಕೊಡುಗೆ ಅಪಾರವಾಗಿದೆ. ಈ ಹಿನ್ನೆಲೆಯಿಂದ ಇಲ್ಲಿ ಕಂಡು ಬರುವ ಶೈವ ದೇವಾಲಯಗಳ ಹಿನ್ನೆಲೆಯಲ್ಲಿ ಧರ್ಮವನ್ನು ಪರಿಚಯಿಸುವ ಕೆಲಸವನ್ನು ಮಾಡಲಾಗಿರುತ್ತದೆ. ಆದೇ ರೀತಿ ಈ ಭಾಗದಲ್ಲಿ ವೈಷ್ಣವ ಧರ್ಮವು ಕ್ರಿ.ಶ. 11ನೇ ಶತಮಾನದಲ್ಲಿ ಪ್ರಮುಖವಾಗಿ ಬೆಳೆಯತೊಡಗಿತು. ಪ್ರಾಚೀನ ಇತಿಹಾಸವುಳ್ಳ ಪಂಥವೆಂದರೆ ವೈಷ್ಣವ ಪಂಥ, ಕರ್ನಾಟಕದಲ್ಲಿ ಹರಿ ಹಾಘೂ ಹರನನ್ನು ಒಂದೇ ಮೂರ್ತಿಯಲ್ಲಿ ಏಕೀಕರಿಸುವ ಶಿಲ್ಪಗಳ ನಿರ್ಮಾಣ ಪ್ರಾರಂಭವಾಯಿತು. ಕರ್ನಾಟಕದ ದಕ್ಷಿಣ ಭಾಗದಲ್ಲಿ ವೈಷ್ಣವ ಮತ ಅದರಲ್ಲಿಯೂ ವಿಶೇಷವಾಗಿ ರಾಮಾನುಜರು ಪ್ರತಿಪಾದಿಸಿದ ವಿಶಿಷ್ಟದ್ವೈತ ಪಂಥವು ನೆಲೆಯನ್ನು ಕಂಡು ವೈಷ್ಣವ ಧರ್ಮ ಮತ್ತು ದೇವಾಲಯಗಳು ನಿರ್ಮಾಣಗೊಂಡಿವೆ. ವಿಷ್ಣುವನ್ನು ಮಾತ್ರ ದೇವರೆಂದು ಒಪ್ಪಿ ನಡೆದ ಭಕ್ತ ಸಂಕುಲವನ್ನು ವೈಷ್ಣವ ಧರ್ಮ ಎಂದು ಹೆಸರು, ಜನಪ್ರಿಯ ದೇವನಾದ ಕೃಷ್ಣನನ್ನು ವಿಷ್ಣುವಿನೊಂದಿಗೆ ಸಮೀಕರಿಸುವುದರಿಂದ ವೈಷ್ಣವ ಪಂಥ ಭಾರತದಲ್ಲಿ ಬೆಳೆಯ ತೊಡಗಿತು.

ಜೈನ ಧರ್ಮವು ಚನ್ನರಾಯಪಟ್ಟಣ ತಾಲೂಕಿನಲ್ಲಿ ಕಂಡು ಬರುತ್ತದೆ. ಶ್ರವಣಬೆಳಗೊಳ ಪ್ರಾಚೀನ ಕಾಲದಿಂದಲೂ ಜೈನರ ಬಹುಮುಖ್ಯ ಕೇಂದ್ರವಾಗಿದ್ದು ಇದು ಅಧರ್ಮಿಯರಿಗೆ ಮಾತ್ರವೇ ಪವಿತ್ರ ಮಾತ್ರಾ ಕೇಂದ್ರವಾಗಿದೆ. ಎಲ್ಲ ಧರ್ಮೀಯರನ್ನು ತನ್ನತ್ತಾ ಸೆಳೆಯುವ ಒಂದು ಪ್ರವಾಸಿ ತಾಣವಾಗಿದೆ. ಶ್ರವಣಬೆಳಗೊಳದ ಪ್ರಮುಖ ಆಕರ್ಷಣೆ ಎಂದರೆ ಗಂಗರ ಕಾಲದಲ್ಲಿ ಕೆತ್ತಲ್ಪಟ್ಟಿರುವ ವಿಶ್ವವಿಖ್ಯಾತ ಬಾಹುಬಲಿಯ ವಿಗ್ರಹ ಆರಂಭದ ಅರಸರ ಕಾಲದಲ್ಲಿ ಅಂದರೆ ವಿಷ್ಣುವಿರ್ಧನನ ಆಳ್ವಿಕೆಯವರೆಗೂ ಶ್ರವಣಬೆಳಗೊಳದಲ್ಲಿ ವಾಸ್ತುಶಿಲ್ಪ ಅಷ್ಟಾಗಿ ಪ್ರಗತಿ ಕಂಡಿರಲಿಲ್ಲ. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಿಸಲ್ಪಟ್ಟ ಸ್ಮಾರಕಗಳು ಕಂಡು ಬರುತ್ತದೆ. 43 ಜೈನ ವಿಗ್ರಹಗಳಿವೆ. ಚನ್ನರಾಯಪಟ್ಟಣ ತಾಲೂಕಿನ ಪ್ರಮುಖ ನೆಲೆಗಳಲ್ಲಿ ಜೈನ ಧರ್ಮಕ್ಕೆ ಪೂರಕವಾದ ಬಸದಿಗಳು ಕಂಡು ಬರುತ್ತವೆ. ಅವುಗಳ ಒಂದು ಸಮಗ್ರ ನೆಲೆಗಳಲ್ಲಿ ಜೈನ ಧರ್ಮಕ್ಕೆ ಪೂರಕವಾದ ಬಸದಿಗಳು ಕಂಡುಬರುತ್ತವೆ. ಅವುಗಳ ಒಂದು ಸಮಗ್ರ ಚಿತ್ರಣವನ್ನು ಈ ಸಂಶೋಧನೆಯಲ್ಲಿ ತಿಳಿಸಲಾಗಿರುತ್ತದೆ. ಅಂದರೆ ಈ ಧರ್ಮದ ಮೂಲ ಉದ್ದೇಶವೇನೆಂದರೆ ಅಹಿಂಸೆಯಿಂದ ಸುಖ, ತ್ಯಾಗದಿಂದ ಶಾಂತಿ ಪ್ರಗತಿ ಧ್ಯಾನದಿಂದ ಸಿದ್ಧಿ ಎಂಬ ವಿಶ್ವಶಾಂತಿ ಮಹಾಮಂತ್ರವು ಮಾನವರ ಕುಲಕ್ಕೆ ಸಾರಿದ ಮತ್ತು ಸಾರುತ್ತಿರುವ ಶ್ರವಣಬೆಳಗೊಳದ ಇತಿಹಾಸವನ್ನು ಈ ಸಂಶೋಧನೆಯಲ್ಲಿ ತಿಳಿಸಲಾಗಿರುತ್ತದೆ.

ಇಸ್ಲಾಂ ಧರ್ಮ ಇದು ಸಹ ಚನ್ನರಾಯಪಟ್ಟಣ ತಾಲೂಕಿನಲ್ಲಿದೆ. ಇದು ಅರಬ್ ದೇಶವನ್ನು ಕ್ರಿ.ಶ. 7ನೇಯ ಶತಮಾನದಲ್ಲಿ ಉಗಮವಾದ ಧರ್ಮ, ಮಲ್ಲಿಕಾಫ್‌ರನ ದಂಡೆಯಾತ್ರೆ ಮತ್ತು ಬಹುಮನಿ ಸಾಮ್ರಾಜ್ಯದ ಸ್ಥಾಪನೆಯಿಂದಾಗಿ ದಕ್ಷಿಣ ಭಾರತದಲ್ಲಿ ಈ ಧರ್ಮ ಬೇಗ ಪ್ರಸಾರವಾಗ ತೊಡಗಿತು. ಮುಂದೆ ವಿವಿಧ ಮುಸಲ್ಮಾನ ದೊರೆಗಳ ಆಶ್ರಯದಲ್ಲಿ ಅನುಯಾಯಿಗಳು ಹೆಚ್ಚಿದರು. ಇದರಲ್ಲಿ ಷಿಯಾ ಮತ್ತು ಸುನ್ನಿ ಎಂಬ ಎರಡು ಮುಖ್ಯ ಜಾತಿಗಳಿವೆ. ಪೈಗಂಬರರ ನಾಯಕತ್ವದ ಅನುಯಾಯಿಗಳು ಸುನ್ನಿಗಳು, ಅವರ ಸಂತಾನದಲ್ಲೇ ಇನ್ನೊಂದು ನಾಯಕತ್ವವನ್ನು ಅನುಸರಿಸಿದರು. ಷಿಯಾಗಳು ಹಾಸನ ಜಿಲ್ಲೆಯ ಹಲವು ತಾಲೂಕುಗಳಲ್ಲಿ ಎರಡೂ ಮಾರ್ಗಗಳ ಅನುಯಾಯಿಗಳಾಗಿದ್ದಾರೆ. ಮಠ, ಆಶ್ರಯ ಪದ್ಧತಿಗೆ ಸಂವಾಧಿಯಾಗಿ ಈ ಧರ್ಮದಲ್ಲಿ ಬಾಬಾ ಎಂಬುದಿದೆ.

ಇದರ ಮುಖಂಡರು ಝಲೀಫಾಗಳು, ಇವರು ಅಧ್ಯಾತ್ಮವನ್ನು ಬೋಧಿಸುವಂತವರು. ಸಮಾಜಗಿಂತ ಅಂತರಂಗ ಶುದ್ಧಿ ಮುಖ್ಯ ಅಹಂಕಾರವನ್ನು ತೊರೆಯಬೇಕು. ತಾನೇ ಸಮಾಜ ಎಂದು ತಿಳಿದು ಜನಸೇವೆ ಮಾಡಬೇಕು ಎಂಬುದು ಇವರ ಬೋಧನೆ. ಇಂಥ ಬಾನ್‌ಬಾಗಳು ಈಗಲು ಮುಂಫೇರ್, ಅಜ್ಮೀರ್, ಅಲಹಾಬಾದ್ ಮೊದಲಾದೆಡೆ ಇದೆ. ಹಾಸನ ಜಿಲ್ಲೆಯಲ್ಲೂ

ಹಿಂದೆ ಇಂಥ ಜಾನ್‌ಬಾಗಳು ಇದ್ದವು ಎಂಬುದು ತಿಳಿದುಬರುತ್ತದೆ. ಇವುಗಳ ಬಗ್ಗೆ ಅಧ್ಯಯನದಲ್ಲಿ ತಿಳಿಸಲಾಗಿದೆ. ಈ ಜಿಲ್ಲೆಯಲ್ಲಿ ಕ್ರೈಸ್ತ ಧರ್ಮ ಮತ್ತು ವೀರಶೈವ ಧರ್ಮವು ಕಂಡು ಬರುತ್ತದೆ. ಇವುಗಲನ್ನು ಸಹ ಸಂಶೋಧನಾ ಅಧ್ಯಯನದಲ್ಲಿ ಚರ್ಚಿಸಲಾಗಿರುತ್ತದೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಆಳ್ವಿಕೆ ನಡೆಸಿದ ರಾಜ ಮನೆತನಗಳ ಅವಧಿಯಲ್ಲಿ ನಿರ್ಮಾಣವಾದಂತೆ ದೇವಾಲಯಗಳು ಕಂಡು ಬರುವುದುಂಟು. ಎಷ್ಟೋ ದೇವಾಲಯಗಳು ದುಸ್ಥಿತಿಯಲ್ಲಿವೆ. ದೇವಾಲಯಗಳು ಆ ಕಾಲದಲ್ಲಿ ಕೇವಲ ಧಾರ್ಮಿಕ ಚಟುವಟಿಕೆಯ ಭಾಗವಾಗಿರದೆ ಅಂದಿನ ಸಮಾಜದ ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ದೇವಾಲಯಗಳು ತಮ್ಮ ಆಕರ್ಷಕ ವಾಸ್ತು ವಿನ್ಯಾಸ ಜೊತೆ ಜೊತೆಯಲ್ಲಿ ಪಾಠಶಾಲೆಯಾಗಿ ಅನ್ನ ಛತ್ರವಾಗಿ ನ್ಯಾಯಾಲಯವಾಗಿ ಅಲ್ಲದೆ ಹಬ್ಬ ಹರಿದಿನಗಳ ಚಟುವಟಿಕೆಗಳ ಕೇಂದ್ರವಾಗಿ ಇರುತ್ತಿದ್ದವು.

ಇದರಿಂದಾಗಿ ದೇವಾಲಯಗಳನ್ನು ಅಂದಿನ ಸಾಮಾಜಿಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ನೋಡಬೇಕಾದಂತಹ ಅವಶ್ಯಕತೆಯು ಇದೆ. ಪ್ರಸ್ತುತ ಉದ್ದೇಶಿತ ಸಂಶೋಧನೆಯಲ್ಲಿ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕು ಪರದೇಶವೆಲ್ಲ ಮೌರ್ಯರ ಕಾಲದಿಂದ ಮೈಸೂರು ಒಡೆಯರು ಮತ್ತು ಹೈದರ್, ಟಿಪ್ಪು ಸುಲ್ತಾನ್ ಕಾಲದವರೆವಿಗೂ ಎಲ್ಲಾ ದೇವಾಲಯಗಳನ್ನು ಆಧಾರವಾಗಿಟ್ಟುಕೊಂಡು ಹಲವು ಅಧ್ಯಾಯಗಳಲ್ಲಿ ಅವುಗಳ ಬೆಳವಣಿಗೆ ಮತ್ತು ಶಿಲ್ಪಕಲೆಯ ಕುರಿತಾದ ಚರ್ಚೆ ಮಾಡುತ್ತಾ ದೇವಾಲಯಗಳ ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ಗಮನ ನೀಡಿ ಶಾಸನಗಳ ಹಾಗೂ ವಾಸ್ತು ವಿನ್ಯಾಸಗಳ ಹಿನ್ನೆಲೆಯಲ್ಲಿ ಸಂಶೋಧನಾ ಅಧ್ಯಯನವನ್ನು ನಡೆಸಲಾಗಿರುತ್ತದೆ. ಈ ಭಾಗದ ಕುರಿತಾದ ಅಧ್ಯಯನಗಳು ನಡೆದಿಲ್ಲದ ಕಾರಣ ಸಂಪೂರ್ಣವಾಗಿ ಹೊಸ ಪರಿಚಯವನ್ನು ನೀಡುವ ಸಂಶೋಧನೆಯಾಗಿರುತ್ತದೆ.

ಸಮಾಜದ ಒಂದು ಅವಿಭಾಜ್ಯ ಅಂಗವೆಂದರೆ ದೇವಾಲಯಗಳು ಹಿಂದೆ ದೇವಾಲಯಗಳು ಜನತೆಯನ್ನು ವಿವಿಧ ಕಾರಣಗಳಿಂದ ಆಕರ್ಷಿಸಿದ್ದವು. ಇಲ್ಲದಿದ್ದರೆ ಊರಿಗೆ ಒಂದಾದರೂ ದೇವಾಲಯಗಳು ಇರುತ್ತಿರಲಿಲ್ಲ. ಗಣಪತಿಯ ದೇವಾಲಯದಿಂದ ಹಿಡಿದು ಗ್ರಾಮ ದೇವತೆಯ ದೇವಾಲಯಗಳವರೆಗೆ ಕೆಲವು ಹಳ್ಳಿಗಳಲ್ಲಿ ಹತ್ತು ಹಲವು ದೇವಾಲಯಗಳನ್ನು ಕಾಣಬಹುದಾಗಿದೆ. ದೇವಾಲಯಗಳಿಂದಾಗಿಯೇ ಕೆಲವು ಪ್ರಾಂತ್ಯಗಳು, ಊರುಗಳು ಪ್ರಸಿದ್ಧವಾಗಿವೆ. ಈ ಭಾಗದಲ್ಲಿ ನಮ್ಮ ಬದುಕಿನಲ್ಲಿ ಪ್ರಮುಖ ಪಾತ್ರವಹಿಸಿರುವ ಚನ್ನರಾಯಪಟ್ಟಣ ತಾಲೂಕಿನ ದೇವಾಲಯಗಳನ್ನು ಗಮನಿಸಿದರೆ ಮಾನವನ ವಿಕಾಸದ ಇತಿಹಾಸದೊಂದಿಗೆ ತಳುಕು ಹಾಕಿಕೊಂಡು ಬಂದಿರುವ ಪ್ರಧಾನ ಅಂಶವೆಂದರೆ ಧರ್ಮ.

ದೇವಾಲಯಗಳ ನಿರ್ಮಾಣದ ಹಿನ್ನೆಲೆಯಲ್ಲಿ ಧರ್ಮವೂ ಇರುವುದು ಸ್ವಾಭಾವಿಕ, ಧಾರ್ಮಿಕ ಕೇಂದ್ರಗಳಾಗಿ ಇಲ್ಲಿನ ದೇವಾಲಯಗಳ ಪಾತ್ರ ಮಹತ್ವದ್ದು.

ವಿಶಿಷ್ಟಾದ್ವೈತ ಮತ್ತು ಅದ್ವೈತ ಸಿದ್ಧಾಂತಗಳ ತಾತ್ವಿಕ ವ್ಯತ್ಯಾಸಗಳು ಶೈವ ವೈಷ್ಣವರ ಹಾಗೂ ಜೈನ ಮತ್ತು ವೈಷ್ಣವರ ಮತೀಯ ವಿರಸಗಳು ವೈಷ್ಣವರ ಆಂತರಿಕ ವಿರಸಗಳು ನಡೆದಿರುವುದು ಒಂದೊಂದು ಕಡೆ ಕಂಡು ಬರುತ್ತದೆ. ದೇವಾಲಯಗಳನ್ನು ಕೇವಲ ಕಲೆ ಮತ್ತು ವಾಸ್ತುಶಿಲ್ಪ ಶೈಲಿಯ ಹಿನ್ನೆಲೆಯಷ್ಟೇ ಅಲ್ಲದೆ ದೇವಾಲಯವು ಸಮಾಜದಲ್ಲಿ ಅಧಿಕಾರದ ಮತ್ತು ಪ್ರಭಾವದ ಕೇಂದ್ರವಾಗಿ ಕಾಣಿಸಿಕೊಳ್ಳುತ್ತದೆ. ದೇವಾಲಯ ವಿಕಾಸ ಹೊಂದಿದ ಬಗೆ ವಿವಿಧ ಸಮುದಾಯಗಳು ಯಾವ ರೀತಿ ದೇವಾಲಯದೊಂದಿಗೆ ಸಂಬಂಧವನ್ನು ಹೊಂದಿದ್ದವು ಅಲ್ಲಿಯ ಜನರ ಆಚಾರ-ವಿಚಾರ ಜೀವನ ರೀತಿಯ ವೈವಿಧ್ಯತೆ ಜನಸಾಮಾನ್ಯರ ನಂಬಿಕೆಗಳು ದೇವಾಲಯ ತನ್ನ ಆಕರ್ಷಕ ವಾಸ್ತು ವಿನ್ಯಾಸದ ಜೊತೆ-ಜೊತೆಯಲ್ಲಿ ಬೆಳೆದಿವೆ. ಆಧ್ಯಾತ್ಮಿಕ ಕೇಂದ್ರವಾಗಿ ದೇವಾಲಯವು ಸ್ಥಳೀಯ ಸಮುದಾಯದ ಬದುಕಿನಲ್ಲಿ ಪಡೆದಿದ್ದ ಮಹತ್ವ ಹಾಗೂ ಅದು ಬೀರಿದ ಪ್ರಭಾವಗಳ ಹಿನೆಲೆಯಿಂದ ಅಂದಿನ ಕಾಲದ ಕಾಲಘಟ್ಟದ ಅಧಿಕಾರ ಕೇಂದ್ರಗಳ ಸ್ವರೂಪವನ್ನು ಅರಿಯುವುದು ಸಾಧ್ಯವಾಗುತ್ತದೆ.

ಚನ್ನರಾಯಪಟ್ಟಣ ತಾಲೂಕಿನ ಹಲವಾರು ಊರುಗಳಲ್ಲಿ ಸೂಕ್ಷ್ಮಶಿಲಾಯುಗದ ತಾಣಗಳು ಇವೆ. ಉದಾಹರಣೆಗೆ ಚೋಳೇನಹಳ್ಳಿ, ಶೆಟ್ಟಿಯಹಳ್ಳಿಯಲ್ಲಿವೆ. ನೂತನ ಶಿಲಾಯುಗದ ಅವಶೇಷಗಳು ಸಹ ಕಂಡು ಬಂದಿವೆ. ಬೃಹತ್ ಶಿಲಾಯುಗದ ನೆಲೆ ಹಾಗೂ ಗೋರಿಗಳು ತಾಲೂಕಿನಾದ್ಯಂತ ಕಂಡು ಬರುತ್ತವೆ. ಈ ಹಿನ್ನೆಲೆಯಿಂದ ಹಾಸನ ಜಿಲ್ಲೆಯು ಚನ್ನರಾಯಪಟ್ಟಣ ತಾಲೂಕಿನ ಇತಿಹಾಸವು ಪ್ರಾಚೀನ ಕಾಲದಿಂದ ಹಿಡಿದು ಇಲ್ಲಿಯ ತನಕ ನಿರಂತರವಾಗಿ ಸಾಗಿ ಬಂದಿದೆ ಎಂದು ಹೇಳಬಹುದು. ಈ ಮೇಲಿನ ಎಲ್ಲಾ ವಿಚಾರವು ಜನ ಸಾಮಾನ್ಯರ ಹಾಗೂ ಹೋಗುಗಳ ಸಾಂಸ್ಕೃತಿಕ ಹಿನ್ನೆಲೆಯನ್ನು ಪ್ರತಿಬಿಂಬಿಸುತ್ತದೆ. ಭಾರತೀಯ ವಾಸ್ತು ಮತ್ತು ಶಿಲ್ಪಕಲಾ ಪರಂಪರೆಯ ಇತಿಹಾಸದಲ್ಲಿ ಹಾಗೂ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹಾಸನ ಜಿಲ್ಲೆಯು ಅದರಲ್ಲೂ ಚನ್ನರಾಯಪಟ್ಟಣದಲ್ಲಿ ಆಳ್ವಿಕೆ ನಡೆಸಿದ ರಾಜರುಗಳ ಪ್ರಮುಖ ಪಾತ್ರವಿದೆ ಎಂಬುದು ತಿಳಿದುಬರುತ್ತದೆ.

ಚನ್ನರಾಯಪಟ್ಟಣದ ತಾಲೂಕಿನ ಪ್ರತಿಯೊಂದು ಹಳ್ಳಿಗಳನ್ನು ಗಮನಿಸಿದರೆ ಆಯಾ ಅರಸರ ಕಾಲದಲ್ಲಿ ಹಲವಾರು ಶಾಸನಗಳು, ದೇವಾಲಯಗಳು, ಬಸದಿಗಳು, ಕೆರೆ ಕಟ್ಟೆಗಳು ಅಂದಿನ ಕಾಲದ ಇತಿಹಾಸ ದ್ಯೋತಕವಾಗಿ ಪ್ರಸ್ತುತ ಇಂದಿಗೂ ಹಾಗೆಯೇ ಬೆಳೆದು ಉಳಿದುಕೊಂಡು ಬಂದಿದೆ. ಕರ್ನಾಟಕದಲ್ಲಿ ಅದರಲ್ಲೂ ಈ ಭಾಗದ ಬಹುತೇಕ ಕಡೆ ಕಲಾ

ಚಟುವಟಿಕೆಗಳ ದೃಷ್ಟಿಯಿಂದ ಅತ್ಯಂತ ಪ್ರಮುಖವಾಗಿರುವ ಈ ವಿಷಯವೇ ಪ್ರಸ್ತುತ ಅಧ್ಯಯನದ ಭೌಗೋಳಿಕ ಮತ್ತು ಸಂಶೋಧನಾ ವಿಷಯವ್ಯಾಪ್ತಿಯ ಪ್ರಸ್ತಾವನೆಯಾಗಿದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಈ ತಾಲೂಕಿನ ದೇವಾಲಯಗಳ ಬೆಳವಣಿಗೆಯನ್ನು ಕುರಿತು ಸಾಂಸ್ಕೃತಿಕ ವಿವರವಾಗಿ ಪರಿಪೂರ್ಣವಾದ ಅಧ್ಯಾಯವನ್ನು ನನ್ನ ಮಹಾಪ್ರಬಂಧದಲ್ಲಿ ಪ್ರಸ್ತುತ ಪಡಿಸಲಾಗಿರುತ್ತದೆ.

ಇನ್ನೊಂದು ಪ್ರಮುಖವಾದ ವಿಚಾರವೇನೆಂದರೆ ಕರ್ನಾಟಕದಲ್ಲಿ ಆರಂಭದ ರಾಜಮನೆತನಗಳು ನಿರ್ಮಿಸಲ್ಪಟ್ಟ ದೇವಾಲಯಗಳು ಕೆಲವೊಂದು ಶಾಸನಗಳಲ್ಲಿ ಕಂಡು ಬರುತ್ತವೆಯಾದರೂ ಇವತ್ತು ಅವುಗಳ ನಿಜವಾದ ಸ್ವರೂಪ ಉಳಿದು ಬಂದಿಲ್ಲ. ಉದಾಹರಣೆಗೆ ಬಾದಾಮಿ ಚಾಲುಕ್ಯರ ಕಾಲದಿಂದ ಕರ್ನಾಟಕದಲ್ಲಿ ದೇವಾಲಯಗಳ ಬೆಳವಣಿಗೆ ತೀವ್ರಗತಿಯಿಂದ ಬೆಳವಣಿಗೆ ಹೊಂದಿದಂತೆ ಕಂಡು ಬರುತ್ತದೆ. ಈ ಕಾಲದಲ್ಲಿ ಗುಹಾ ಮತ್ತು ದಾರ್ಶನಿಕ ವಾಸ್ತುಗಳೆರಡೂ ಬೆಳೆದು ಬಂದವು. ಈ ಮನೆತನದ ತರುವಾಯ ಆಳ್ವಿಕೆಗೆ ಬಂದ ವಿವಿಧ ರಾಜ ಮನೆತನಗಳು ತಮ್ಮ ತಮ್ಮ ಕಾಲಾವಧಿಯಲ್ಲಿ ವಿವಿಧ ಧರ್ಮದ ದೇವಾಲಯಗಳನ್ನು ನಿರ್ಮಿಸಿ ಅವುಗಳಿಗೆ ದಾನ–ದತ್ತಿಗಳನ್ನು ನೀಡಿದ ವಿಚಾರವು ಶಾಸನಗಳು ತಿಳಿಸುತ್ತವೆ. ಹೀಗೆ ಪ್ರಾಚೀನ ಕಾಲದಿಂದಲೂ ದೇವಾಲಯ ರಚನೆಯು ಆರಂಭವಾಗಿ ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತಾ ತನ್ನದೇ ಆದ ಶೈಲಿ ಪ್ರಭೇದಗಳನ್ನು ಪ್ರಕಟಗೊಳಿಸುತ್ತಾ ನಡೆದು ಪ್ರತಿಯೊಂದು ಪ್ರವೇಶದ ದೇವಾಲಯಗಳು ಕರ್ನಾಟಕದ ವಾಸ್ತುಶಿಲ್ಪಕ್ಕೆ ವೈಶಿಷ್ಟ್ಯ ಪೂರ್ಣ ಕೊಡುಗೆ ಎನಿಸಿದೆ.ದೇವಾಲಯಗಳ ರಚನೆಯ ಉದ್ದೇಶವೇನೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪ್ರಾಪಂಚಿಕ ಸುಖಗಳು ಮಾನವನ ಪೂರ್ಣ ವಿಕಾಸಕ್ಕೆ ಬಹುಮುಖ್ಯವಾದುದೆಂದು ಪ್ರಾಚೀನವಾದ ನಂಬಿಕೆಯಾಗಿದ್ದು ಮತ್ತು ಭಾರತೀಯರಲ್ಲಿರುವ ಆಧ್ಯಾತ್ಮಿಕ ಭಾವನೆಯ ಕಾರಣವಾಗಿ ನಮ್ಮ ಸಂಸ್ಕೃತಿಗೆ ದೇವಾಲಯಗಳು ಪರಮೋಚ್ಛ ಆಲಯಗಳಾದವು. ಆತ್ಮನಿಗೆ ಶರೀರವು ಹೇಗೆ ಮನೆಯೋ ಹಾಗೆ ಈ ಪ್ರಕೃತಿಯೇ ಆಲಯವೆಂಬಂತೆ ದೇವಾಲಯದ ಕೆಲವು ಭಾಗಗಳಿಗೆ ಮಾನವ ಶರೀರದ ಭಾಗಗಳ ಹೆಸರುಗಳನ್ನು ಬಳಸಿರುವುದು ಕಂಡುಬರುತ್ತದೆ.

ಭಾರತದ ಸಾಮ್ರಾಜ್ಯ ಯುಗಕ್ಕೆ ಬಂದರೆ ರಾಜರುಗಳು ತಮ್ಮ ವಿಜಯದ ಪ್ರತೀಕವಾಗಿ ದೇವಲಯಗಳನ್ನು ಕಟ್ಟಿಸುತ್ತಿದ್ದರು. ಹೀಗೆ ಸುಖಃ, ಶಾಂತಿ, ಪುಣ್ಯ ವಿಜಯದ ಪ್ರತೀಕಗಳು ದೇವಾಲಯಗಳು, ರಚನೆಯ ಪ್ರಮುಖ ಉದ್ದೇಶಗಳಾಗಿರುವಂತೆ ತೋರುತ್ತದೆ. ಈ

ಹಿನ್ನೆಲೆಯಿಂದ ದೇವಾಲಯಗಳ ಬೆಳವಣಿಗೆಯನ್ನು ಚನ್ನರಾಯಪಟ್ಟಣ ತಾಲೂಕಿನ ಪ್ರಸ್ತುತ ಸಂಶೋಧನೆಯನ್ನು ನಡೆಸಲಾಗಿರುತ್ತದೆ.

## ಅಧ್ಯಯನದ ಉದ್ದೇಶಗಳು

ಯಾವುದೇ ಒಂದು ಪ್ರದೇಶದ ಅಥವಾ ಪ್ರಾಂತ್ಯದ ಇತಿಹಾಸವೆಂದರೆ ಆ ಪ್ರಾಂತ್ಯವನ್ನು ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಆಡಳಿತ ನಡೆಸಿದ ರಾಜರುಗಳ ಇತಿಹಾಸವೆಂದು ಬಹುವಾಗಿ ಬೆಳವಣಿಗೆಯಾಗಿರುವುದು ಕಂಡು ಬರುತ್ತದೆ. ಒಂದು ರಾಷ್ಟ್ರದ ನಿಜವಾಧ ಇತಿಹಾಸವನ್ನು ತಿಳಿಯಬೇಕಾದರೆ, ಇಲ್ಲಿಯ ಜನರು ಆಯಾಕಾಲದಿಂದ ಬದುಕಿದ ರೀತಿ, ಅವರುಗಳು ಅನುಸರಿಸಿದ ಧರ್ಮ ಅಂದಿನ ಜನಸಾಮಾನ್ಯರ ಇತಿಹಾಸವಾಗಿರುತ್ತದೆ. ಕರ್ನಾಟಕದಲ್ಲಿ ಕಂಡು ಬರುವಂತಹ ಜಿಲ್ಲೆಗಳಲ್ಲಿ ಹಾಸನ ಜಿಲ್ಲೆಯು ಪ್ರಮುಖವಾದ ಜಿಲ್ಲೆಯಾಗಿದೆ.

ಹಾಸನಜಿಲ್ಲೆಯಲ್ಲಿ ಒಟ್ಟು ೮ ತಾಲೂಕು ಕೇಂದ್ರಗಳಿವೆ. ಅವುಗಳು ಯಾವುವು ಎಂದರೆ ಆಲೂರು, ಅರಸೀಕೆರೆ, ಅರಕಲಗೂಡು, ಹಾಸನ, ಬೇಲೂರು, ಸಕಲೇಶಪುರ, ಹೊಳೇನರಸೀಪುರ ಮತ್ತು ಚನ್ನರಾಯಪಟ್ಟಣ ಪ್ರಮುಖ ತಾಲೂಕು ಕೇಂದ್ರಗಳಾಗಿವೆ. [11] ಆದರೆ ಸಂಶೋಧನಾ ದೃಷ್ಟಿಯಿಂದ ಚನ್ನರಾಯಪಟ್ಟಣ ತಾಲೂಕಿಗೆ ಮಾತ್ರ ಸೀಮಿತವಾಗಿರುತ್ತದೆ. ಈ ಭಾಗದ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬಹಳಷ್ಟು ಪ್ರಸಿದ್ಧಿಯಾಗಿದೆ. ಹಾಸನಜಿಲ್ಲೆ ಹಾಗೂ ಸಂಶೋಧನಾ ಕ್ಷೇತ್ರವಾಗಿರುವ ಚನ್ನರಾಯಪಟ್ಟಣದಲ್ಲಿ ಮೌರ್ಯ ಅರಸರು, ತಲಕಾಡಿನ ಗಂಗರು, ಕದಂಬರು, ರಾಷ್ಟ್ರಕೂಟ, ಬಾದಾಮಿ ಮತ್ತು ಕಲ್ಯಾಣದ ಚಾಲುಕ್ಯರು, ಚೆಂಗಾಳ್ವರ, ಕೊಂಗಾಳ್ವ, ಹೊಯ್ಸಳ, ವಿಜಯನಗರದ ಅರಸರು, ಮೈಸೂರು ಒಡೆಯರ್, ಹೈದರ್ ಆಲಿ, ಟಿಪ್ಪುಸುಲ್ತಾನ್ ಇವರುಗಳು ಅಲ್ಲದೆ ಇನ್ನಿತರ ರಾಜರುಗಳು ಸ್ಥಳೀಯ ಸಾಮಂತ ಮನೆತನದವರು ಈ ಭಾಗದಲ್ಲಿ ರಾಜಕೀಯವಾಗಿ ಆಡಳಿತವನ್ನು ನಡೆಸಿರುತ್ತಾರೆ. [12]

ಈ ತಾಲೂಕಿನಲ್ಲಿ ಕಂಡು ಬರುವ ದೇವಾಲಯಗಳು ನಾಡಿನ ಸಾಂಸ್ಕೃತಿಕ ಕೇಂದ್ರಗಳು, ಇವುಗಳು ಪ್ರಾಂತ್ಯದ ಸಂಸ್ಕೃತಿಯ ರಚನೆಯಲ್ಲಿ ದೇವಾಲಯಗಳ ಪಾತ್ರ ಅತ್ಯಂತ ಪರಿಪೂರ್ಣತೆಯನ್ನು ಹೊಂದಿವೆ. ಪ್ರಾಚೀನ ಕಾಲದ ಜನರು ತಮ್ಮ ದಿನ ನಿತ್ಯದ ಬದುಕಿನಲ್ಲಿ ಕೆಲವೊಂದು ಆಯಾಮಗಳನ್ನು ಅಲ್ಲದೆ ದೇವರ ನಂಬಿಕೆ ಪ್ರೀತಿಯನ್ನು ಪಡೆದುಕೊಂಡು

ಸಮಾಜದಲ್ಲಿ ಒಂದು ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿದ್ದಾರೆ. ದೇವ–ದೇವತೆಯನ್ನು ಇರಿಸುವ ಕಟ್ಟಡವನ್ನು ದೇವಸ್ಥಾನವೆಂದು ಕರೆಯಲಾಗಿದೆ.

ಪ್ರಾಚೀನ ಪರಂಪರೆಯನ್ನು ಗಮನಿಸಿದರೆ ಭಾರತದಲ್ಲಿ ವೈವಿಧ್ಯಮಯ ಸಮುದಾಯಗಳು, ಪಂಗಡಗಳು ಕಂಡು ಬರುತ್ತವೆ. ಆಯಾ ಸಮುದಾಯಗಳಿರುವ ಭೌಗೋಳಿಕ ಹಿನ್ನೆಲೆಯ ಪರಿಸರದಲ್ಲಿ ಅನೇಕ ವೈಧಿಕ ಧರ್ಮಗಳಿವೆ. ಹಾಗೆಯೇ ಆಯಾ ಧರ್ಮಗಳಿಗೆ ಪೂರಕವಾಗಿ ದೇವಾಲಯಗಳನ್ನು ನಿರ್ಮಿಸಿರುತ್ತಾರೆ. ಈ ಹಿನ್ನೆಲೆಯಿಂದ ದೇವಾಲಯಗಳಿಗೆ ಪ್ರಾಚೀನ ಕಾಲದಿಂದಲೂ ಸಮಾಜದಲ್ಲಿ ವಿಶಿಷ್ಟ ಮಹತ್ವದ ಸ್ಥಾನವಿದೆ. ಪ್ರಾಚೀನ ಅರ್ವಾಚೀನ ಕಾಲಘಟ್ಟದಲ್ಲಿ ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿರುವುದು. ಅಲ್ಲದೆ ಸಾಮಾಜಿಕ ಜೀವನದ ಭಾಗಗಳಾಗಿ ಕೆಲಸ ಕಾರ್ಯವನ್ನು ಮಾಡುತ್ತಿರುವುದು ಕಂಡುಬಂದಿದೆ. ಅವುಗಳು ಸಾಮಾಜಿಕ ಕೇಂದ್ರಗಳಾಗಿ ಜನತೆಗೆ ವಿದ್ಯೆಯನ್ನು ಕಲಿಸುವ ಪಾಠ ಶಾಲೆಯಾಗಿ ಮಹತ್ತರವಾದ ಕೆಲಸವನ್ನು ನಿರ್ವಹಿಸಿವೆ. ಆ ಮೂಲಕ ಜನ ಸಾಮಾನ್ಯರನ್ನು ಒಂದು ಕಡೆ ಸೇರಿಸಿ ಆಯಾ ಧರ್ಮ ಪ್ರಸಾರವನ್ನು ಕೈಗೊಂಡಿರುವುದು ತಿಳಿದುಬರುತ್ತದೆ.

ದೇವಸ್ಥಾನಗಳಲ್ಲಿ ವಾಸ್ತು ಕಲೆಯನ್ನು ಉನ್ನತ ಮಟ್ಟದಲ್ಲಿ ಬೆಳೆಸಿರುವುದಕ್ಕೆ ಹಲವಾರು ರೀತಿಯ ಶಾಸನಗಳು, ಸಾಹಿತ್ಯ ಗ್ರಂಥಗಳು ಅಂದಿನ ಕಾಲದ ಇತಿಹಾಸವನ್ನು ಒದಗಿಸುತ್ತದೆ. [13] ದೇವಲಯಗಳನ್ನು ಗಮನಿಸಿದರೆ ವಿವಿಧ ರೀತಿಯ ಶಿಲ್ಪ ಕಲೆಯನ್ನು ಗುರುತಿಸಬಹುದು. ಅದರಲ್ಲಿ ದೇವನು ದೇವತೆ, ರಾಜ ಮಹಾರಾಜರು, ವಿವಿಧ ಭಂಗಿಯ ಸ್ತ್ರೀಯರು, ಸಂಗೀತಗಾರರು, ನೃತ್ಯಗಾರರು ಮುಂತಾದ ವಿಭಿನ್ನ ಕಲೆಗಳು ಮೂಡಿಬಂದಿರುತ್ತವೆ. ಪ್ರಾಚೀನ ಕಾಲದ ಸಂಸ್ಕೃತಿಯನ್ನು ತಿಳಿಸುವ ದೇವಸ್ಥಾನಗಳು ಪುರಾತನ ಚರಿತ್ರೆಯ ಮೂಲಗಳಾಗಿವೆ. ಈ ರಿಈತಿಯ ಪಳೆಯುಳಿಕೆಯ ಬೆಳವಣಿಗೆಯಿಂದ ನಮ್ಮ ಪ್ರಾಚೀನ ಸಂಸ್ಕೃತಿಯ ವೈವಿಧ್ಯತೆಯ ಆಯಾಮಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ. ಮನುಷ್ಯನು ಈ ಭೂಮಿಯಲ್ಲಿ ಕಂಡು ಬರುವ ಹಲವಾರು ವಿಸ್ಮಯಗಳಿಗೆ ಬೆದರಿದರೂ ಈ ಬೆದರಿಕೆಯ ಆತಂಕದಿಂದ ಎದುರಿಸುವಾಗ ಅವರ ಕಲ್ಪನೆಗೆ ಭಯ ಅಲ್ಲದೆ ಭಕ್ತಿಗಳ ನೆಲೆಯು ಪ್ರಾರಂಭಗೊಂಡಿತು. ಈ ರೀತಿಯ ಭಯ ಮತ್ತು ದೇವಭಕ್ತಿಯ ನೆರಳಿನಲ್ಲಿ ಜೀವ ಪಡೆದು ದೇವರು ಮತ್ತು ಅದಕ್ಕೆ ಬೇಕಾದ ಒಂದು ನೆಲೆಯನ್ನು ಪಡೆದುಕೊಂಡರು. ಆ ನೆಲೆಗಳೇ ಇಂದು ದೇವಾಲಯಗಳು ಎಂದು ಎನಿಸಿಕೊಂಡಿವೆ.

ಹೀಗೆ ಹುಟ್ಟಿಬೆಳೆದ ದೇವಸ್ಥಾನಗಳು ಕಾಲಕ್ರಮೇಣ ಬಗೆ ಬಗೆಯ ವಿನ್ಯಾಸಗಳಿಂದ ವೈವಿಧ್ಯಮಯ ಆಕಾರ ಪಡೆದುಕೊಂಡಿದ್ದು, ನಮ್ಮ ಸಂಸ್ಕೃತಿಯ ವಿಕಾಸವೆಂದು ಕರೆಯಲಾಗುತ್ತದೆ.[14] ಈ ರೀತಿಯ ಸಾಂಸ್ಕೃತಿಕ ವಿಷಯಗಳ ವಿಶ್ಲೇಷಣೆಯ ಕಾರ್ಯದಲ್ಲಿ ತೊಡಗಿದಾಗ ದೇವಸ್ಥಾನಗಳು ಮೂಲ ಆಕಾರಗಳಾಗಿ ಅಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಷಯಗಳನ್ನು ತಿಳಿಸುವಲ್ಲಿ ಮಹತ್ವ ಪೂರ್ಣವಾದ ಪಾತ್ರ ವಹಿಸುತ್ತದೆ. ಪ್ರಾಚೀನ ಕಾಲದಿಂದಲೂ ಧರ್ಮ ಮತ್ತು ದೇವಸ್ಥಾನಗಳ ಸಂಬಂಧ ವಿಶೇಷವಾದದ್ದು. ಇವೆರಡು ಭಾವನೆಗಳು ಅಮೋಘವಾದದ್ದು, ಆಯಾ ಧರ್ಮಗಳು ಬೆಳವಣಿಗೆಯಾಗಿವೆ ಎಂಬುದಕ್ಕೆ ಆಧಾರಗಳಿಲ್ಲ.

ಭಾರತದ ಅದರಲ್ಲೂ ಹಾಸನ ಜಿಲ್ಲೆ ಚನ್ನರಾಯಪಟ್ಟಣದ ಪರಿಸರದಲ್ಲಿ ಧರ್ಮ ಮತ್ತು ದೇವಾಲಯಗಳ ಬೆಳವಣಿಗೆಯ ಚರಿತ್ರೆಯನ್ನು ಗಮನಿಸಿದರೆ ಈ ಮೇಲಿನ ಅಂಶ ಸ್ಪಷ್ಟವಾಗಿ ತಿಳಿದುಬರುತ್ತದೆ. ಏಕೆಂದರೆ ಒಂದು ಧರ್ಮಕ್ಕೆ ಪೂರಕವಾಗಿ ಒಂದು ದೇವಾಲಯ ನಿರ್ಮಾಣವಾಗಿರುವುದು ತಿಳಿದುಬರುತ್ತದೆ. ಈ ಹಿನ್ನೆಲೆಯಿಂದ ಈ ಭಾಗದಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ, ಇಸ್ಲಾಂ, ಕ್ರೈಸ್ತ ಇನ್ನೂ ಮೊದಲಾದ ಧರ್ಮಗಳಿಗೆ ದೇವಸ್ಥಾನಗಳು ಆಯಾ ಭಾಗದಲ್ಲಿ ಬೆಳೆದುಬಂದವು. ಆಯಾ ದೇವಾಲಯಗಳಿಗೆ ತನ್ನದೇ ಆದಂತಹ ಧರ್ಮದ ದೇವರು ಹಾಗೂ ಸಮುದಾಯ (ಜನಾಂಗ) ಬೆಳೆದಿರುವುದು ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ದೇವಾಲಯಗಳ ಚಾರಿತ್ರಿಕ, ಸಾಂಸ್ಕೃತಿಕ ವಿಚಾರಗಳನ್ನು ಅಭ್ಯಾಸ ಮಾಡುವಲ್ಲಿ ಒಂದು ಪ್ರಾಂತ್ಯದ ಸಂಸ್ಕೃತಿಯ ಪರಂಪರೆಯನ್ನು ತಿಳಿಯಬಹುದಾಗಿದೆ. ಭಾರತದಾದ್ಯಂತ ಹಾಗೂ ಕರ್ನಾಟಕದ ಪರಂಪರೆಯನ್ನು ಗಮನಿಸಿದರೆ ಹಾಸನ ಜಿಲ್ಲೆಯಲ್ಲಿಯೂ ಆಯಾ ಧರ್ಮ ಪೋಷಣೆಯಲ್ಲಿ ಬೆಳೆದು, ವೈಶಿಷ್ಟ್ಯಗಳೊಂದಿಗೆ ಅಸ್ತಿತ್ವವನ್ನು ಪಡೆದುಕೊಂಡು ಸಮಾಜದಲ್ಲಿ ಸಾಮಾಜಿಕ ಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿತ್ತು ಎಂಬುದು ಹಾಸನ ಜಿಲ್ಲೆಯಾದ್ಯಂತ ಕಂಡು ಬರುವ ದೇವಾಲಯಗಳಿಂದ ನಿರ್ಧರಿಸಬಹುದಾಗಿದೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನ ಶಾಸನಗಳ ಒಂದು ಸಾಂಸ್ಕೃತಿಕ ಅಧ್ಯಯನದಲ್ಲಿ ರಾಜಕೀಯ ಕ್ಷೇತ್ರದಲ್ಲೂ ಅಲ್ಲದೆ ಧಾರ್ಮಿಕ ಸಂಘರ್ಷಗಳು ಆಗಿದ್ದವೂ ಎಂಬುದನ್ನು ಕಾಣಬಹುದಾಗಿದೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಕಂಡು ಬರುವ ಪ್ರಾಚೀನ ಕಾಲಕ್ಕೆ ಸೇರಿಸಬಹುದಾದ ಅವಶೇಷಗಳ ಅಧ್ಯಾಯನದ ಸಹಾಯದಿಂದ ಮಾನವನ ಗತಕಾಲದ ಸಂಸ್ಕೃತಿಯ ವಿವಿಧ ಮುಖಗಳನ್ನು ವಿವೇಚಿಸುವ ವಿಚಾರ ಆಗಿರುತ್ತದೆ. [15] ಮನುಷ್ಯನು ತನ್ನ ಜೀವನದ ಬದುಕಿಗಾಗಿ

ಮತ್ತು ತನ್ನ ಭಾವನೆಗಳನ್ನು ವ್ಯಕ್ತಪಡಿಸುವುದಕ್ಕಾಗಿ ಉದ್ದೇಶ ಪೂರ್ವಕವಾಗಿ ರಚಿಸಿದ ಅಥವಾ ಉಪಯೋಗಿಸಿದ ವಸ್ತುಗಳು ಅವುಗಳ ಅವಶೇಷಗಳು ಪ್ರಾಚ್ಯವಸ್ತುಗಳೆಂದು ಕರೆಯಲಾಗಿದೆ.

ಚನ್ನರಾಯಪಟ್ಟಣದ ಪ್ರದೇಶದಲ್ಲಿನ ಕೆಲವೊಂದು ನೆಲೆಯಲ್ಲಿ ಪ್ರಾಚೀನ ಅವಶೇಷಗಳನ್ನು ಕಾಣಬಹುದಾಗಿದೆ. ಯಾವುದೇ ಒಂದು ಇತಿಹಾಸವನ್ನು ರಚಿಸಬೇಕಾದರೆ ಕಳೆದುಕೊಂಡಿರುವಂತಹ ಅಥವಾ ಬಿಟ್ಟು ಹೋಗಿರುವಂತಹ ಭಾಗಗಳನ್ನು ಮತ್ತೆ ಪಡೆದುಕೊಳ್ಳಬಹುದಾಗಿರುತ್ತದೆ. ಆದಕಾರಣ ನನ್ನ ಸಂಶೋಧನಾ ಕ್ಷೇತ್ರಕಾರ್ಯದಿಂದ ಪ್ರಾಚ್ಯವಶೇಷಗಳನ್ನು ವಾಸ್ತು ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಕಲೆಹಾಕಿ ತನ್ನ ಈ ಪ್ರಬಂಧದಲ್ಲಿ ತಿಳಿಸಲಾಗುವುದು. ನನ್ನ ಕ್ಷೇತ್ರಕಾರ್ಯದಿಂದ ಚನ್ನರಾಯಪಟ್ಟಣ ಪ್ರದೇಶದಲ್ಲಿ ದೊರೆಯುವ ಪ್ರಾಚ್ಯ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಪ್ರಬಂಧವನ್ನು ರಚಿಸಲಾಗಿದೆ.

ಚನ್ನರಾಯಪಟ್ಟಣದ ಇತಿಹಾಸವನ್ನು ಪುನರ್ ರಚನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿರುವ ಪುರಾತನ ಅವಶೇಷಗಳನ್ನು ವಿವಿಧ ಶಾಖೆಗಳಿಂದ ಅಧ್ಯಯನ ಮಾಡಲಾಗುತ್ತದೆ. ಪ್ರಾಚೀನ ಭಾರತದಲ್ಲಿ ಅದರಲ್ಲೂ ಕ್ರಿ.ಶ.ದ ಇತ್ತೀಚಿನ ಶತಮಾನಗಳಲ್ಲಿ ರಾಜ ಮಹಾರಾಜರಿಗಿದ್ದ ಸ್ಥಾನಮಾನಗಳನ್ನು ಗಮನಿಸಿದರೆ ಅಂದಿನ ದೊರೆಗಳ ಇತಿಹಾಸ ಒಂದು ರೀತಿಯಲ್ಲಿ ನಮ್ಮ ಸ್ಥಳೀಯ ಪ್ರಾಂತ್ಯದ ಇತಿಹಾಸವಾಗಬಹುದು. ಅಲ್ಲದೆ ಎಲ್ಲಾ ದೇಶಗಳಂತೆ ನಮ್ಮಲ್ಲಿಯೂ ನಾಡಿನ ಇತಿಹಾಸವನ್ನು ಆಯಾ ಘಟ್ಟಗಳಾಗಿ ಬೇರೆ ಬೇರೆ ಮಾಡಲು ರಾಜ ಮನೆತನಗಳು ನಮಗೆ ಸಹಕಾರಿಯಾಗಿವೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿನ ಹಲವಾರು ಪ್ರಾಂತ್ಯಗಳು ಪುರಾತತ್ವ ಪುರಾವೆಗಳು ದೇವಾಲಯಗಳು, ಶಾಸನಗಳು ಇನ್ನಿತರ ಹೊಸ–ಹೊಸ ಅಧ್ಯಯನ ದೃಷ್ಟಿಯಿಂದಲೂ ಕುಂಠಿತವಾಗಿದೆ. ಈ ಹಿನ್ನೆಲೆಯಿಂದ ಅವುಗಳೆಲ್ಲವನ್ನೂ ಪರಿಪೂರ್ಣವಾದ ಸಮಗ್ರವಾದ ಒಂದು ಅಧ್ಯಯನವನ್ನು ಕೈಗೊಂಡು ಮಾಹಿತಿ ಸಂಗ್ರಹಿಸಿ ಎಲ್ಲಾ ವಿಚಾರವನ್ನು ಒಂದೆಡೆ ಸೇರಿಸುವುದೇ ಪ್ರಸ್ತುತ ನನ್ನ ಸಂಶೋಧನೆಯ ಪ್ರಬಂಧದ ಮೂಲ ಉದ್ದೇಶವಾಗಿದೆ. [16]

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ಪ್ರದೇಶದಲ್ಲಿನ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ತಾಲೂಕಿನ ಬಹುತೇಕ ಪ್ರದೇಶದಲ್ಲಿ ಊರುಗಳಲ್ಲಿ ಪ್ರಾಚೀನ ಕಾಲದ ಮಾನವನು ಬದುಕಿ ವಾಸಿಸಿರುವ ನೆಲೆಗಳಿಂದ ಹಿಡಿದು ಇಲ್ಲಿಯ ತನಕ ಹಲವಾರು ವಿವಿಧ ರೀತಿಯ ಮಾಹಿತಿಗಳು ಹಾಗೂ ಇದರ ಪ್ರಾಚೀನತೆಯನ್ನು ಗಮನಿಸಿದರೆ ಈ ಭಾಗದಲ್ಲಿ

ಶಾಸನಗಳು, ದೇವಾಲಯಗಳು, ಬಸದಿಗಳು, ಮೂರ್ತಿಶಿಲ್ಪಗಳು, ಸ್ಮಾರಕ ಶಿಲ್ಪಗಳು, ಲೌಕಿಕ ವಾಸ್ತು ರಚನೆ ಇನ್ನಿತರ ಆಚರಣೆ ಕೆಲವು ಸಂಸ್ಕೃತಿಗಳು ಹೀಗೆ ಅನೇಕ ರೀತಿಯ ವಿವಿಧ ಪ್ರಾಚ್ಯಾವಶೇಷಗಳು ಸಮಗ್ರ ವಿವರಣೆಯನ್ನು ಒಳಗೊಂಡಿರುತ್ತದೆ. ಸಾಂಸ್ಕೃತಿಕವಾಗಿ ಚನ್ನರಾಯಪಟ್ಟಣ ತಾಲೂಕು ಒಂದು ಶ್ರೀಮಂತ ತಾಲೂಕು ಆಗಿದೆ. ಕ್ರಿ.ಪೂರ್ವದಲ್ಲಿ ಮೌರ್ಯರ ಕಾಲದಿಂದಲೂ ಹೆಸರುಗಳಿಸಿದೆ. ನಂತರ ಗಂಗರ, ಹೊಯ್ಸಳ, ಚೋಳರ, ವಿಜಯನಗರ ಅರಸರು, ಮೈಸೂರು ಒಡೆಯರ್ ಇನ್ನಿತರ ಸ್ಥಳೀಯ ರಾಜವಂಶದವರು ಇಲ್ಲಿ ರಾಜ್ಯಭಾರ ಮಾಡಿರುವುದು ತಿಳಿದುಬರುತ್ತದೆ. ಈ ತಾಲೂಕಿನ ಪ್ರಮುಖ ದೇವಾಲಯಗಳ ಚಿತ್ರಣವನ್ನು ಸಹ ಇಲ್ಲಿ ನೀಡಲಾಗಿರುತ್ತದೆ. [17]

## ಅಧ್ಯಯನದ ವಿಧಾನ

ನನ್ನ ಈ ಸಂಶೋಧನಾ ಕ್ರಮದಲ್ಲಿ ಪ್ರಬಂಧವನ್ನು ತಯಾರಿಸಲು ಈ ಕೆಳಕಂಡ ರೀತಿಯಲ್ಲಿ ವಿಧಾನ ಕ್ರಮದಲ್ಲಿ ಅನುಸರಿಸಲಾಗಿರುತ್ತದೆ. ಪ್ರಸ್ತುತ ಪ್ರಬಂಧದ ಸಿದ್ಧತೆಯಲ್ಲಿ ಕೆಲವು ಹೊಸ-ಹೊಸ ಪ್ರಯೋಗಳನ್ನು, ವಿಧಾನಗಳನ್ನು ಬಳಸಲಾಗಿರುತ್ತದೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿನ ಆಯಾ ಗ್ರಾಮದ ಸಂಸ್ಕೃತಿ ಪ್ರಾಚೀನ ಪರಂಪರೆ, ಶಾಸನಗಳು, ದೇವಾಲಯಗಳು, ಬಸದಿಗಳು, ಶೈವ, ವೈಷ್ಣವ, ಜೈನ, ಮುಸ್ಲಿಂ, ಕ್ರೈಸ್ತ, ಇನ್ನಿತರ ಧರ್ಮಗಳ ಬೆಳವಣಿಗೆ ರಾಜಕೀಯ ಸಂಬಂಧ ಭೌಗೋಳಿಕ ಲಕ್ಷಣಗಳನ್ನು ಈಗಾಗಲೇ ಪ್ರಕಟವಾಗಿರುವ ಕೃತಿಗಳು ಮತ್ತು ಲೇಖನಗಳನ್ನು ಸುವ್ಯವಸ್ಥಿತವಾಗಿ ಸಂಗ್ರಹಮಾಡಿ ಅದರೊಂದಿಗೆ ಆಕರ ಗ್ರಂಥಗಳ ಪಟ್ಟಿಯನ್ನು ತಯಾರಿಸಿಕೊಂಡು ಸಮಗ್ರ ಚನ್ನರಾಯಪಟ್ಟಣ ತಾಲೂಕಿನಲ್ಲಿ ಕಂಡು ಬರುವ ಪ್ರಮುಖ ಹಾಗೂ ಪ್ರಮುಕವಲ್ಲದ ದೇವಾಲಯಗಳನ್ನು ಅಭ್ಯಾಸಿಸಿ ಒಂದು ಸಾಂಸ್ಕೃತಿಕ ಚಿತ್ರವನ್ನು ಒದಗಿಸಲಾಗುವುದು. ಈ ತಾಲೂಕಿನ ಎಲ್ಲಾ ಪ್ರಮುಖ ಊರುಗಳ ಕ್ಷೇತ್ರ ಕಾರ್ಯವನ್ನು ಕೈಗೊಂಡು ಅವುಗಳ ಸನ್ನಿವೇಶಕ್ಕೆ ಹಾಗೂ ಸಂದರ್ಭಕ್ಕೆ ತಕ್ಕಂತೆ ವಿವಿಧ-ವಿಭಿನ್ನ ಛಾಯಾಚಿತ್ರಗಳನ್ನು ನೀಡಿ ದಾಖಲೆಗಳನ್ನು ದಾಖಲಿಸಿಕೊಂಡು ತಾಲೂಕಿನಾದ್ಯಂತ ಕಂಡುಬರುವ ದೇವಲಯಗಳ ಒಳಭಾಗವನ್ನು ಅಂದರೆ ಮೂಲದೇವಾಲಯದ ಭಾಗವಾದ ಗರ್ಭಗೃಹದಿಂದ ಹಿಡಿದು ಮುಖಮಂಟಪದವರೆಗೆ ತದನಂತರ ಹೊರಭಾಗ ಅಂದರೆ ಅಧಿಷ್ಠಾನದಿಂದ ಕಳಶದವರೆಗೆ ಕಂಡು ಬರುವ ವಿವಿಧ ಭಾಗಗಳ ವಾಸ್ತು ವಿವರಣೆಯನ್ನು ನೀಡಲಾಗುತ್ತದೆ.ದ

ದೇವಾಲಯಗಳಲ್ಲಿ ಮತ್ತು ಅವುಗಳ ಸುತ್ತ-ಮುತ್ತಲಿನ ಪರಿಸರದಲ್ಲಿ ಕಂಡು ಬರುವ ಶಿಲ್ಪಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಿ ಅವುಗಳ ವಿವಿಧ ಬಗೆಗಳಲ್ಲಿ ವಿಂಗಡಿಸಿ

ಅವುಗಳ ವಿವರಣೆಗಳೊಂದಿಗೆ ವಿವರಿಸಲಾಗಿದೆ. ಅಲ್ಲದೆ ದೇವಾಲಯಗಳ ಜೊತೆಯಲ್ಲಿ ಸಿಕ್ಕಿದ ಶಾಸನಗಳ ವಿವರಣೆಯನ್ನು ಸಹ ಒದಗಿಸಲಾಗಿರುತ್ತದೆ. ಜಾನಪದೀಯ ದೃಷ್ಠಿಯ ಹಿನ್ನೆಲೆಯಿಂದ ತಾಲೂಕಿನ ಪ್ರಾಚೀನ ಪರಂಪರೆಗೆ ಪೂರಕವಾಗಿಯೇ ಕರ್ನಾಟಕದಲ್ಲಿಯೇ ಹೆಸರು ಪಡೆದಿರುವ ಒಂದು ಸುಂದರ ತಾಣವಾಗಿದೆ.

ಒಟ್ಟಾರೆಯಾಗಿ ಅಧ್ಯಯನದ ಮೂಲ ಉದ್ದೇಶವೇನೆಂದರೆ ಚನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿನ ಮೂಲ ಅಂಶವಾಗಿದ್ದರೂ ಸಹ ಅಂದಿನ ಕಾಲದ ರಾಜರುಗಳ ಕಾಲದ ಆಳ್ವಕೆಯನ್ನು ಈ ಭಾಗದಲ್ಲಿ ಅಲ್ಲದೆ ಇನ್ನಿತರ ಭಾಗದ ರಾಜರುಗಳು ಇಲ್ಲಿ ಆಳ್ವಕೆ ನಡೆಸಿರುವ ಮಾಹಿತಿಯನ್ನು ಸಹ ನೀಡಲಾಗಿರುತ್ತದೆ. ತಾಲೂಕಿನ ಕೆಲವೊಂದು ಊರಿನಲ್ಲಿ ಆಳ್ವಕೆ ನಡೆಸಿದ ರಾಜಮನೆತನದವರ ಶಾಸನಗಳ ಆಧಾರದ ಮೇಲೆ ಅಧ್ಯಯನವನ್ನು ನಡೆಸಲಾಗಿರುತ್ತದೆ. ದೇವಾಲಯಗಳ ವಾಸ್ತು ಶಿಲ್ಪಗಳಲ್ಲದೆ ಬಿಡಿ ಶಿಲ್ಪಗಳಾದ ಇನ್ನಿತರ ಶಿಲ್ಪಕಲೆಗಳ ಅಧ್ಯಯನ ಮತ್ತು ಅವುಗಳ ಸಂಸ್ಕೃತಿ ವಿಶೇಷವಾದದ್ದು. ಈ ರೀತಿ ಸಂಗ್ರಹಿತವಾದ ಎಲ್ಲಾ ಆಕಾರಗಳನ್ನು ವಿಶ್ಲೇಷಿಸಿ ವಿವರಣೆಯ ವರದಿಯನ್ನು ತಯಾರಿಸಲಾಗಿರುತ್ತದೆ.

ಈ ಮೇಲಿನ ಎಲ್ಲಾ ವಿವಿಧ ಅಂಶಗಳಿಗೆ ಸಂಬಂಧಪಟ್ಟಂತೆ ಗ್ರಂಥಗಳ ಪಟ್ಟಿಯನ್ನು ತಯಾರಿಸಲಾಗಿದ್ದು ಅವುಗಳನ್ನು ಸಹ ನೀಡಲಾಗಿರುತ್ತದೆ. ಅದು ಇನ್ನಿತರ ಸಂಸ್ಕೃತಿ ಪರಂಪರೆಗೆ ಪೂರಕವಾದ ಮಾಹಿತಿಯನ್ನು ಸಹ ನೀಡಲಾಗಿರುತ್ತದೆ. ಇದು ಅಲ್ಲದೆ ಕೆಲವೊಂದು ಛಾಯಾ ಚಿತ್ರಗಳನ್ನು ನೀಡಲಾಗಿರುತ್ತದೆ. ಕ್ಷೇತ್ರ ಕಾರ್ಯದಲ್ಲಿ ದೊರೆತಿರುವ ಪ್ರಾಚ್ಯ ವಸ್ತುಗಳನ್ನು ಹಾಗೂ ಆಕರಗಳನ್ನು ಅವಲಂಭಿಸಿ ಪ್ರಸ್ತುತ ಈ ಒಂದು ಸಂಶೋಧನಾ ವರದಿಯನ್ನು ತಯಾರಿಸಲಾಗಿರುತ್ತದೆ. ಪ್ರತಿಯೊಂದು ಗ್ರಾಮಗಳಲ್ಲಿ ಕಂಡುಬರುವ ದೇವಾಲಯಗಳ ವ್ಯವಸ್ಥಿತ ಅಧ್ಯಯನ ಪ್ರಚಲಿತವಿದ್ದ ವಿವಿಧ ಬಗೆಯ ದೇವಾಲಯಗಳ ವಾಸ್ತು ಮಾದರಿಯನ್ನು ಗುರುತಿಸಿ ಅವುಗಳ ಲಕ್ಷಣಗಲನ್ನು ಕಂಡುಕೊಳ್ಳುವುದು. ಸ್ಮಾರಕ ಶಿಲ್ಪಗಳ ಕುರಿತಾಗಿ ವಿವರಣೆ ನೀಡುವಾಗ ಶಿಲ್ಪ ಫಲಕಗಳ ಮೇಲೆ ಕಂಡು ಬರುವ ಶಾಸನಗಳನ್ನು ಮೇಲೆ ಕಂಡು ಬರುವ ಶಾಸನಗಳನ್ನು ಗಣನೆಗೆ ತೆಗೆದುಕೊಂಡು ಅವುಗಳನ್ನು ವಿವಿಧ ಬಗೆಯಲ್ಲಿ ವಿಂಗಡಿಸಿ ಅವುಗಳ ವಿವರಣೆಗಳೊಂದಿಗೆ ವಿವರಿಸಲಾಗಿರುತ್ತದೆ. ಒಟ್ಟಾರೆಯಾಗಿ ಸಚಿತ್ರವಾಗಿ ಪ್ರಬಂಧವನ್ನು ಬರೆಯಲು ಪ್ರಯತ್ನಿಸಲಾಗಿದೆ. [18]

**ಇಲ್ಲಿಯವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಹಾಸನ ಜಿಲ್ಲೆಯ ಅಲ್ಲದೆ ಚನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿನ ಅಧ್ಯಯನಗಳು ಸಾಕಷ್ಟು ಸಂಖ್ಯೆಯಲ್ಲಿ ಆಗಿವೆ. ಶಾಸನಗಳು, ದೇವಾಲಯಗಳು, ಸಾಹಿತ್ಯಕೃತಿಗಳು, ವಿದೇಶಿ ಪ್ರವಾಸಿಗರ ಬರವಣಿಗೆಗಳು ಹಾಗೂ ಇನ್ನಿತರ ಆಕರಗಳ ಮೂಲಕ ಕಂಡು ಬಂದಿರುವ ದೇವಾಲಯಗಳ ಬಗೆಗೆ ಮಾಹಿತಿ ರೂಪದಲ್ಲಿ ವಿವರಣೆಗಳನ್ನು ತಿಳಿಸಿಕೊಡುವ ಅಧ್ಯಯನಗಳು ನಡೆದಿವೆ ಆದರೆ ಒಟ್ಟಾರೆಯಾಗಿ ಚನ್ನರಾಯಪಟ್ಟಣದ ಭೌಗೋಳಿಕ ವ್ಯಾಪ್ತಿಗೆ ಒಳಗೊಂಡಂತೆ ಸಾಂಸ್ಕೃತಿಕ ಮಹತ್ವವನ್ನು ಒಳಗೊಂಡಂತೆ, ಮಹತ್ವ ವಾಸ್ತುಶಿಲ್ಪ, ಮೂರ್ತಿ ಶಿಲ್ಪದ ವೈಶಿಷ್ಟ್ಯಗಳನ್ನು ಅನುಲಕ್ಷಿಸಿ ವಿಶ್ಲೇಷಿಸುವ ಅಧ್ಯಯನಗಳು ಬಹುಶಃ ನಡೆದಿಲ್ಲವೆಂದು ಹೇಳಬಹುದಾಗಿದೆ. [19] ಎಂ. ಚಿದಾನಂದ ಮೂರ್ತಿರವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಸಂಶೋಧನಾ ಪ್ರಾಸ್ತಾವಿಕವೆಂಬಂತೆ ದೇವಾಲಯಗಳ ಕುರಿತಾದ ಅಧ್ಯಯನ ನಡೆದಿದೆ ಅಲ್ಲದೆ ಕೆಲವು ನಿಯತಕಾಲಿಕೆಗಳು, ಅಭಿನಂದನಾ ಗ್ರಂಥಗಳು ಮತ್ತು ಸ್ಮರಣ ಸಂಚಿಕೆಗಳನ್ನು ಬಿಡಿ ಬಿಡಿಯಾಗಿ ಸಾಂದರ್ಭಿಕ ಲೇಖನಗಳು ಮಾತ್ರ ಮೂಡಿ ಬಂದಿದೆ.

ಆದರೆ ದೇವಾಲಯಗಳ ಕುರಿತಾದ ಸಮಗ್ರವಾದ ಅಧ್ಯಯನ ನಡೆದಿಲ್ಲ. ಕೆಲವೊಂದು ಪ್ರಮುಖ ದೇವಸ್ಥಾನಗಳ, ಬಸದಿಗಳ ಕುರಿತು ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ಕುರಿತಂತೆ ಸಾಕಷ್ಟು ಅಧ್ಯಯನಗಳು ಆಗಿವೆ. ಆದರೆ ಚನ್ನರಾಯಪಟ್ಟಣ ತಾಲೂಕಿನ ವ್ಯಾಪ್ತಿಗೆ ಬರುವ ಸಾಕಷ್ಟು ಸಂಖ್ಯೆಯ ದೇವಾಲಯಗಳ ಬಸದಿಗಳ ಬಗ್ಗೆ ಅಧ್ಯಯನವೇ ನಡೆದಿಲ್ಲ ಎಂದು ಹೇಳಬಹುದು. ಶಿಲ್ಪ ಸೂತ್ರಗಳು, ಆಗಮಗಳು, ಮಯಮತ, ಮಾನಸಾರಗಳಂತಹ ಪುಸ್ಕತಗಳು ಪ್ರಾಚೀನವಾಗಿವೆ. ಕ್ರಿ.ಶ. 19ನೆಯ ಶತಮಾನದ ಮಧ್ಯಯುಗಿನ ಕಾಲದಿಂದಲೂ ಭಾರತೀಯ ದೇವಾಲಯಗಳನ್ನು ಕುರಿತ ಅಧ್ಯಯನ ಮತ್ತು ಅದರ ಫಲವಾಗಿ ಬಂದಂತಹ ಪಸ್ತಕಗಳು ದೇವಾಲಯಗಳ ಇತಿಹಾಸ ಅಧ್ಯಯನಕ್ಕಾರರ ಗಮನವನ್ನು ಸೆಳೆದಿದೆ ಎಂದು ಹೇಳಬಹುದು. ಇವುಗಳೆಲ್ಲವೂ ಅಂದಿನ ಕಾಲದ ಪ್ರಾಚೀನ ಪರಂಪರೆಯ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳಿಗೆ ಪೂರಕವಾಗಿವೆ ಎಂದು ಹೇಳಬಯಸುತ್ತೇವೆ. ಜೇಮ್ಸ್, ಫರ್ಗ್ಯೂಸನ್, ಹನಿಕಸನ್ಸ್, ಇ.ಬಿ. ಹ್ಯಾವೆಲ್, ಸ್ಮೆಲ್ಲಾಕ್ರಾಮರಿಷ್ ಮೊದಲಾದ ವಿದೇಶಿ ಇತಿಹಾಸ ಚಿಂತಕರು, ಸಂಶೋಧಕರು ಅಧ್ಯಯನವನ್ನು ನಡೆಸಿರುತ್ತಾರೆ. ಭಾರತ ದೇಶದ ವಿದ್ವಾಂಸರುಗಳಾದ ಸಿ. ಶಿವರಾಮ ಮೂರ್ತಿ, ಒ.ಸಿ. ಗಂಗೂಲಿ, ಪಿ.ಕೆ. ಆಚಾರ್ಯ, ಎನ್. ವೆಂಕಟರಮಣ್ಣಯ್ಯ, ಪಿ.ಎನ್. ಬೋಸ್, ಕೆ.ವಿ. ಸೌಂದರರಾಜನ್, ಕೆ.ಆರ್. ಶ್ರೀನಿವಾಸನ್, ಎ.ವಿ. ನರಸಿಂಹ

ಮೂರ್ತಿ, ಎಂ.ಎಸ್, ಕೃಷ್ಣಮೂರ್ತಿ, ಡಾ. ದೇವರಕೊಂಡ ರೆಡ್ಡಿ, ಎನ್.ಎಸ್. ರಂಗರಾಜು, ಶ್ರೀನಿವಾಸ ಪಾಡಿಗಾರ್ ಮೊದಲಾದವರು ದೇವಾಲಯಗಳ ಬಗ್ಗೆ ವಾಸ್ತುಶಿಲ್ಪ ಮತ್ತು ಸಾಂಸ್ಕೃತಿಕ ಪರಿಸರ ಕುರಿತಾದ ಕೆಲವು ಅಧ್ಯಯನಗಳನ್ನು ಮಾಡಿರುತ್ತಾರೆ. ಎಪಿಗ್ರಾಫಿಯ ಕರ್ನಾಟಕ ಸಂಪುಟಗಳು ಚನ್ನರಾಯಪಟ್ಟಣ ತಾಲೂಕಿನ ಹಾಗೂ ಹಾಸನ ಜಿಲ್ಲೆಯ ಇತಿಹಾಸವನ್ನು ತಿಳಿಸುತ್ತದೆ. ಶಾಸನಗಳು ಅಂದಿನ ಕಾಲದ ಸಾಹಿತ್ಯ ಭಂಡಾರವೇ ಆಗಿದೆ.

ಬೆಂಜಮಿನ್ ಲೂಯಿರೈಸ್‌ರ ಶಾಸನಗಳ ಸಂಶೋಧನೆಯಿಂದ ಅವರನ್ನು ನೆನೆಯಲ್ಲೇಬೇಕು. ರೈಸ್‌ರವರ ಉಪಕಾರ ಅಪಾರವಾದದ್ದು. ನೂರು ವರ್ಷದ ಹಿಂದೆ ಅವರು ಕನ್ನಡನಾಡಿಗೆ ಬಂದು ಕನ್ನಡ ಕಲಿತು ಕನ್ನಡರಿಗೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಅವರು ಅಂದು ಪ್ರಾರಂಭಿಸಿದ ಎಪಿಗ್ರಾಫಿಯ ಕರ್ನಾಟಕದ ಸಂಪುಟಗಳನ್ನು ಪುನರ್ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಹೊಸ-ಹೊಸ ಸಂಪುಟಗಳನ್ನು ಹೊರ ತರುತ್ತಿದ್ದಾರೆ. ಎಂಟು, ಒಂಭತ್ತು, ಹತ್ತು ಸಂಖ್ಯೆಯ ಸಂಪುಟಗಳು ಹಾಸನ ಜಿಲ್ಲೆಗಳಿಗೆ ಸೇರಿವೆ ಒಂದನೇ ಸಂಪುಟವು ಶ್ರವಣಬೆಳಗೊಳದ ಸಂಪುಟವಾಗಿದೆ. ಈ ನಾಲ್ಕು ಸಂಪುಟಗಳು ಹಾಸನ ಜಿಲ್ಲೆಯ ಶಾಸನಗಳಿಗೆ ಪೂರಕವಾಗಿವೆ. ಉವುಗಳು ಹಾಸನ ಜಿಲ್ಲೆಯ ಶಾಸನಗಳ ಸಮೃದ್ಧಿಯನ್ನು ನೀಡುವಂತೆಹ ಕನ್ನಡಿಯಾಗಿದೆ.

ಶಾಸನಗಳ ಸಂಖ್ಯೆ ಮತ್ತು ಸತ್ವದ ದೃಷ್ಠಿಯಿಂದ ಈ ಶಾಸನಗಳಿಗೆ ಪ್ರಾಮುಖ್ಯತೆ ಇದೆ, ಚನ್ನರಾಯಪಟ್ಟಣ ತಾಲೂಕಿನ ಶ್ರವಣಬೆಳಗೊಳದ ಶಾಸನಗಳಿಗೆ ಸಿಂಹಪಾಲು ದೊರೆತಿದ್ದ ಚಾರಿತ್ರಿಕ ಹಾಗೂ ಬೇರೆ ಬೇರೆ ರೀತಿಯಲ್ಲಿ ಪ್ರಖ್ಯಾತ ಹೊಂದಿರುವ ಶಿಲಾಶಾಸನಗಳು ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿ (ಚಂದ್ರಗಿರಿ) ಬೆಟ್ಟ ಉತ್ತಮವಾಗಿದೆ. ಕ್ರಿ.ಶ. 6ನೇ ಶತಮಾನದಿಂದ ಆರಂಭವಾಗಿ ಏಳನೆಯ ಶತಮಾನದ ಹೊರಳು ಹಾದಿಯಲ್ಲಿ ಬರೆಯಲಾದ ಈ ಕಲ್ಲುರೆಹಗಳ ಹಿರಿಮೆಯನ್ನು ತಿಳಿಸುತ್ತಾ ಅನೇಕ ಪುಸ್ತಕಗಳನ್ನು ಬರೆದಿರುತ್ತಾರೆ. ಚಿಕ್ಕಬೆಟ್ಟ ಕನ್ನಡ ಶಾಸನಗಳ ತಲಕಾವೇರಿ ಅಡುನುಡಿಯಾಗಿದ್ದ ಕನ್ನಡ ಭಾಷೆಯನ್ನು ಸಾಹಿತ್ಯ ಭಾಷೆಯಾಗಿ ಬಳಸಿ ಕಾವ್ಯ ಮತ್ತು ಗಂಭೀರ ಶಾಸ್ತ್ರಾದಿ ವಿಷಯಗಳ ಮಾಧ್ಯಮವಾಗಿಸಿ ಬೆಳೆಸಿದ ಮೊದಲ ಹೆಜ್ಜೆಗಳು ಇಲ್ಲನ ಆರು-ಏಳನೆಯ ಶತಮಾನದ ಶಾಸನಗಳಲ್ಲಿ ಕಂಡು ಬರುತ್ತದೆ. ಮೌರ್ಯ ಚಕ್ರವರ್ತಿ ಚಂದ್ರಗುಪ್ತನು ರಾಷ್ಟ್ರಕೂಟ ಚಕ್ರವರ್ತಿ ನಾಲ್ಕನೆಯ ಇಂದ್ರನೂ ಇದ್ದದ್ದು ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿದದ್ದು ಶಾಸನದಿಂದ ತಿಳಿದು ಬರುತ್ತದೆ. ಕರ್ನಾಟಕ ಹಾಗೂ ದಕ್ಷಿಣ ಭಾರತದ ಇತಿಹಾಸದಲ್ಲಿ ಸಂಭಾವಿಸಿದ ಕೆಲವು ಘಟನೆಗಳು ಹಾಸನ ಜಿಲ್ಲೆ ಹಾಗೂ

ಚನ್ನರಾಯಪಟ್ಟಣ ತಾಲೂಕಿನಲ್ಲಿ ನಡೆದಿದೆ. ಅವುಗಳಲ್ಲಿ ಅತಿ ಮಹತ್ವದ ಸಂಗತಿಯೊಂದನ್ನು ತಿಳಿಸುವ ಶಾಸನ ಇದೆ.

ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯ, ಪೆರ್ಮಾಡಿದೇವ ಎಂಬ ಅರಸರು ಸಹ ಈ ಭಾಗದಲ್ಲಿ ಪ್ರಖ್ಯಾತನಾಗಿದ್ದಾನೆ. ತನ್ನ ಐವತ್ತು ವರ್ಷಗಳ ಆಳ್ವಿಕೆಯನ್ನು ಈತನು ಜಯದ ಅಲೆಗಳ ಮೇಲೆ ತೇಲಿದನು. ಆದರೆ ಈತನಿಗೆ ಸಹಲು ಮಾಡಿದವನು ತಲಾಡಿನ ದೊರೆ ಗಂಗರಾಜ ಎಂದು ತಿಳಿಯಬರುತ್ತದೆ. ಕ್ರಿ.ಶ. 19ನೇ ಶತಮಾನದ ಕೊನೆಯ ಸಮಯದಲ್ಲಿ ಹಾಸನ ಜಿಲ್ಲೆಯ ಬಹುತೇಕ ಪ್ರಾಂತ್ಯಗಳಲ್ಲಿ ಪುರಾತತ್ವ ಅನ್ವೇಷಣೆ ನಡೆದಿರುವುದು ತಿಳಿದು ಬರುತ್ತದೆ.

ರಾಬರ್ಟ್ ಬ್ರೂಸ್ ಪೂಟ್ ಎಂಬ ಇತಿಹಾಸಕಾರ ಖ್ಯಾತ ಸಂಶೋಧಕ ಈ ಪ್ರಾಂತ್ಯದಲ್ಲಿ ಸುತ್ತಾಡಿ ಹಲವಾರು ಪುರಾತನ ಸಂಸ್ಕೃತಿಯ ನೆಲೆಗಳನ್ನು ಗುರುತಿಸಿದ್ದಾನೆ. ಬಿ.ಎಲ್. ರೈಸ್‌ರವರು ಸಹ ಈ ಪ್ರಾಂತ್ಯದಲ್ಲಿ ಸಂಶೋಧನೆ ನಡೆಸಿದ್ದಾರೆ. 1897ರಲ್ಲಿ ಪ್ರಕಟವಾದ ಮೈಸೂರು ಸಂಸ್ಥಾನದ ಗೆಜೆಟಿಯರ್‌ನಲ್ಲಿ ಹಾಸನ ಜಿಲ್ಲೆಯ ಪ್ರದೇಶಗಳಿಗೆ ಸೇರಿದ ಹಲವಾರು ವಿಚಾರಗಳನ್ನು ಗ್ರಂಥದಲ್ಲಿ ನೀಡಿದ್ದಾರೆ. ನಂತರ ಬೆಳವಣಿಗೆಯಲ್ಲಿ ಬಿ.ಎಲ್. ರಐಸ್‌ರವರು ರಾಜ್ಯ ಪುರಾತತ್ವ ಇಲಾಖೆಯ ನಿರ್ದೇಶಕರಾಗಿ ಶಾಸನಗಳ ಸಂಪಾದನೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದಾರೆ. ಆಮೇಲೆ ಈ ಇಲಾಖೆಗೆ ನಿರ್ದೇಶಕರಾಗಿ ಬಂದ ನರಸಿಂಹಚಾರ್ಯರವರು ಸಹ ಶಾಸನಗಳ ಬಗ್ಗೆ ಶೋಧನೆ ಮಾಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಇತ್ತೀಚಿಗೆ ಈ ಜಿಲ್ಲೆಯ ಬಗೆ ಕೆಲವೊಂದು ಎಪಿಗ್ರಾಫಿಯ ಕರ್ನಾಟಕ ಸಂಪುಟಗಳನ್ನು ಪ್ರಕಟಿಸಿದ್ದಾರೆ. ಚನ್ನರಾಯಪಟ್ಟಣ ತಾಲೂಕು ಬಹಳ ಪ್ರಾಚೀನವಾದ ಪ್ರಾಂತ್ಯ. ಈ ಪ್ರಾಂತ್ಯ ಪ್ರಾಚೀನ ಗಂಗವಾಡಿಯ 96,000 ಎಂಬ ವಿಶಾಲ ಪ್ರಾಂತ್ಯದ ಭಾಗವಾಗಿತ್ತು. ಆರ್. ನರಸಿಂಹಚಾರ್‌ರವರು, ಎಂ.ಎ. ಆರ್‌ಗಳಲ್ಲಿ ಹೊಯ್ಸಳ ದೇವಾಲಯಗಳನ್ನು ಕುರಿತು ಗ್ರಂಥ ರಚಿಸಿದವರಲ್ಲಿ ಮೊದಲಿಗರು ಎಂದರೆ ತಪ್ಪಾಗಲಾರದು. ಇವರ ನಂತರ ಆರ್. ಶಾಮಶಾಸ್ತ್ರಿರವರು ಅಲ್ಲದೆ ಎಂ.ಹೆಚ್.ಕೃಷ್ಣ ಎಂಬುವವರು ಹೊಯ್ಸಳರ ದೇವಾಲಯಗಳನ್ನು ಕುರಿತು ಬರೆದವರಲ್ಲಿ ಪ್ರಮುಖರು ಆಗಿದ್ದಾರೆ. ಈ ಎಲ್ಲಾ ವಿದ್ವಾಂಸರು ಶಾಸನಗಳನ್ನು ಓದಿ ವಿಶ್ಲೇಷಿಸಿ ಅವುಗಳಲ್ಲಿರುವ ಐತಿಹಾಸಿಕ, ಚಾರಿತ್ರಿಕ, ಧಾರ್ಮಿಕ ವಿಷಯಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ. ಇವುಗಳೆಲ್ಲವೂ ಮೇಲೆ ತಿಳಿಸಿದ ಎಪಿಗ್ರಾಫಿಯ ಕರ್ನಾಟಕ ಎಂಬ ಸಂಪುಟಗಳಲ್ಲಿ ಪ್ರಕಟಗೊಂಡಿದೆ. ಅಲ್ಲದೆ ಸೌತ್ ಇಂಡಿಯನ್ ಇನ್ಸ್‌ಕ್ರಿಪಿಷನ್ಸ್ ಗ್ರಂಥಗಳಲ್ಲಿಯೂ ಹಲವಾರು ಶಾಸನಗಳು ಬೆಳಕು ಕಂಡಿವೆ.

ಕರ್ನಾಟಕದ ದೇವಾಲಯಗಳ ಬಗ್ಗೆ ವೈಜ್ಞಾನಿಕವಾದ ಮತ್ತು ಕ್ರಮ ಬದ್ಧವಾದ ಅಭ್ಯಾಸ ಈ ಕಾಲದಲ್ಲಿಯೇ ಆರಂಭವಾಯಿತು. ನರಸಿಂಹಚಾರ್‌ರವರು ಹೊಯ್ಸಳ ದೇವಾಲಯಗಳನ್ನು ಕುರಿತು ವಿವರವಾಗಿ ಅಧ್ಯನ ಮಾಡಿ ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್‌ಗಳಲ್ಲಿ ಪ್ರಕಟಿಸಿದರು. ಈ ರೀತಿಯ ಲೇಖನಗಳು ತದ ನಂತರದ ಕಾಲದಲ್ಲಿ ಬಂದ ವಿದ್ವಾಂಸರಲ್ಲಿ ಈ ಪ್ರದೇಶದ ದೇವಾಲಯಗಳ ಶಿಲ್ಪಗಳ ಕುರಿತು ಆಸಕ್ತಿ ಉಂಟಾಯಿತು ಎಂದು ತಿಳಿಯಬಹುದಾಗಿದೆ.

ಭಾರತೀಯ ಕಲಾ ಇತಿಹಾಸದ ಮೇಲೆ ಅದರಲ್ಲೂ ವಿಶೇಷವಾಗಿ ವಾಸ್ತು ಮತ್ತು ಶಿಲ್ಪ ಕಲೆಗಳ ಬಗ್ಗೆ ಗ್ರಂಥ ರಚಿಸಿದಂತಹ ವಿದ್ವಾಂಸರು ಕರ್ನಾಟಕದ ವಾಸ್ತು ಶಿಲ್ಪಗಳನ್ನು ವಿವರಿಸುವಾಗ ಮತ್ತು ಶಿಲ್ಪಕಲೆಯ ವಿಚಾರವನ್ನು ಮತ್ತು ಶಿಲ್ಪಗಳನ್ನು ಹಿರಿಯರು ಅಭ್ಯಾಸಿಸಿದ್ದಾರೆ. ಆದರೆ ಸಾಂಸ್ಕೃತಿಕ ವಿಚಾರಕ್ಕೆ ಪೂರಕವಾಗಿ ಅಧ್ಯಯನ ಆಗಿಲ್ಲವೆಂದು ಹೇಳಬಹುದು. ಇದೇ ವಿಚಾರವನ್ನು ಕುರಿತು ಬೆಂಗಳೂರಿನ ಮಿಥಿಕ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ (ಕ್ಯೂ.ಜೆ.ಎಂ.ಎಸ್)ನಲ್ಲಿ ಹಲವಾರು ಲೇಖನಗಳು ಪ್ರಕಟವಾಗಿವೆ. ಎ.ಎನ್. ಕೃಷ್ಣಯ್ಯಂಗಾರ್, ಬಿ.ಎಸ್. ಜೋಷಿ ಇನ್ನೂ ಮೊದಲಾದವರು ಶ್ರೀ ವೈಷ್ಣವ ಧರ್ಮ ಹೊಯ್ಸಳ ರಾಜವಂಶ ಕುರಿತು ಹಲವಾರು ವಿಚಾರಗಳನ್ನು ಬರೆದಿರುತ್ತಾರೆ. ಇವರುಗಳಲ್ಲದೆ ಬಿ.ಕೆ. ಗುರುರಾಜ್‌ರಾವ್, ಡೆಲಾಬೋಂಟಾ, ವಿ. ಕಾಮೇಶ್ವರರಾವ್, ಜಾರ್ಜ್‌ಮಿಶೆಲ್, ಆ. ಸುಂದರ, ಕೆ.ವಿ. ಸೌಂದರರಾಜನ್, ಬಿ.ಷೇಕ್ ಆಲಿ, ಮೊದಲಾದವರು ವಿಭಿನ್ನ ರೀತಿಯ ಲೇಖನಗಳನ್ನು ರಚಿಸಿದ್ದಾರೆ. ವಾಸ್ತು ಮತ್ತು ಶಿಲ್ಪಗಳನ್ನು ಕುರಿತಂತೆ ಅಪಾರವಾದ ವಿಷಯಗಳನ್ನು ತಿಳಿಯಲು ಶುಲ್ಬ ಸೂತ್ರಗಳು, ಆಗಮಗಳು, ಮಯಮತ, ಮಾನಸಾರ ಇತ್ಯಾದಿ ವಾಸ್ತುಶಿಲ್ಪ ಕುರಿತ ಪ್ರಾಚೀನ ಪುಸ್ತಕಗಳು ಅಲ್ಲದೆ ಕ್ರಿ.ಶ. 19ನೇ ಶತಮಾನದ ಮಧ್ಯಕಾಲದಿಂದಲೂ ದೇವಸ್ಥಾನಗಳನ್ನು ಕುರಿತ ಅಧ್ಯಯನ ಹಾಗೂ ಅದನ್ನು ಕುರಿತು ಪುಸ್ತಕಗಳು ದೇವಾಲಯಗಳ ಇತಿಹಾಸಕ್ತಕ ಗಮನ ಸೆಳೆದಿದೆ. ಈ ವಿಚಾರವನ್ನು ಕುರಿತು ವಿದೇಶಿ ವಿದ್ವಾಂಸರುಗಳು ಸಂಶೋಧನೆಯನ್ನು ನಡೆಸಿರುತ್ತಾರೆ. ಆದರೆ ಅವರು ಸಹ ಸಾಂಸ್ಕೃತಿಕವಾಗಿ ಅಧ್ಯಯನವನ್ನು ನಡೆಸಿಲ್ಲ. ಭಾರತೀಯ ಪ್ರಾಚೀನ ಶಿಲ್ಪ ಶಾಸ್ತ್ರವನ್ನು ಕುರಿತಂತೆ ಅನೇಕ ಗ್ರಂಥಗಳು ಪ್ರಕಟಗೊಂಡಿರುವುದು ತಿಳಿದುಬರುತ್ತದೆ. ಆದರೆ ದುರದೃಷ್ಟವಶಾತ್ ಅವು ಉಪಲಬ್ದವಿಲ್ಲ. ವಾಸ್ತುಶಾಸ್ತ್ರ ಮತ್ತು ವಿಗ್ರಹವನ್ನು ಕೆತ್ತುವ ಶಿಲ್ಪವಿದ್ಯೆ ಈ ಎರಡು ಸೇರಿ ಶಿಲ್ಪ ಶಾಸ್ತ್ರವಾಗಿದೆ. ಈ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಅಧಿಕೃತವಾದ 32 ಗ್ರಂಥಗಳಿವೆ.

ಪಿ.ವಿ. ಜಗದೀಶ್ ಅಯ್ಯರ್‌ರವರ ಸೌತ್ ಇಂಡಿಯನ್ ಶ್ರೈನ್ಸ್ (1920) ಎಂಬ ಪುಸ್ತಕದಲ್ಲಿ 43 ಅಧ್ಯಾಯಗಳಿವೆ. 116 ಛಾಯಾಚಿತ್ರಗಳಿವೆ. ಬಿ. ವೆಂಕೋಬರಾಯ ಅವರು ಮೈಸೂರು ದೇಶದ ವಾಸ್ತುಶಿಲ್ಪ (1928) ಎಂಬ ಪುಸ್ತಕದಲ್ಲಿ ಹಳೆಯ ಮೈಸೂರು ರಾಜ್ಯದ ದೇವಾಲಯಗಳನ್ನು ಕುರಿತು ರಚಿಸಿದ್ದಾರೆ. ಇದರಲ್ಲಿ ಮೈಸೂರು ದೇಶದ ವಾಸ್ತುಶಿಲ್ಪದ ಹಿನ್ನೆಲೆಯನ್ನು ಕುರಿತು ಬರಿದಿದ್ದಾರೆ. ಇದರಲ್ಲಿ ದಕ್ಷಿಣ ಪ್ರದೇಶದಲ್ಲಿನ ಕಟ್ಟಡಗಳಲ್ಲಿ ಯಾವುದೋ ಪ್ರಾಯಶಃ ಕ್ರಿ.ಶ. 6ನೆಯ ಶತಮಾನಕ್ಕಿಂತ ಹಿಂದಿನದಲ್ಲಿ ಅಲ್ಲಿಂದ ಮುಂದಿಕ್ಕೆ ಕಟ್ಟಡ ಕಟ್ಟಡಗಳು ಯಥೇಚ್ಛವಾಗಿದೆ ಎಂಬ ಅಭಿಪ್ರಾಯ ವ್ಯಕ್ತಿಪಡಿಸಿದ್ದಾರೆ.

ಪಿ.ಆರ್. ಶ್ರೀನಿವಾಸನ್‌ರವರ ದಕ್ಷಿಣ ಭಾರತದ ದೇವಾಲಯಗಳು (1959) ಎಂಬ ಪುಸ್ತಕದಲ್ಲಿ ಆಧ್ಯಾತ್ಮಿಕ ವಿಕಾಸಕ್ಕೆ ದೇಹದಂಡನೆಯ ಪ್ರಯೋಗ ಮಾಡಬೇಕೆಂದು ತಿಳಿದು ಧಾರ್ಮಿಕ ಆಚಾರಗಳು ಬೆಳೆದು ದೇವಾಲಯಗಳಿಗೆ ಪ್ರೇರಣೆಯಾಯಿತ್ತೆಂದು ತಿಳಿದುಬರುತ್ತದೆ. ಈ ಪುಸ್ತಕದಲ್ಲಿ ಜನಪದ ದೇವರುಗಳ ಬಗ್ಗೆ ವಿವರಗಳಿವೆ. ಸ್ತ್ರೀ ದೇವತೆಗಳ ಆರಾಧನೆಯ ಬಗೆಗೆ ವಿಚಾರಗಳಿವೆ. ಸ್ಥಳೀಯ ಗ್ರಾಮದ ದೇವತೆಗಳಿಂದ ಇನ್ನಿತರ ಶಿಷ್ಟದೇವತೆಗಳವರೆಗೆ ಆದಂತಹ ಧಾರ್ಮಿಕ ಬೆಳವಣಿಗೆಯ ವಿಷಯಗಳು ಗ್ರಂಥದಲ್ಲಿ ಕಂಡು ಬರುತ್ತದೆ.

ಎಸ್. ಶ್ರೀಕಂಠಶಾಸ್ತ್ರಿರವರ ಹೊಯ್ಸಳ ವಾಸ್ತುಶಿಲ್ಪ (1965) ರ ಪ್ರಕಾರ ಹೊಯ್ಸಳ ವಾಸ್ತು ಶಿಲ್ಪವನ್ನೇ ವಿಶೇಷವಾಗಿ ಪರಿಚಯಿಸುವ ಗ್ರಂಥವಾಗಿದೆ. ಇದು ಹೊಯ್ಸಳ ಶೈಲಿಯ ದೊಡ್ಡದಾದ ಮತ್ತು ಚಿಕ್ಕ ದೇವಾಲಯಗಳನ್ನು ತಿಳಿಸುವಂತಹ ಒಂದು ಉತ್ತಮವಾದ ಸಣ್ಣದಾದ ಪುಸ್ತಕವಾಗಿದೆ. ಈ ಪುಸ್ತಕದಲ್ಲಿ ಕೆಲವೊಂದು ಛಾಯಾಚಿತ್ರಗಳನ್ನು ಮುದ್ರಿಸಲಾಗಿದೆ. ಟಿ.ವಿ. ಮಹಾಲಿಂಗಮ್‌ರವರ ದಿ ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್ (1970) ಎಂಬ ಪುಸ್ತಕದಲ್ಲಿ ದೇವಾಲಯಗಳ ವಿವಿಧ ಭಾಗಗಳ ಅಧ್ಯಯನವನ್ನು ಬರೆಯಲಾಗಿದೆ. ವಿ. ಕಾಮೇಶ್ವರರಾವ್‌ರವರ ಸೆಲೆಕ್ಟ್ ವಿಜಯನಗರ ಟೆಂಪಲ್ಸ್ ಆಫ್ ರಾಯಲಸೀಮೆ (1976) ಎಂಬ ಪುಸ್ತಕದಲ್ಲಿ ರಾಯಲಸೀಮೇ ಸಂಬಂಧಿಸಿದ ವಿಜಯನಗರ ಅರಸರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಅಧ್ಯಯನವನ್ನು ಕುರಿತಂತೆ ಚರ್ಚಿಸಲಾಗಿರುತ್ತದೆ. ಕ್ರಿ.ಶ. 1268ರಿಂದ ಕ್ರಿ.ಶ. 1612ರ ವರೆಗೆ ನಿರ್ಮಿಸಿರುವ 19 ದೇವಾಲಯಗಳ ಬಗ್ಗೆ ಅಲ್ಲದೆ ಅಂದಿನ ಕಾಲದ ಬಗ್ಗೆ ತಿಳಿಸಿರುತ್ತಾರೆ. ಪಿ.ಕೆ. ಆಚಾರ್ಯರವರ ಇಂಡಿಯನ್ ಆರ್ಕಿಟೆಕ್ಚರ್ (1979) ಎಂಬ ಪುಸ್ತಕದಲ್ಲಿ ವಾಸ್ತುಶೈಲಿ ಮತ್ತು ಶಿಲ್ಪಕಲಾ ಲಕ್ಷಣಗಳನ್ನು ತಿಳಿಸುವ ಪ್ರಾಚೀನ ಸಾಹಿತ್ಯ ಕೃತಿಗಳು ಹಾಗೂ ಶಾಸ್ತ್ರ ಗ್ರಂಥಗಳ ವಿಚಾರಗಳ ಬಗ್ಗೆ ವಿವರಗಳಿವೆ. ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ಕುರಿತು ಪ್ರಾಚೀನ ಪುಸ್ತಕಗಳಲ್ಲಿ ವಿಚಾರಗಳನ್ನು ತಿಳಿಸಲಾಗಿದೆ.

ಮಾನಸಾರ, ಮಯಮತ, ಪುರಾಣ, ಆಗಮ, ವೈದಿಕ, ಸಾಹಿತ್ಯ, ಬೌದ್ಧ ಸಾಹಿತ್ಯ ಮುಂತಾದವುಗಳನ್ನು ಆದರಿಸಿ ವಿಚಾರಗಳನ್ನು ಬರೆಯಲಾಗಿದೆ. ಎ. ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್ (1981) ಎಂಬ ಪುಸ್ತಕದಲ್ಲಿ ದೇವಾಲಯಗಳ ಪ್ರತಿಯೊಂದು ಭಾಗಗಳ ವಿವರಣೆಯನ್ನು ನೀಡಲಾಗಿರುತ್ತದೆ. ವಾಸ್ತುಶಿಲ್ಪದ ಅಧ್ಯಯನಕ್ಕೆ ಇದೊಂದು ಪ್ರಮುಖ ಪುಸ್ತಕವಾಗಿದೆ.

ಎಸ್.ಕೆ. ಮೇಟಿರವರ ಪೀಸಸ್ ಆಫ್ ಹೊಯ್ಸಳ ಆರ್ಟ್ ಬೇಲೂರು, ಹಳೆಬೀಡು, ಸೋಮನಾಥಪುರ (1979) ಎಂಬ ಪುಸ್ತಕದಲ್ಲಿ ಹೊಯ್ಸಳರ ಪ್ರಮುಖ ದೇವಾಲಯಗಳ ವಾಸ್ತುಶಿಲ್ಪ ರಚನೆಗಳ ವಿಭಿನ್ನ ರೀತಿಯ ವೈವಿಧ್ಯಮಯ ವಿಚಾರದ ಮೇಲೆ ಬೆಳಕನ್ನು ಚೆಲ್ಲಿದ್ದಾರೆ. ಕೆ. ಪದ್ಮನಾಭರವರ ಹೊಯ್ಸಳ ಸ್ಕಲ್ಪಚರ್ಸ್ ಎ ಕಲ್ಚರಲ್ ಸ್ಟಡಿ (1989) ಎಂಬ ಪುಸ್ತಕದಲ್ಲಿ ಹೊಯ್ಸರ ಕಾಲದ ದೇವಾಲಯದ ಲಕ್ಷಣಗಳು ಮತ್ತು ವಿವಿಧ ಮಾದರಿಗಳ ಬಗೆಗೆ ಮಾಹಿತಿಯನ್ನು ಒದಗಿಸಲಾಗಿರುತ್ತದೆ. ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಸಮಕಾಲೀನ ಸಮಾಜದಲ್ಲಿ ಅಂದು ಜಾನಪದರು ಧರಿಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು, ಕಿರೀಟಗಳು, ಪಾತ್ರೆಗಳು, ಸಂಗೀತ ಸಾಧಾನಗಳು, ಆಯುಧಗಳು ಹಾಗೂ ಇನ್ನಿತರ ವಸ್ತುಗಳ ಬಗ್ಗೆ ಸವಿವರವಾಗಿ ವಿಚಾರವನ್ನು ನೀಡಲಾಗಿರುತ್ತದೆ.

ಕೆ. ಇಸ್ಮಾಯಿಲ್‌ರವರ ಕರ್ನಾಟಕ ಟೆಂಪಲ್ಸ್ (1984) ಎಂಬ ಗ್ರಂಥದಲ್ಲಿ ಎಂಟು ಅಧ್ಯಾಯಗಳನ್ನೊಳಗೊಂಡಿದ್ದು ಸಾಮಾಜಿಕ ಹಾಗೂ ಆರ್ಥಿಕ ಕೊಡುಗೆಗಳಲ್ಲಿ ದೇವಾಲಯಗಳ ಪ್ರಾಮುಖ್ಯತೆ ಏನು ಎಂಬ ವಿಚಾರ ತಿಳಿದು ಬರುತ್ತದೆ. ಇದು ಅಲ್ಲದೆ ಕೆಲವೊಂದು ವಿಚಾರಗಳ ವಿಮರ್ಶೆಯಲ್ಲಿ ಹೆಚ್ಚಾಗಿ ಶಾಸನಾಧಾರಗಳನ್ನು ಒಳಗೊಂಡಿರುತ್ತದೆ.

ಎಸ್.ಕೆ. ರಾಮಚಂದ್ರರಾವ್‌ರವರ ಪುಸ್ತಕ ಭಾರತದ ದೇವಾಲಯ ನೆಲೆ–ಹಿನ್ನೆಲೆ (1960) ಎಂಬ ಗ್ರಂಥದಲ್ಲಿ ದೇವಾಲಯದ ಉಗಮ ಮತ್ತು ಬೆಳವಣಿಗೆಯ ಬಗ್ಗೆ ಸವಿವರಗಳನ್ನು ಚರ್ಚಿಸಲಾಗಿರುತ್ತದೆ. ಬಹುಮುಖಿ ಸಂಸ್ಕೃತಿಯುಳ್ಳ ಮನುಷ್ಯನು ತನ್ನ ಮಾನಸಿಕ ಕಲ್ಪನೆಗೆ ಒಂದು ರೂಪ ಕೊಟ್ಟಿರುವುದೇ ಧರ್ಮವಾಯಿತು. ಅವರ ಕೈಕೆಲಸ ಮೂರ್ತಿ ಶಿಲ್ಪವಾಯಿತು ಎಂದಿದ್ದಾರೆ. ಕೆಲವೊಂದು ದೇವಾಲಯಗಳ ವಾಸ್ತುಶೈಲಿಯನ್ನು ಸಹ ಈ ಗ್ರಂಥದಲ್ಲಿ ಬರೆಯಲಾಗಿದೆ.

ಐ.ಕೆ. ಶರ್ಮರವರ ಟೆಂಪಲ್ಸ್ ಆಫ್ ದಿಗಂಗಾಸ್ ಆಫ್ ಕರ್ನಾಟಕ ಎಂಬ ಪುಸ್ತಕದಲ್ಲಿ (1922)ರಲ್ಲಿ ಗಂಗರ ಕಾಲದ ದೇವಲಯಗಳ ವಾಸ್ತು ಶೈಲಿಯ ಉಗಮ ಮತ್ತು ಬೆಳವಣಿಗೆಯನ್ನು ತಿಳಿಸಿರುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಗಂಗರ ದೇವಾಲಯಗಳು ಬಹಳ

ಉತ್ತುಂಗ ಸ್ಥಿತಿಯಲ್ಲಿ ಇದ್ದವೆಂದು ತಿಳಿಸುತ್ತಾರೆ. ಪುಸ್ತಕ ಸಂಶೋಧನೆ ಪ್ರಬಂಧದ ವ್ಯಾಪ್ತಿಗೆ ಬರುವ ಹಾಸನ ಜಿಲ್ಲೆಯ ಕೆಲವೊಂದು ಪ್ರಾಂತ್ಯಗಳ ದೇವಸ್ಥಾನಗಳಲ್ಲಿ ಗಂಗರ ಕಾಲದ ವಾಸ್ತು ಪರಂಪರೆಯು ಕಂಡು ಬರುತ್ತದೆ.

ತಲಕಾಡಿನ ಗಂಗರ ದೇವಸ್ಥಾನಗಳು ಒಂದು ಅಧ್ಯಯನ (1994) ಎಂಬ ಗ್ರಂಥದಲ್ಲಿ ದೇವರಕೊಂಡಾ ರೆಡ್ಡಿರವರು ಬರಿದಿದ್ದಾರೆ. ಈ ಗ್ರಂಥದಲ್ಲಿ ತಲಕಾಡಿನ ಗಂಗರ ಕಾಲದ ದೇವಾಲಯಗಳು ಬೆಳೆದು ಬಂದ ದಾರಿ, ಉಗಮ ಮತ್ತು ವಿಕಾಸವನ್ನು ಚರ್ಚಿಸಿದ್ದಾರೆ. ಈ ಪುಸ್ತಕ ಡಾ. ದೇವರಕೊಂಡಾ ರೆಡ್ಡಿಯವರು ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಆಧರಿಸಿ ಗ್ರಂಥವನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಗಂಗರ ಸಾಂಸ್ಕೃತಿಕ ಸಾಧನೆಗಳಿಗೆ ಸಂಬಂಧಪಟ್ಟ ವಿಷಯಗಳು ತಿಳಿದು ಬರುತ್ತದೆ. ಅಲ್ಲದೆ ಬಾಣರು ಮತ್ತು ನೊಳಂಬರ ದೇವಾಲಯಗಳಲ್ಲಿ ಕಂಡು ಬರುವ ವಾಸ್ತು ಮತ್ತು ಗಂಗರ ವಾಸ್ತು ಪರಂಪರೆಯ ಶೈಲಿಯ ವಿಚಾರವನ್ನು ತಿಳಿಸಿರುತ್ತಾರೆ.

ಜೆ. ಜ್ಞಾನಾನಂದ ಇವರ ಪುಸ್ತಕ ಶಿಲ್ಪ ದರ್ಶನ (2002) ಇವರು ಎರಡು ಪುಸ್ತಕಗಳನ್ನು ರಚಿಸಿದ್ದಾರೆ. ಮೊದಲನೆಯ ಸಂಪುಟ ಶಿಲ್ಪ ಶಾಸ್ತ್ರದ ಗಂಭೀರ ಅಧ್ಯಯನಕ್ಕೆ ಮೂಲ ಆಕರವಾಗಿದೆ. ಎರಡನೆಯ ಸಂಪುಟದಲ್ಲಿ ಭಾರತೀಯ ದೇವಾಲಯಗಳ ಇತಿಹಾಸದ ಬಗೆಗೆ ಕುತೂಹಲಕರವಾದ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಲಾಗಿರುತ್ತದೆ. ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಸ್ವರೂಪ ವೈವಿಧ್ಯತೆಗಳನ್ನು ರೇಖಾಚಿತ್ರಗಳ ಮೂಲಕವೂ ಸಹ ತಿಳಿಸಲಾಗಿರುತ್ತದೆ.

ಎಸ್.ಎನ್. ಶಿವರುದ್ರಸ್ವಾಮಿರವರ ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ (1996) ಎಂಬ ಗ್ರಂಥದಲ್ಲಿ ವಿಜಯನಗರ ಅರಸರ ಕಾಲಕ್ಕೆ ಸೇರಿದ ದೇವಾಲಯಗಳನ್ನು ಕುರಿತು ಚರ್ಚಿಸಲಾಗಿರುತ್ತದೆ. ಅದರಲ್ಲಿ ವಾಸ್ತು ಶೈಲಿಯ ಲಕ್ಷಣ, ಶಿಲ್ಪಕಲೆಗಳ ಲಕ್ಷಣ ಅಲ್ಲದೆ ಕರ್ನಾಟಕದ ಪ್ರತಿಯೊಂದು ತಾಲೂಕುವಾರುಗಳಲ್ಲಿ ವಿಜಯನಗರ ಕಾಲದ ದೇವಾಲಯಗಳ ಪಟ್ಟಿಯನ್ನು ತಿಳಿಸಲಾಗಿರುತ್ತದೆ. ಈ ಪುಸ್ತಕದಲ್ಲಿ ಸುಮಾರು 169 ದೇವಾಲಯಗಳ ಚಿತ್ರಗಳನ್ನು ಸಹ ಹಾಕಿಸಲಾಗಿರುತ್ತದೆ.

ಬಿ. ಎಸ್. ಶೇಠರವರ ಪುಸ್ತಕವು ಕರ್ನಾಟಕದಲ್ಲಿ ಸತಿ ಪದ್ಧತಿ (1991) ಎಂಬ ಪಿಹೆಚ್.ಡಿ ಪುಸ್ತಕದಲ್ಲಿ ಸತಿ ಪದ್ಧತಿ ಉಗಮ ಮತ್ತು ವಿಕಾಸದೊಡನೆ ಅದರ ಅಚಿತಿಮ ಹಂತದವರೆಗಿನ ವಿಚಾರವನ್ನು ಚರ್ಚಿಸಲಾಗಿರುತ್ತದೆ. ಪ್ರಪಂಚಾದಾದ್ಯಂತ ಯಾವ ರೀತಿಯಲ್ಲಿ ಸತಿ ಪದ್ಧತಿ ಇದ್ದಿತ್ತೆಂಬುದನ್ನು ಉದಾಹರಣೆಗಳ ಸಹಿತ ವಿವರಿಸಿದ್ದಾರೆ. ಶಾಸನ ಪಾಠ ಮತ್ತು ಶಿಲ್ಪ ಲಕ್ಷಣಗಳ

ಜೊತೆಗೆ ಹಲವು ಸಾಹಿತ್ಯಧಾರಗಳನ್ನು ಬಳಸಿಕೊಂಡು ಸತಿಪದ್ಧತಿಯ ವಿಚಾರಗಳನ್ನು ಗ್ರಂಥದಲ್ಲಿ ಕಾಣಬಹುದಾಗಿದೆ.

ಎನ್.ಎಸ್. ರಂಗರಾಜು ರವರ ಗ್ರಂಥವು ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ (2001)ರ ಪಿಹೆಚ್.ಡಿ. ಪ್ರಬಂಧದಲ್ಲಿ ಮಂಡ್ಯ ಮತ್ತು ತುಮಕೂರಿನಲ್ಲಿ ಕಂಡು ಬರುವ ಹೊಯ್ಸಳ ದೇವಾಲಯಗಳ ಲಕ್ಷಣಗಳು ಉಗಮ ಮತ್ತು ವಿಕಾಸ ಹಾಗೂ ಕರ್ನಾಟಕದ ಹೊಯ್ಸಳ ವಾಸ್ತು ಶೈಲಿಗೆ ಈ ಎರಡು ಜಿಲ್ಲೆಗಳ ಕೊಡುಗೆಯನ್ನು ವಿವರಪೂರ್ಣವಾಗಿ ಚರ್ಚಿಸಿದ್ದಾರೆ.

ಎಂ.ಎ. ಡಾಕಿ ಮತ್ತು ಮೈಕಲ್ ಮೆಸ್ಟರ್‌ರವರು ಸಂಪಾದಿಸಿರುವ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಆಫ್ ಸೌತ್ ಇಂಡಿಯಾ ಲೋಯರ್ ದ್ರಾವಿಡ ದೇಶ (1983) ಅಪ್ಪರ್ ದ್ರಾವಿಡ ದೇಶದ (1986) ಎಂಬ ಶಬ್ದಕೋಶಗಳಲ್ಲಿ (ಭಾಗ–1, 2, 3) ಭಾರತೀಯ ದೇವಾಲಯಗಳ ವಾಸ್ತು ಲಕ್ಷಣಗಳ ಕುರಿತು ಪರಿಪೂರ್ಣವಾದ ವಿವರಣೆಯನ್ನು ತಿಳಿಸಲಾಗಿರುತ್ತದೆ. ಇವುಗಳಲ್ಲಿ ದ್ರಾವಿಡ ಮತ್ತು ನಾಗರ ಶೈಲಿಯ ದೇವಾಲಯಗಳನ್ನು ಕುರಿತಂತೆ ತಿಳಿಸುವ ಪುಸ್ತಕವಾಗಿರುತ್ತದೆ. ನನ್ನ ಸಂಶೋಧನಾ ವಿಚಾರಕ್ಕೆ ಪೂರಕವಾಗಿ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನಲ್ಲಿ ಕಂಡು ಬರುವ ಪ್ರಮುಖ ದೇವಾಲಯಗಳ ವಾಸ್ತು ಶೈಲಿಯನ್ನು ಕುರಿತಂತೆ ಸಂಶೋಧನಾತ್ಮಕ ವಿಚಾರವನ್ನು ತಿಳಿಸಲಾಗಿರುತ್ತದೆ. ಆದರೆ ಪರಿಪೂರ್ಣತೆಯನ್ನು ಹೊಂದಿಲ್ಲ. ಕೆಲವು ದೇವಾಲಯಗಳ ವಾಸ್ತು ಶೈಲಿಯನ್ನು ಕುರಿತ ವಿಚಾರಗಳಿವೆ. ಅದರ ಸಮಗ್ರವಾದ ಹಾಗೂ ಪರಿಪೂರ್ಣವಾದ ವಿಚಾರಗಳು ತಿಳಿದು ಬರುವುದಿಲ್ಲ. ಇವರ ಮತ್ತೊಂದು ಪುಸ್ತಕವಾದ ದಿ ಇಂಡಿಯನ್ ಟೆಂಪಲ್ ಫಾರ್ ಇನ್ ಕರ್ನಾಟಕ ಇನ್ಸ್ ಕ್ರಿಪಷನ್ಸ್ ಅಂಡ್ ಆರ್ಕಿಟೆಕ್ಚರ್ ಎಂಬ ಕೃತಿ ಭಾರತದಲ್ಲಿ ಪ್ರಚಲಿತದಲ್ಲಿರುವ ದ್ರಾವಿಡ, ನಾಗರ ಮತ್ತು ವೇಸರ ವಾಸ್ತು ಶೈಲಿಗಳ ಬಗ್ಗೆ ಕರ್ನಾಟಕದಲ್ಲಿ ದೊರೆಯುವ ಶಾಸನಗಳಿಂದ ವಿಷಯವನ್ನು ಕ್ರೋಢಿಕರಿಸಿಕೊಂಡು ಅದನ್ನು ಅಭ್ಯಾಸಿಸಿ ಅಧ್ಯಯನವನ್ನು ನಡೆಸಲಾಗಿರುತ್ತದೆ.

ಜಾರ್ಜ್ ಮೆಕಾಲೆ ರವರ ವಿಜಯನಗರ ಆರ್ಕಿಟೆಕ್ಚರಲ್ ಇನ್ ವೆಂಟರಿ ಆಫ್ ದಿ ಅರ್ಬನ್ ಟೆಕ್ಮರಲ್ (1900 – ಭಾಗ 1–2) ಎಂಬ ಪುಸ್ತಕದಲ್ಲಿ ವಿಜಯನಗರ ಕಾಲದ ಕೆಲವು ದೇವಾಲಯಗಳ ವಾಸ್ತು ಶೈಲಿಯ ಬೆಳವಣಿಗೆಯನ್ನು ನಕ್ಷೆಗಳ ಮೂಲಕ ವಿವರಣೆಯನ್ನು ನೀಡಲಾಗಿರುತ್ತದೆ. ಭಾಗ ಒಂದರಲ್ಲಿ ವಿವರಣೆ, ನಕ್ಷೆಗಳು ಹಾಗೂ ಭೂಪಟಗಳನ್ನು ಭಾಗ ಎರಡರಲ್ಲಿ 540 ಛಾಯಾಚಿತ್ರಗಳನ್ನು ನೀಡಲಾಗಿರುತ್ತದೆ.

ಜಾರ್ಜ್ ಮೆಕಾಲೆ ಮತ್ತು ಬಿ. ಫಿಲಿಪ್ಸ್ ವ್ಯಾಗನರ್‌ರವರು ಜೊತೆಗೂಡಿ ರಚಿಸಿದ ವಿಜಯನಗರ ಆರ್ಕಿಟೆಕ್ಚರ್ ಇನ್ ವೆಂಟರಿ ಆಫ್ ದಿ ಸ್ಯಾಕ್ರಡ್ ಎಂಬ ಪುಸ್ತಕವು ಮೂರು ಸಂಪುಟಗಳನ್ನು ಒಳಗೊಂಡಿದೆ. ಭಾಗ ಒಂದರಲ್ಲಿ ವಿರುಪಾಕ್ಷ, ಮನ್ಮಥ, ಹೇಮಕೂಟ, ಬೆಟ್ಟ (ಗಿರಿ) ಬಾಲಕೃಷ್ಣ, ತಿರುವೆಂಗಲನಾಥ ಮತ್ತು ವಿಠಲ ದೇವಾಲಯಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿರುತ್ತದೆ. ಭಾಗ 2ರಲ್ಲಿ 375 ನಕ್ಷೆಗಳನ್ನು ನೀಡಲಾಗಿರುತ್ತದೆ. ಭಾಗ 3ರಲ್ಲಿ ಛಾಯಾಚಿತ್ರಗಳು ಕಂಡು ಬರುತ್ತವೆ. ವಿಜಯನಗರ ಕಾಲದ ದೇವಾಲಯಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಈ ಪುಸ್ತಕ ಅತ್ಯಂತ ಮಹತ್ವ ಪೂರ್ಣವಾದ ಗ್ರಂಥವಾಗಿರುತ್ತದೆ.

ಗೆರಾರ್ಡ್ ಪೂಕೆ ಮಾರವರ ಹೊಯ್ಸಳಶ ಟೆಂಪಲ್ಸ್ (1996) ಎಂಬ ಪುಸ್ತಕದಲ್ಲಿ ಹೆಚ್ಚು ಕಡಿಮೆ ಸುಮಾರು 15 ಹೊಯ್ಸಳ ದೇವಾಲಯಗಳ ನಿರ್ಮಾಣದ ತಾಂತ್ರಿಕ ದೇವಾಲಯಗಳ ವಿನ್ಯಾಸಗಳು, ಭಿತ್ತಿ, ವಿಮಾನ, ನವರಂಗ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ದೇವಾಲಯಗಳ ಅಧಿಷ್ಠಾನದ ಬಗ್ಗೆ ತಿಳಿಸಿಲಾಗಿರುತ್ತದೆ. ಈ ಮೇಲೆ ತಿಳಿಸಿರುವ ಗ್ರಂಥಪಾಠಿ ಪಾಲಕರಗಳು ಅಲ್ಲದೆ ಹಲವಾರು ವಿದ್ವಾಂಸರು ಕರ್ನಾಟಕದ ದೇವಸ್ಥಾನಗಳ ವಾಸ್ತು ಮತ್ತು ಶಿಲ್ಪಕ್ಕೆ ಪೂರಕವಾದಂತೆ ಹಲವಾರು ಲೇಖನಗಳನ್ನು ರಚಿಸಿದ್ದಾರೆ. ಇತಿಹಾಸ ದರ್ಶನ 'ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್' ವಿಜಯನಗರ ಅಧ್ಯಯನ ಮೊದಲಾದ ಪುಸ್ತಕಗಳಲ್ಲಿ ಲೇಖನಗಳು ಪ್ರಕಟವಾಗಿವೆ.

ಈ ಎಲ್ಲಾ ಮಾಹಿತಿಗಳನ್ನು ಗಮನಿಸಿ ವಿಶ್ಲೇಷಿಸಿ ತನ್ನ ಅಧ್ಯಯನದಲ್ಲಿ ಸಂದರ್ಭೋಚಿತವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಜೊತೆಗೆ ಕ್ಷೇತ್ರ ಕಾರ್ಯ ಕೈಗೊಂಡು ಪ್ರತಿಯೊಂದು ದೇವಾಲಯಗಳನ್ನು ಪರಿಶೀಲಿಸಿ ವಿವರಣೆಗಳನ್ನು ಟಿಪ್ಪಣಿ ಮಾಡಿಕೊಂಡು ಅಧ್ಯಯನದ ವಸ್ತು ವಿಚಾರವನ್ನು ನನ್ನ ಸಂಶೋಧನಾ ಮಹಾ ಪ್ರಬಂಧದಲ್ಲಿ ಸೇರಿಸಿಕೊಂಡಿದ್ದೇನೆ. ಆಯಾ ಕ್ಷೇತ್ರದ ಸ್ಥಳ ಪುರಾಣಗಳನ್ನು ಕ್ರೋಢೀಕರಿಸಿ ಅವುಗಳ ಉಪಯೋಗವನ್ನು ಸೂಕ್ತವಾಗಿ ಅನುಸರಿಸಲಾಗಿರುತ್ತದೆ.

ಶಾಸನಗಳ ಬಳಕೆ:- ದೇವಾಲಯಗಳ ಬಗ್ಗೆ ಅಧ್ಯಯನ ಮಾಡಬೇಕಾದರೆ ಮೂಲ ದಾಖಲಾತಿಗಳಲ್ಲಿ ಶಾಸನಗಳು ಬಹಳ ಮುಖ್ಯವಾಗಿರುತ್ತದೆ. ನಮ್ಮ ಪ್ರಾಂತ್ಯದ ಹಾಗೂ ಸ್ಥಳೀಯ ಜನ ಸಾಮಾನ್ಯರುಗಳು ವಸ್ತು ಸ್ಥಿತಿಯ ಜನಸಾಮಾನ್ಯರುಗಳು ವಸ್ತು ಸ್ಥಿತಿಯನ್ನು ತಿಳಿಯಬೇಕಾದರೆ ನಮಗೆ ಶಾಸನಗಳು ಪ್ರಮುಖವಾಗಿವೆ.

ಎಂ. ಚಿದಾನಂದ ಮೂರ್ತಿರವರು ಶಾಸನಗಳಂತ ಉತ್ತಮವಾದ ಸಾಧನಗಳು ಇಲ್ಲಿ ಅಂಶ ಅಭಿಪ್ರಾಯವನ್ನು ವ್ಯಕ್ತ ಪಡಿಸಿರುತ್ತಾರೆ. ಬಹುಶಃ ಶಾಸನಗಳ ಹಿನ್ನೆಲೆಯ

ಆಧಾರವಿಲ್ಲದಿದ್ದರೆ ಸಮಗ್ರ ಇತಿಹಾಸವನ್ನು ರಚಿಸಲು ಸಾಧ್ಯವಿಲ್ಲ ಎಂದು ಹೇಳಬಯಸುತ್ತೇನೆ. ದೇವಾಲಯಗಳನ್ನು ಯಾವ ಕಾಲದಲ್ಲಿ ಕಟ್ಟಲಾಯಿತು. ಕಟ್ಟಿದವರ ಹೆಸರು, ಅದರ ಕಾಲಮಾನ ಅಲ್ಲದೆ ಅಂದು ಆ ನೆಲೆಯಲ್ಲಿ ಅಧಿಕಾರ ಮಾಡುತ್ತಿದ್ದವರ ಹೆಸರು ದೇವಾಲಯಗಳನ್ನು ಕಟ್ಟಡ ಸ್ಥಳ, ದೇವಾಲಯಕ್ಕೆ ದಾನ ನೀಡಿದವರ ಹೆಸರು, ಊರುಗಳ ಹೆಸರುಗಳು ದೇವಾಲಯವನ್ನು ಕೆತ್ತಿದ ಶಿಲ್ಪಿಯ ಹೆಸರು ಇನ್ನೂ ಮೊದಲಾದ ಸಂಗತಿಗಳು ಶಾಸನ ದಾಖಲೆಯಲ್ಲಿ ಕಂಡು ಬರುತ್ತವೆ. ಸಾಮಾನ್ಯವಾಗಿ ದೇವಾಲಯಗಳಿರಬಹುದಾದ ಸ್ಥಳಗಳನ್ನು ಗುರುತಿಸಲು ಮೊದಲಿಗೆ ಶಾಸನಗಳು ದೊರಕುವ ಸ್ಥಳಗಳನ್ನು ಆರಿಸಬೇಕಾಗುತ್ತದೆ.

ಕೆಲವು ಸ್ಥಳಗಳಲ್ಲಿ ದೇವಾಲಯಗಳ ಕುರುಹುಗಳೇ ಇಲ್ಲ. ಕೆಲವೊಮ್ಮೆ ದೊರೆತರೂ ಅಸ್ಪಷ್ಟವಾಗಿದೆ. ಶಾಸನಗಳ ಆಧಾರದ ಮೇಲೆ ಅನೇಕ ಕಡೆ ಅವುಗಳ ಕಾಲವನ್ನು ನಿರ್ಧರಿಸಲು ಸಹಾಯಕವಾಗುತ್ತದೆ. ನನ್ನ ಅಧ್ಯಯನಕ್ಕೆ ಪೂರಕವಾಗಿ ಹಾಸನ ಜಿಲ್ಲೆಗೆ ಸೇರಿದ ಎಪಿಗ್ರಾಫಿಯ ಕರ್ನಾಟಕದ ಸಂಪುಟಗಳನ್ನು ಇತ್ತೀಚೆಗೆ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಹೊರ ತರುತ್ತಿರುವ ಪರಿಷ್ಕೃತ ಸಂಪುಟಗಳನ್ನು ಸೇರಿಸಿಕೊಂಡಿದ್ದೇನೆ. ಈ ಜಿಲ್ಲೆಯ ಹಾಗೂ ಚನ್ನರಾಯಪಟ್ಟಣ ತಾಲೂಕಿನ ಶಾಸನಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ನಡೆಸಿದಾಗ ಅನೇಕ ದೇವಾಲಯಗಳು ಕಟ್ಟಲ್ಪಟ್ಟಿರುವುದು ಅಲ್ಲದೆ ಶಾಸನ ರಚನೆಯು ಕಾಲಕ್ಕೆ ಅಸ್ತಿತ್ವದಲ್ಲಿರುವುದು ತಿಳಿದುಬರುತ್ತದೆ. ರಾಜನೇ ನೇರವಾಗಿ ಪಾಲ್ಗೊಳ್ಳದಿದ್ದರೂ ಅವನ ಸಾಮಂತರೋ ಆಯಾ ಪ್ರಾಂತ್ಯದ ಅಧಿಕಾರಿಗಳೋ, ಶ್ರೀ ಸಾಮಾನ್ಯರೋ ನಿರ್ಮಿಸಿರುವುದು ಹೆಚ್ಚಾಗಿ ಕಂಡು ಬರುತ್ತದೆ. ಇಲ್ಲಿ ದೇವಾಲಯಗಳ ಕುರಿತು ಚರ್ಚಿಸಲಾಗಿರುವ ಶಾಸನಗಳನ್ನು ಸಂಪೂಣವಾಗಿ ಅಧ್ಯಯನಕ್ಕೆ ತೆಗೆದುಕೊಂಡಿದ್ದೇನೆ. ಆದರೆ ಶಾಸನಗಳಲ್ಲಿ ದೇವಾಲಯಗಳ ವಿವರಗಳು ಬಹಳ ಕಡಿಮೆ. ಇವುಗಳ ಮಾಹಿತಿಗಳು ಉಲ್ಲೇಖವಾಗಿರುವುದು ಕಂಡು ಬಂದರೂ ಕೂಡ ಅವು ವಾಸ್ತವ ನೋಟವನ್ನು ನೀಡುವುದಿಲ್ಲ. ಗಂಗರ ಕಾಲದ ದೇವಾಲಯಗಳನ್ನು ವಾಸ್ತು ಕೃತಿಯನ್ನು ನೀಡುವಾಗ ಅವರ ಪ್ರಭಾವ ವಲಯದಲ್ಲಿದ್ದ ಮತ್ತು ಅವರ ಸಾಮಂತರಾಗಿದ್ದ ಬಾಣ, ನೊಳಂಬ, ಇನ್ನೂ ಮೊದಲಾದ ರಾಜ ಮನೆತನಗಳ ಕೊಡುಗೆಯನ್ನು ಅನುಸರಿಸಲಾಗಿರುತ್ತದೆ.

ನೊಳಂಬರ ಕಾಲದ ಹಲವರು ದೇವಸ್ಥಾನ, ಗಂಗರ ಕಾಲದ ದೇವಸ್ಥಾನಗಳ ಅನುಕರಣೆಯಲ್ಲೇ ಕಂಡು ಬರುತ್ತವೆ. ವಿಜಯನಗರ ಅರಸರ ಕಾಲವಧಿಯಲ್ಲಿ ಸಾಮಂತ ರಾಜರು ಕಟ್ಟಿಸಿರುವ ದೇವಾಲಯಗಳು ಹೆಚ್ಚು ಕಡಿಮೆ ವಿಜಯನಗರ ಅರಸರು ಕಟ್ಟಿಸಿದ ಮೂಲ ದೇವಾಲಯಗಳ ರೀತಿಯಲ್ಲಿಯೇ ಕಂಡು ಬರುತ್ತವೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಗಂಗರ

ಕಾಲದಿಂದ ಮೈಸೂರು ಒಡೆಯರ್ ಕಾಲದವರೆಗೂ ಶಾಸನಗಳ ಜೊತೆ ಜೊತೆಗೆ ಕೆಲವು ತಾಮ್ರ ಶಾಸನಗಳು ಸಹ ಕಂಡು ಬಂದಿವೆ. ಕೆಲವು ತಾಮ್ರ ಶಾಸನಗಳಲ್ಲಿ ಗ್ರಾಮಗಳನ್ನು ಪತ್ತೆ ಮಾಡುವುದು ಸಾಧ್ಯವಾಗಿಲ್ಲ. ಇವುಗಳನ್ನು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆಗೆದುಕೊಂಡು ಹೋಗುವುದರಿಂದ ಇದು ಅಲ್ಲದೆ ವೈಯಕ್ತಿಕ ದಾಖಲೆಗಳಾಗಿದ್ದರಿಂದ ಇಂಥ ತೊಡಕು ಆಗಬಹುದು. ಕೆಲವು ಶಿಲಾಶಾಸನಗಳ ವಿಷಯದ ಬಗ್ಗೆ ತರ್ಕಬದ್ಧ ವಿಚಾರಗಳಿದ್ದರೂ ವಿಷಯದ ಹಿನ್ನೆಲೆಯಿಂದ ಅವುಗಳು ಪ್ರಾಂತೀಯವಾಗಿ ಮಾಹಿತಿಯನ್ನು ಒದಗಿಸುತ್ತದೆ.

ಈ ವಿಚಾರದಿಂದ ಚನ್ನರಾಯಪಟ್ಟಣ ತಾಲೂಕಿನಲ್ಲಿ ದೊರೆಯುವ ಪ್ರಾಂತೀಯವಾಗಿ ದೊರಕುವ ಶಾಸನಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಆಯಾ ಧರ್ಮದ ದೇವತೆಗಳ ಶಿಲ್ಪಗಳನ್ನು ಕೆತ್ತಿರುವುದು ಗಮನಾರ್ಹ ಅಂಶವಾಗಿದೆ. ಕರ್ನಾಟಕದಲ್ಲಿ ಶೈವ, ವೈಷ್ಣವ, ಜೈನ ಈ ಮೂರು ಧರ್ಮಗಳು ಬಹಳ ಮುಖ್ಯವಾಗಿವೆ. ಇವುಗಳಿಗೆ ಸಂಬಂಧಿಸಿದಂತೆ ಶಾಸನದ ಮೇಲ್ಭಾಗದಲ್ಲಿ ಆಯಾ ಧರ್ಮಗಳ ದೇವತೆಗಳ ಶಿಲ್ಪಗಳನ್ನು ಬಹಳ ಅಲಂಕಾರಿಕವಾಗಿ ಕಡೆಯಲಾಗಿರುತ್ತದೆ. ಶೈವ–ವೈಷ್ಣವ ಧರ್ಮಗಳು ಅನೋನ್ಯವಾಗಿ ಇರಬೇಕೆಂಬ ದೃಷ್ಠಿಯಿಂದ ಎರಡು ಧರ್ಮಗಳ ವಿಚಾರವನ್ನು ತಿಳಿಸುವ ಶಾಸನಗಳು ಸಹ ಕಂಡು ಬರುತ್ತವೆ. ದಾನ ಶಾಸನಗಳಲ್ಲಿ ಸೂರ್ಯ, ಚಂದ್ರ ಮತ್ತು ಆಕಳು ಕರು ಇನ್ನೂ ಮೊದಲಾದ ಸಂಕೇತಗಳನ್ನು ನೋಡಬಹುದಾಗಿದೆ. ಈ ಸಂಕೇತಗಳಿಗೆ ಒಂದೊಂದು ಅರ್ಥವಿದ್ದು ಇದು ಒಂದು ಜನಾಂಗದ ನಂಬುಗೆಯ ಹಿನ್ನೆಲೆಯಿಂದ ಬಂದಿದೆ. ತಾವು ನೀಡಿದ ದಾನವು ಸೂರ್ಯ ಚಂದ್ರರು ಇರುವವರೆಗೂ ಶಾಶ್ವತವಾಗಿರಲಿ ಎಂಬ ವಿಚಾರಕ್ಕೆ ಸಾಕ್ಷಿಯಾಗಿ ಸೂರ್ಯ ಚಂದ್ರ ಶಿಲ್ಪವನ್ನು ಕಡೆಯಲಾಗಿರುತ್ತದೆ.

## ಸಂಶೋಧನೆಯ ಕ್ರಮ

ಯಾವುದೇ ಒಂದು ಸಂಶೋಧನೆಯನ್ನು ನಡೆಸಬೇಕಾದರೆ ಸಂಶೋಧನೆಯಿಂದ ಕ್ರಮಬದ್ಧತೆ ಇರಬೇಕು. ನನ್ನ ಸಂಶೋಧನೆಯ ಕ್ರಮದಲ್ಲಿ ಕಾಲಾನು ಕ್ರಮದ ದಾಖಲಾತಿಯನ್ನು ಮೊದಲು ಪ್ರಯತ್ನಿಸಿರುತ್ತೇನೆ. ಹಾಸನ, ಚನ್ನರಾಯಪಟ್ಟಣ ತಾಲೂಕಿನ ದೇವಾಲಯಗಳ ಬಗ್ಗೆ ಸಂಶೋಧನೆಯನ್ನು ನಡೆಸಿದಾಗ ಕೆಲವೊಂದು ಊರುಗಳಲ್ಲಿ ಮೂರರಿಂದ ನಾಲ್ಕು ದೇವಾಲಯಗಳಿರುವುದು ಕಂಡು ಬರುತ್ತದೆ. ಒಂದೊಂದು ದೇವಾಲಯವು ಸಹ ಬೇರೆ ಬೇರೆ ಕಾಲ ಘಟ್ಟಗಳಲ್ಲಿ ನಿರ್ಮಾಣಗೊಂಡಿರುವಂತೆಹ ಸಂದರ್ಭಗಳೇ ಹೆಚ್ಚು. ಕೆಲವೊಂದು ದೇವಾಲಯಗಳು ಕೆಲವೊಮ್ಮೆ ಮೂಲದೇವಾಲಯಗಳು ಒಂದು ಕಾಲಘಟ್ಟದಲ್ಲಿ

ನಿರ್ಮಾಣವಾಗಿ ಅದರ ಇತರ ಮುಂದುವರಿದ ಭಾಗಗಳು ತದ ನಂತರದ ಕಾಲದಲ್ಲಿ ನಿರ್ಮಾಣ ಕಾರ್ಯಗಳು ನಡೆದು ಪೂರ್ಣವಾಗಿದೆ.

ಕೆಲವೊಮ್ಮೆ ದೇವಾಲಯಗಲ ಮೂಲ ಶಿಲ್ಪಗಳು ಮಾತ್ರ ಒಂದು ಕಾಲದಾಗಿದ್ದು ದೇವಾಲಯದ ಸಂಕೀರ್ಣ ತದನಂತರ ಕಾಲದಾಗಿರುತ್ತದೆ. ಆದ ಕಾರಣ ನಾನು ಇಲ್ಲಿ ಗ್ರಾಮಗಳ ಹೆಸರಿನಲ್ಲಿ ಆಯಾ ಗ್ರಾಮಗಳಲ್ಲಿ ಕಂಡು ಬರುವ ದೇವಾಲಯಗಳನ್ನು ಆಯಾ ಗ್ರಾಮಗಳ ಹೆಸರಿನಲ್ಲಿಡಿಯಲ್ಲಿ ವಿವರಣೆಯನ್ನು ಒದಗಿಸಲಾಗಿರುತ್ತದೆ. ಅಧ್ಯಯನದ ದೃಷ್ಠಿಯಿಂದ ಮಾತ್ರ ಶೈವ, ವೈಷ್ಣವ, ಜೈನ ದೇವಾಲಯಗಳಿಂದು ವಿಂಗಡಣೆ ಮಾಡಲಾಗಿರುತ್ತದೆ. ದೇವಾಲಯಗಳ ವಿವರಣೆಯನ್ನು ಆಯಾ ಕಾಲಕ್ಕೆ ಅನುಗುಣವಾಗಿ ಸೇರಿಸಿ ನೋಡಿದಾಗ ಗ್ರಾಮಗಳ ಹೆಸರುಗಳು ಮತ್ತು ಅಲ್ಲಿನ ಐತಿಹಾಸಿಕ ಹಿನ್ನೆಲೆಯನ್ನು ಆಲೋಚಿಸಿ ಸಂಪೂರ್ಣ ಮಾಹಿತಿ ಒಂದೇ ಕಡೆ ದೊರೆಯಲೆಂಬ ದೃಷ್ಟಿಯಿಂದ ಅಲ್ಲಲ್ಲಿಯೇ ವಿವರಣೆಯನ್ನು ನೀಡಲಾಗಿರುತ್ತದೆ.

ಕೊನೆಯಲ್ಲಿ ನೀಡಿರುವ ದೇವಾಲಯಗಳ ಪಟ್ಟಿಯಲ್ಲಿ ಅವುಗಳ ನಿರ್ಮಾಣದ ಕಾಲ, ನಿರ್ಮಿಸಿರುವವರು ಅಲ್ಲದೆ ಪೋಷಕರ ವಿವರಣೆಯನ್ನು ನೀಡಲಾಗಿರುತ್ತದೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ನಾನು ಕೈಗೊಂಡ ಕ್ಷೇತ್ರ ಕಾರ್ಯದ ಸಮಯದಲ್ಲಿ ಅನೇಕ ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳನ್ನು ಸಂದರ್ಶಿಸಿ ಸಾವಿರಾರು ಛಾಯಾ ಚಿತ್ರಗಳನ್ನು ತೆಗೆದಿರುತ್ತೇನೆ. ಚನ್ನರಾಯಪಟ್ಟಣ ತಾಲೂಕಿನ ಬಗ್ಗೆ ಕಲೆ ಮತ್ತು ವಾಸ್ತುಶಿಲ್ಪದ ದೃಷ್ಠಿಯಿಂದ ಹೆಚ್ಚಿನ ಸಂಶೋಧನೆಯ ಮಾಹಿತಿಯನ್ನು ಛಾಯಾಚಿತ್ರಗಳ ಮೂಲಕ ಪ್ರೌಢಪ್ರಬಂಧದಲ್ಲಿ ಸೇರಿಸುವ ಉದ್ದೇಶದಿಂದ ನನ್ನ ಮಾರ್ಗದರ್ಶಕರೊಡನೆ ಚರ್ಚಿಸಿ ಪ್ರಮುಖವಾದ ಛಾಯಾಚಿತ್ರಗಳನ್ನು ಸೇರಿಸಲಾಗಿರುತ್ತದೆ.

ಇಲ್ಲಿ ನೀಡಿರುವ ಪ್ರಮುಖ ಛಾಯಾಚಿತ್ರಗಳನ್ನು ಆಯಾ ಅಧ್ಯಾಯಗಳಲ್ಲಿ ದೇವಲಯಗಳ ವಿವರಣೆಯೊಂದಿಗೆ ನೀಡಿದ್ದರೂ ಸಹ ಕೆಲವೊಂದು ಛಾಯಾಚಿತ್ರಗಳ ಸಂಖ್ಯೆ ಕ್ರಮಾನು ಕ್ರಮದಲ್ಲಿ ಬರುವುದಿಲ್ಲ. ಕೆಲವು ಕಡೇ ಒಂದೇ ಛಾಯಾಚಿತ್ರದ ಸಂಖ್ಯೆಯನ್ನು ಮತ್ತೆ ಮತ್ತೆ ಹೇಳಿರುವುದುಂಟು, ಈ ಹಿನ್ನೆಲೆಯಿಂದ ಆಯಾ ಅಧ್ಯಾಯಗಳಲ್ಲಿ ಛಾಯಾಚಿತ್ರಗಳ ಸಂಖ್ಯೆಯಲ್ಲಿ ಅನುಕ್ರಮ ಕಂಡು ಬಾರದಿರುವುದರಿಂದ ವಿವರಣೆಯನ್ನು ಓದುವಾಗ ಅಲ್ಲಿ ನೀಡಿರುವ ಛಾಯಾ ಚಿತ್ರಗಳ ಸಂಖ್ಯೆಯನ್ನು ಗಮನಿಸಬೇಕೆಂದು ಹಾಗೂ ಅಧ್ಯಾಯದಲ್ಲಿ ಕ್ರಮ ಸಂಖ್ಯೆಯ ಬಳಕೆ ಅನುಕ್ರಮದಲ್ಲಿ ಇಲ್ಲವೆ ಇರುವುದನ್ನು ಮನ್ನಿಸಿ ಛಾಯಾಚಿತ್ರಗಳ ಸಂಖ್ಯೆ ಕಂಡು ಬಂದಾಗ ಅವುಗಳನ್ನು ಗಮನಿಸಬೇಕೆಂದು ವಿನಂತಿಸುತ್ತೇನೆ.

## ಅಡಿಟಿಪ್ಪಣಿಗಳು

1 ಹಾಸನ ಜಿಲ್ಲಾ ಗ್ಯಾಸೆಟಿಯರ್‌ನ ವರದಿಯನ್ನು ಪುರಸ್ಕರಿಸಲಾಗಿರುತ್ತದೆ –

2 ಎಪಿಗ್ರಾಫಿಯಾ ಕರ್ನಾಟಕ ಸಂಪುಟಗಳು ಹಾಸನ ಜಿಲ್ಲೆಗೆ ಸೀಮಿತವಾದಂತೆ –

3 ನೀಲಕಂಠ ಶಾಸ್ತ್ರಿ. ಕೆ.ಎ.ರವರ ದಕ್ಷಿಣ ಭಾರತದ ಇತಿಹಾಸ ಗ್ರಂಥವನ್ನು ನೋಡಲಾಗಿರುತ್ತದೆ –

4 ಕೃಷ್ಣರಾವ್. ಎ.ವಿ ಮತ್ತು ಕೇಶವ ಭಟ್ಟ. ಎಂ.ರವರ ಕರ್ನಾಟಕದ ಇತಿಹಾಸ ದರ್ಶನ–1970 –

5 ಗೋಪಾಲ್. ಬಾ.ರಾ. ರವರ ಕರ್ನಾಟಕ ಇತಿಹಾಸ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–1986 –

6 ಎಪಿಗ್ರಾಫಿಯಾ ಕರ್ನಾಟಕ ಹಾಸ ಜಿಲ್ಲೆಯ ಸಂಪುಟಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ರಚಿಸಲಾಗಿರುತ್ತದೆ. –

7 ಪ್ರ. ಸಂ. ಅಭಿಶಂಕರ್ ಹಾಸನ ಗ್ಯಾಸೆಟಿಯರ್, ಕರ್ನಾಟಕ ಸರ್ಕಾರ–1971 –

8 Dr. K.P. Poonacha, the monu mented heritage of sravana belagola (Dist) Hassan Karnataka) –

9 ಚಿದಾನಂದ ಮೂರ್ತಿ. ಎಂ.ರವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ–1979 –

10. Karnataka State Gazeteer (Hassan Dist) ಗೆ ಪೂರಕವಾದಂತೆ

11. ಅದೇ

12. ಡಾ. ಎಚ್. ಎಸ್. ಗೋಪಾಲ್‌ರಾವ್‌ರವರ ನಮ್ಮನಾಡು ಕರ್ನಾಟಕ, ಪು

13. ಎ.ಕ. ಸಂಪುಟ–10ರ ಪ್ರಕಾರ್ ರಚಿಸಲಾಗಿದೆ.

14. ಹಾಸನ ಜಿಲ್ಲಾ ಗ್ಯಾಸೆಟಿಯರ್‌ನನ್ನು ಅಧ್ಯಯನಮಾಡಿ ರಚಿಸಲಾಗಿದೆ.

15. ಡಾ. ಎಂ. ಚಿದಾನಂದ ಮೂರ್ತಿರವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

16. ಎ.ಕ. ಸಂಪುಟ–10, ಚನ್ನರಾಯಪಟ್ಟಣ ತಾಲೂಕಿನ ಶಾಸನಗಳ ಪ್ರಕಾರ

17. ಜಿ. ಬ್ರಹ್ಮಪ್ಪ, ಶ್ರವಣಬೆಳಗೊಳದ ಶಾಸನಗಳು

18. ನುಗ್ಗೇಹಳ್ಳಿಯಲ್ಲಿ ಕಂಡು ಬರುವ ಶಾಸನಗಳ ಹಿನ್ನೆಲಯನ್ನು ಅಧ್ಯಯನ ನಡೆಸಿ ರಚಿಸಲಾಗಿದೆ.

.

# ಅಧ್ಯಾಯ–2

## ರಾಜಕೀಯ ಹಿನ್ನೆಲೆ

ಪ್ರಾರಂಭ ಕಾಲದಿಂದ ಆಳಿದ ರಾಜಕೀಯ ರಾಜಮನೆತನಗಳ ಮೌರ್ಯರು, ಕದಂಬರು, ಗಂಗರು, ರಾಷ್ಟ್ರಕೂಟರು, ಚೋಳರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ತರೀಕೆರೆ ಪಾಳೇಗಾರರು, ಮೈಸೂರು ಒಡೆಯರ್, ಹೈದರ್ ಟಿಪ್ಪುಸುಲ್ತಾನ್ ಇನ್ನಿತರ ರಾಜವಂಶದವರು ಚೆನ್ನರಾಯಪಟ್ಟಣ ತಾಲ್ಲೂಕಿನ ಭಾಗಕ್ಕೆ ನೀಡಿದ ಕೊಡುಗೆ ಅಪಾರವಾಗಿದೆ. ಈ ಮೇಲಿನ ರಾಜಸಂತತಿಯ ಎಲ್ಲಾ ರಾಜರುಗಳು ಸಹ ಕರ್ನಾಟಕದ ಇತಿಹಾಸ ಪರಂಪರೆಗೆ ಅದರಲ್ಲೂ ಚೆನ್ನರಾಯಪಟ್ಟಣ ತಾಲ್ಲೂಕಿಗೆ ನೀಡಿರುವ ಕೊಡುಗೆಗಳು ಅಲ್ಲದೆ ಹೆಜ್ಜೆ ಗುರುತುಗಳು ವಿಶೇಷವಾಗಿದೆ.

ಪ್ರಾಗೈತಿಹಾಸ ಮತ್ತು ಇತಿಹಾಸ ಆರಂಭ ಕಾಲ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕಿನ ಇತಿಹಾಸ ನಮಗೆ ಹಳೆಯ ಶಿಲಾಯುಗದ ಕಾಲದಿಂದಲೂ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ. ಚೆನ್ನರಾಯಪಟ್ಟಣ ಭೌಗೋಳಿಕ ಹಿನ್ನೆಲೆಯನ್ನು ನೋಡಿದರೆ ಈ ಪ್ರಾಂತ್ಯ ಪ್ರಾಚೀನ ಕಾಲದಿಂದಲೂ ಮನುಷ್ಯನ ನಡವಳಿಕೆಯ ಚಟುವಟಿಕೆಯನ್ನು ತಿಳಿಸುವಂತಹ ಅಂಶ ಕಂಡುಬಂದಿದೆ.[1]

ಕರ್ನಾಟಕದಲ್ಲಿ ನಡೆದಿರುವ ಪುರಾತತ್ವ ಶೋಧನೆಗಳಿಂದ ಇತಿಹಾಸ ಪೂರ್ವಕಾಲದಲ್ಲಿ ಸಹಸ್ರಾರು ವರ್ಷಗಳಿಂದ ಇಲ್ಲಿ ಜನಸಾಮಾನ್ಯರು ಜೀವನವನ್ನು ನಡೆಸಿರುವುದಕ್ಕೆ ಸಾಕ್ಷಿಯಾಗಿ ಅನೇಕ ಕುರುಹುಗಳು ದೊರೆತಿದೆ. ಪ್ರಸ್ತುತ ಅಧ್ಯಯನವು ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ಪ್ರದೇಶದ ಪರಿಸರವು ಹಲವು ಬೆಟ್ಟಗುಡ್ಡಗಳಿಂದ ಕೂಡಿರುವ ಪ್ರದೇಶವಾಗಿದ್ದು, ಅನೇಕ ರೀತಿಯ ಕಲ್ಲಾಸರಗಳನ್ನು ನೀರಿನ ಅಸರಗಳನ್ನು ಹೊಂದಿರುವ ನೆಲೆಗಳಾಗಿದ್ದು, ಹಿಂದೆ ಬೃಹತ್ ಸಂಸ್ಕೃತಿ ಶಿಲಾಯುಗದ ಜನರುಗಳ ಶಾಶ್ವತ ನೆಲೆಯಾಗಿತ್ತೆಂಬುದಕ್ಕೆ ಕುರುಹುಗಳು ದೊರೆತಿದೆ.[2] ಈ ಶಿಲಾಯುಗದ ಸಂಸ್ಕೃತಿಯ ಜನರ ವಾಸ್ತವ್ಯದ ನೆಲೆಗಳು ಅಲ್ಲದೆ ಶವಸಂಸ್ಕಾರದ ನೆಲೆಗಳೂ ಕಂಡುಬಂದಿವೆ.[3]

ಬಲ್ಲುಗಟ್ಟಿಯಲ್ಲಿ ಮುರು ಶಿಲಾ ಸಮಾಧಿಗಳು ಕಂಡುಬಂದಿದೆ. ಗಂಜಗೆರೆ, ಅಕ್ಕನಹಳ್ಳಿ, ಮೊದಲಗೆರೆ, ದಿಡಿಗ, ಕಬ್ಬಳ್ಳಿ, ಮಸಕನಹಳ್ಳಿ, ಆನೆಕೆರೆ ಇನ್ನೂ ಮೊದಲಾದ ಕಡೆ ಸಮಾಧಿಗಳು ಕಂಡು ಬಂದಿದೆ. ಬೃಹತ್ ಶಿಲಾಯುಗದ ಸಮಾಧಿಗಳೂ ನಿಲುವು ಗಲ್ಲುಗಳು ವಾಸ್ತವ್ಯದ ನೆಲೆಗಳನ್ನು ಗುರುತಿಸಲಾಗಿದೆ.[4]

ಮಾನವನ ಇತಿಹಾಸವನ್ನು ಮುಖ್ಯವಾಗಿ ಎರಡು ಭಾಗಗಳನ್ನಾಗಿ ಮಾಡಲಾಗಿರುತ್ತದೆ. ಮೊದಲನೆಯದಾಗಿ ಅಕ್ಷರ ಜ್ಞಾನ ಇಲ್ಲದೆ ಇರುವುದು. ಎರಡನೆಯದಾಗಿ ಅಕ್ಷರ ಜ್ಞಾನವನ್ನು ಪಡೆದುಕೊಂಡಿರುವುದು. ಇದಕ್ಕೆ ರಾಜಮಹಾರಜರು ಇದ್ದ ಕಾಲವೆಂದೂ ಅಥವಾ ಇತಿಹಾಸ ಕಾಲವೆಂದೂ ಕರೆಯಲಾಗಿರುತ್ತದೆ. ಇವುಗಳಲ್ಲಿ ಪ್ರಾಗತಿಹಾಸದ ಕಾಲಮಾನ ಅತ್ಯಂತ ಪ್ರಾಚೀನವಾದ ಹೆಚ್ಚು ಆಳವಾಗಿರುವ ಕಾಲವೆಂದು ಕರೆಯಲಾಗಿದೆ. ಈ ಕಾಲಕ್ಕೆ ಹೆಚ್ಚು ಕಡಿಮೆ ಸುಮಾರು 5 ಲಕ್ಷ ವರ್ಷಗಳಿಂದ ಕ್ರಿ.ಶ. ಶಕದ ಆರಂಭದವರೆಗೂ ಅದು ಪ್ರಧಾನವಾಗಿತ್ತೆಂದು ತೋರುತ್ತದೆ. ಈ ಕಾಲವನ್ನು ಅಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ. ಶಿಲಾಯುಗ ಸಂಸ್ಕೃತಿಯ ಕಾಲ ಘಟ್ಟವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನು ಆಧರಿಸಿ ಹಳೆಯ ಶಿಲಾಯುಗ ಸಂಸ್ಕೃತಿ ಸೂಕ್ಷ್ಮಶಿಲಾಯುಗ ಸಂಸ್ಕೃತಿ ಅಲ್ಲದೆ ನೂತನ ಶಿಲಾಯುಗ ಸಂಸ್ಕೃತಿ ಎಂದು ವಿಭಾಗಿಸಲಾಗಿದೆ.

1863ರ ಸಂದರ್ಭದಲ್ಲಿ ರಾಬರ್ಟ್ ಬ್ರೂಸ್‌ಫುಟ್‌ರವರು ಆದಿ ಹಳೆಯ ಯುಗದ ಉಪಕರಣಗಳ ಶೋಧವು ಭಾರತದ ಪುರಾತತ್ವ ನೆಲೆಗಳ ಶೋಧನೆಯ ಮೈಲುಗಲ್ಲಾಗಿದೆ. ಮೊದಲ ಬಾರಿಗೆ ಅತಿ ಪಾರ್ಚೀನ ಸಂಸ್ಕೃತಿಯ ಉಪಕರಣಗಳು ತಮಿಳುನಾಡಿನ ಪಲ್ಲಾವರಂನಲ್ಲಿ ಪತ್ತೆಯಾಗಿ ಭಾರತದ ಭೂಭಾಗವು ಸಹ ಮಾನವನ ಅತಿ ಪ್ರಾಚೀನ ವಾಸ್ತವ್ಯ ನೆಲೆಗಳಲ್ಲಿ ಒಂದಾಗಿದೆ ಎಂಬುದು ಸ್ಪಷ್ಟವಾಗಿ ಮೂಡಿಬಂದಿದೆ. ಈ ಹಿನ್ನೆಲೆಯಿಂದ ರಾಬರ್ಟ್ ಬ್ರೂಸ್‌ಫೂಟ್‌ರವರನ್ನು ಭಾರತ ದೇಶದ ಪ್ರಾಗೈತಿಹಾಸದ ಪಿತಾಮಹ ಎಂದು ನಾಮಕರಣ ಮಾಡಲಾಗಿದೆ. 1861 ರಲ್ಲಿ ಪ್ರಾರಂಭವಾದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯಿಂದಾಗಿ ಪುರಾತತ್ವ ಅಧ್ಯಯನಕ್ಕೆ ಮತ್ತಷ್ಟು ಪ್ರಾಧಾನ್ಯತೆ ದೊರೆಯಿತು.

ರಾಬರ್ಟ್ ಬ್ರೂಸ್‌ಫೂಟ್‌ರವರು 1916ರ ಕಾಲಕ್ಕೆ ಕರ್ನಾಟಕದ ಹಲವಾರು ಪ್ರಾಚೀನ ನೆಲೆಗಳನ್ನು ಪತ್ತೆ ಮಾಡಿದ್ದಾರೆ. 1884 ರಲ್ಲಿ ಮೈಸೂರು ಪುರಾತತ್ವ ಇಲಾಖೆಯು ಆರಂಭವಾಗಿ ಕೆಲವೊಂದು ಕಡೆ ಪ್ರಾರಂಭಿಸಿದ ಸಂಶೋಧನೆಯಿಂದ ಹೊಸ ಹೊಸ ವಿಚಾರಗಳು ಬೆಳಕಿಗೆ ಬಂದಿವೆ. ಕಾವೇರಿಕಣಿವೆಯಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಗೆ ಸೇರಿದ ಸಮಾಧಿಗಳು ಕಂಡುಬಂದಿದೆ.[5]

ಚನ್ನರಾಯಪಟ್ಟಣದ ಬೆಳಗಲಿಯಿಂದ ಅಗ್ರಹಾರ ಬೆಳುಗಲಿಯವರೆಗಿನ ಉತ್ತರಭಾಗದಲ್ಲಿ ನೀರ್ಗುಂದ ನಾಡಿನ ಉಲ್ಲೇಖಗಳನ್ನು ತಿಳಿಸುವುದು ಕಂಡುಬರುತ್ತದೆ. ಚೆನ್ನರಾಯಪಟ್ಟಣ

ತಾಲ್ಲೂಕು ಚೋಳೇನ ಹಳ್ಳಿ ಗ್ರಾಮದ್ಲಲಿ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆ ಇದೆ. ಹರೆಚಕ್ಕೆ ಮೊನೆ ಉಪಕರಣಗಳನ್ನು ಮ್ಯಾಗ್ನಟೈಟ್ ಯುಕ್ತ ಕ್ವಾರ್ಟೈಟ್ ಶಿಲೆಯಲ್ಲಿ ರೂಪಿಸಲಾಗಿದೆ.[6] ಶೆಟ್ಟಿಹಳ್ಳಿ ಹೇಮಾವತಿ ನದಿ ಪಕ್ಕದಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ಗೋರಿಯ ನೆಲೆ ಇದೆ. ಇಲ್ಲಿಯೂ ಸಹ ಹರೆಚಕ್ಕೆ ಮೊನೆ ಮೊದಲಾದ್ ಔಪಕರಣಗಳು ದೊರೆತಿವೆ.[7] ಈ ಮೇಲಿನ ಕೆಲವೊಂದು ಗ್ರಾಮಗಳನ್ನು ಉದಾಹರಣೆಯ ಸಹಿತ ನೀಡಲಾಗಿದೆ. ಈ ಹಿನ್ನೆಲೆಯಿಂದ ಕರ್ನಾಟಕದಲ್ಲಿ ಅದರಲ್ಲೂ ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿ ಸಾಂಸ್ಕೃತಿಕ ಬೆಳವಣಿಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಕಂಡುಬಂದಿದೆ. ಇಲ್ಲಿನ ಮುಖ್ಯ ಅವಶೇಷಗಳಾದ ವೈವಿಧ್ಯ ಶಿಲೋಪಕರಣಗಳು ಮಣ್ಣಿನ ಪಾತ್ರೆಗಳು, ಶವಸಂಸ್ಕಾರ ಪದ್ಧತಿ ಕಲೆಗಾರಿಕೆ ಮುಂತಾದ ಅಂದಿನ ವಿಷಯಗಳ ಕುರಿತು ಮಹತ್ವದ ವಿಚಾರಗಳು ದೊರೆತಿವೆ. ನುತನ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣಗಳು ವೈವಿಧ್ಯಮಯವಾಗಿದೆ. ನುತನ ಶಿಲಾ ಉಪಕರಣಗಲ ಜೊತೆಗೆ ಅತಿ ಸೂಕ್ಷ್ಮ ಚಕ್ಕೆಕಲ್ಲಿನ ಉಪಕರಣಗಳ ಬಳಕೆಯಾಗಿರುವುದು ಕಂಡುಬರುತ್ತದೆ. ಈ ಸಂಸ್ಕೃತಿಯ ಮತ್ತೊಂದು ಪ್ರಾತಿನಿಧಿಕ ಅವಶೇಷ ಮಣ್ಣಿನ ಮಡಕೆಗಳ ಆರಂಭ ಹಂತದಲ್ಲಿ ಕೈಯಿಂದ ಮಾಡಲಾಗುತ್ತಿತ್ತು. ತದನಂತರ ಕಾಲದಲ್ಲಿ ತಿರುಗಿಸಿದ ಚಕ್ರ ಮತ್ತು ಪರಿಷ್ಕೃತ ಚಕ್ರಗಳಲ್ಲಿ ತಯಾರಿಸಲಾದ ಹೆಚ್ಚು ತೆಳ್ಳನೆಯ ಮೃಗ್ ಪಾತ್ರೆಗಳು ಈ ಭಾಗದಲ್ಲಿ ದೊರೆತಿದೆ. ಕಲ್ಲುಗೋರಿಗಳು ಈ ಜನರ ಪಾರಂಪರಿಕ ನಂಬಿಕೆಗಳ ತಳಹದಿಯ ಮೇಲೆ ರೂಪಿಅವಾದವುಗಳಾಗಿವೆ. ಈ ಸಂಸ್ಕೃತಿಯ ಜನತೆ ವಾಸಿಸುತ್ತಿದ್ದ ನೆಲೆಗಳನ್ನು ವಾಸ್ತವ್ಯದ ನೆಲೆಗಳೆಂದೂ ಹಾಗೂ ಶವಸಂಸ್ಕಾರದ ಕೇಂದ್ರಗಳನ್ನೂ ಗೋರಿ ನೆಲೆಗಳೆಂದೂ ಬೇರೆ ಬೇರೆಯಾಗಿ ಅಧ್ಯಯನವನ್ನು ನಡೆಸಲಾಗಿರುತ್ತದೆ. ದೇಶೀಯ ಹಾಗೂ ವಿದೇಶಿಯ ಪುರಾತತ್ವಜ್ಞರಿಂದ ಸಾಕಷ್ಟು ಸಂಶೋಧನೆಗಳು ನಡೆದಿವೆ. ಹಲವು ಹೊಸ ಹೊಸ ವಿಷಯಗಳು ಬೆಳಕಿಗೆ ಬಂದಿದೆ. ಈ ಬೆಳವಣಿಗೆಯ ಹಿನ್ನೆಲೆಯಿಂದ ಚೆನ್ನರಾಯಪಟ್ಟಣ ಪ್ರದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಪ್ರಾಚೀನ ಕಾಲದ ನೆಲೆಗಳು ಪತೆಯಾಗಿರುವುದನ್ನು ಉದಾಹರಣೆ ಸಹಿತ ತಿಳಿಸಲಾಗಿರುತ್ತದೆ. ಭಾರತದಲ್ಲಿ ಹಲವಾರು ಪ್ರಾಚೀನ ನೆಲೆಗಳನ್ನು ಸಂಶೋಧಿಸಿರುವುದರಿಂದ ಭಾರತದ ಪುರ್ವ ಇತಿಹಾಸವನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗಿದೆ. ಹೀಗೆ ಹಲವಾರು ಗ್ರಾಮಗಳಲ್ಲಿ ವಿವಿಧ ರೀತಿಯ ಸಂಸ್ಕೃತಿಯ ಅವಶೇಷಗಳು ಸಿಕ್ಕಿರುವುದರಿಂದ ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶಗಳಲ್ಲಿ ಪ್ರಾಚೀನ ಕಾಲದಿಂದಲೂ ಮಾನವನು ವಾಸವಾಗಿದ್ದನು ಎಂದು ಗೋಚರವಾಗುತ್ತದೆ.

ಕ್ರಿ.ಶ.19ನೇ ಶತಮಾನದಲ್ಲಿ ರಾಬರ್ಟ್ ಬ್ರೂಸ್‌ಫೂಟ್, ಕರ್ನಲ್‌ಕೋಲಿನ್, ಮೆಕೆಂಜಿರವರು ಶಿಲಾಯುಗದ ಮಾನವನ ನೆಲೆಸಿದ ನೆಲೆಗಳನ್ನು ಮತ್ತು ಮಹತ್ವಪೂರ್ಣವಾದ ಅವಶೇಷಗಳನ್ನು ಸಹ ಈ ನಾಡಿಗೆ ಪರಿಚಯಿಸಿದ್ದಾನೆ.

ನಂತರ ಕೆ.ಪಿ. ಪೂಣಚ್ಚ, ಡಾ.ಎನ್.ಎಸ್.ರಂಗರಾಜು, ಡಾ.ಹನುಮನಾಯಕ, ಡಾ.ಪಿ.ಎನ್.ನರಸಿಂಹಮೂರ್ತಿ, ಆರ್. ವೆಂಕಟೇಶ್‌ಮೂರ್ತಿ, ಇವರುಗಳಲ್ಲದೆ ಭಾರತೀಯ ಪುರಾತತ್ವ ಇಲಾಖೆಯವರು ಹಾಸನ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಸಂಶೋಧನೆಯನ್ನು ನಡೆಸಿ ಪ್ರಾಚೀನ ನೆಲೆಗಳನ್ನು ಪತ್ತೆ ಮಾಡಿದ್ದಾನೆ. ಈ ವಿದ್ವಾಂಸರು ತಿಳಿಸಿರುವ ಕೆಲವೊಂದು ಪರಿಪೂರ್ಣತೆಯ ಮಾಹಿತಿಯಿಂದ ಜಿಲ್ಲೆಯ ಆದಿ ಹಳೆಯ ಶಿಲಾಯುಗದ ಕಾಲದಿಂದ ಹಿಡಿದು ಇಂದಿನವರೆಗೂ ಈ ಭಾಗದಲ್ಲಿ ಜನವಸತಿ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ. ಭಾರತದಲ್ಲಿ ಕ್ರಿ.ಶ.ಪೂರ್ವ 2ನೇ ಶತಮಾನದಿಂದ ಕ್ರಿ.ಶ.19ನೇ ಶತಮಾನದ ಮಧ್ಯದವರೆಗೆ ಇಡೀ ಪ್ರಪಂಚದಲ್ಲೇ ಉತ್ತಮ ಉಕ್ಕಿನ ಉಪಕರಣಗಳ ತಯಾರಿಕೆಗೆ ಪ್ರಸಿದ್ಧಿ ಪಡೆದಿತ್ತೆಂದು ಡಾ.ಅ. ಸುಂದರವರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[8] ಹೀಗೆ ಅಧ್ಯಯನವನ್ನು ನಡೆಸಿದರೆ ಅನೇಕ ರೀತಿಯ ಪ್ರಾಚೀನ ಕಾಲಕ್ಕೆ ಸೇರಿದ ನೆಲೆಯನ್ನು ಪತ್ತೆ ಮಾಡಬಹುದು.

**ಇತಿಹಾಸ ಕಾಲ**

ಕರ್ನಾಟಕದಲ್ಲಿ ರಾಜಕೀಯ ವ್ಯವಸ್ಥೆ ಮತ್ತು ರಾಜತಾಂತ್ರಿಕ ನೀತಿ ಬಂದಿರುವುದು ಮೌರ್ಯ ದೊರೆ ಅಶೋಕನ ಕಾಲದಿಂದ ಎಂದು ತಿಳಿಯಬಹುದು. ಅಲ್ಲದೆ ನಾಗರೀಕತೆಯ ಮತ್ತು ರಾಜ್ಯವ್ಯವಸ್ಥೆಗಳು ಸಹ ಬೆಳೆದು ಬಂದಿದೆ ಎಂಬುದು ತಿಳಿದುಬರುತ್ತದೆ. ಇದರ ಪರಿಪೂರ್ಣವಾದ ಸ್ಪಷ್ಟ ದಾಖಲೆಗಳು ನಮಗೆ ದೊರೆಯುವುದು ಅಶೋಕನ ಶಿಲಾಶಾಸನಗಳಿಂದ ಎಂದು ಹೇಳಬಹುದು. ಮೌರ್ಯರು ಮೊದಲಿಗೆ ಭಾರತ ದೇಶದಲ್ಲಿ ರಾಜಕೀಯ ಏಕತೆಯನ್ನು ಸ್ಥಾಪಿಸಿ, ತಮ್ಮದೇ ಆದ ಸಾಮ್ರಾಜ್ಯವನ್ನು ಕಟ್ಟಿ ರಾಜಕೀಯವಾಗಿ ಆಡಳಿತವನ್ನು ನಡೆಸಿದ್ದಾರೆ.

ಈ ಕಾರಣದಿಂದಾಗಿ ಮೊದಲಿಗೆ ಕರ್ನಾಟಕದ ಇತಿಹಾಸ ತಿಳಿಯುವುದು ಮೌರ್ಯರ ಆಳ್ವಿಕೆಯೊಂದಿಗೆ ಎಂಬುದು ಗೊತ್ತಾಗುತ್ತದೆ. ಕರ್ನಾಟಕದ ನಾನಾ ಭಾಗಗಳಲ್ಲಿ ದೊರೆತಿರುವ ಕೆಲವೊಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ದೇವನಾಂಪ್ರಿಯದರ್ಶಿಯಾದ ಅಶೋಕನು ಉತ್ತರ ಭಾರತವನ್ನು ಅಲ್ಲದೆ ದಕ್ಷಿಣಭಾರತದ ಕರ್ನಾಟಕದ ಬಹುತೇಕ ಭಾಗವನ್ನು ಆಳ್ವಿಕೆ ನಡೆಸಿರುವುದು ಗೊತ್ತಾಗುತ್ತದೆ. ಬ್ರಹ್ಮಗಿರಿ, ಮಸ್ಕಿ, ಸಿದ್ಧಾಪುರ, ಜಟಿಂಗ ರಾಮೇಶ್ವರ, ಸನ್ನತಿ ಮೊದಲಾದ ಪ್ರಾಂತ್ಯಗಳಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ಇದರಿಂದ

ಕರ್ನಾಟಕವು ಮೌರ್ಯರ ಸಾಮ್ರಾಜ್ಯದ ಒಮ್ದು ಭಾಗವಾಗಿತ್ತೆಂದು ಸಹ ತೋರುತ್ತದೆ. ಚಂದ್ರಗುಪ್ತ ಮೌರ್ಯ ಕ್ರಿ.ಪೂ.324 ರಲ್ಲಿ ನಂದರ ಕೊನೆಯ ರಾಜನಾದ ಧನನಂದನನ್ನು ಸೋಲಿಸಿ ಮಗಧ ರಾಜ್ಯದ ಶ್ರೇಷ್ಠ ಸಾರ್ವಭೌಮತ್ವವನ್ನು ಪಡೆದನು. ಆ ಕಾಲದಿಂದ ನಂದರ ಆಡಳಿತಕ್ಕೆ ಸೇರಿದ್ದ ದಕ್ಷಿಣ ಭಾರತದ ಅದರಲ್ಲು ಕರ್ನಾಟಕದ ಭಾಗಗಳು ಮೌರ್ಯ ದೊರೆ ಚಂದ್ರಗುಪ್ತ ಮೌರ್ಯನ ರಾಜಕೀಯ ಹಿಡಿತಕ್ಕೆ ಸೇರಿತ್ತು. ನಂದರನ್ನು ಸಂಪೂರ್ಣವಾಗಿ ದುಃಸ್ಥಿತಿ ಮಟ್ಟಕ್ಕೆ ತಂದು ಮೌರ್ಯರು ಕ್ರಮಬದ್ಧವಾಗಿ ದಕ್ಷಿಣ ಭಾರತದವರೆಗೂ ರಾಜ್ಯವನ್ನು ಬೆಳೆಸಿ, ಒಟ್ಟಾರೆ ಮಗದ ಸಾಮ್ರಾಜ್ಯಕ್ಕೆ ಅಧಿಪತಿಗಳಾದರು.[9] ಸಂಗಂ ಸಾಹಿತ್ಯದ ಪ್ರಕಾರ ಮೌರ್ಯ ಸೈನ್ಯಗಳು ದಕ್ಷಿಣ ಭಾರತದ ಮಧುರೆ ಮತ್ತು ತಿನ್ನವೇಲಿಯವರೆಗೂ ದಂಡೆತ್ತಿ ಬಂದಿರುವುದರ ಬಗ್ಗೆ ಮಾಹಿತಿಗಳಿವೆ.

ಚಂದ್ರಗುಪ್ತ ಮೌರ್ಯ ಅಧಿಕಾರಕ್ಕೆ ಬಂದ ಮೇಲೆ ದಖನ್ನಿನ ಪ್ರದೇಶಗಳ ಮೆಲೆ ತನ್ನ ಹಿಡಿತವನ್ನು ಸಾಧಿಸಿದನು. ಅದು ಅಲ್ಲದೆ ಕೆಲವೊಂದು ಗಡಿಪ್ರಾಂತ್ಯಗಳನ್ನು ವಿಸ್ತರಿಸಿದನೆಂದು ತಿಳಿದುಬರುತ್ತದೆ. ಈತನು ತನ್ನ ಆಳ್ವಿಕೆಯ ಕೊನೆಯ ಕಾಲದಲ್ಲಿ ಸಿಂಹಾಸನವನ್ನು ತ್ಯಾಗ ಮಾಡಿ ಜೈನ ಧರ್ಮದ ಮತಾವಲಂಬಿಯಾಗಿ ತನ್ನ ಗುರುವಾದ ಭದ್ರಬಾಹುವಿನೊಡನೆ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿಯೇ ಮರಣ ಹೊಂದಿದನು ಎಂದು ನಮಗೆ ಕ್ರಿ.ಶ.7ನೇ ಶತಮಾನದ ಶ್ರವಣ ಬೆಳಗೊಳ ಶಾಸನದಿಂದ ತಿಳಿದುಬರುತ್ತದೆ. ಚಂದ್ರಗುಪ್ತನು ಸಿಂಹಾಸನ ತ್ಯಾಗ ಮೊದಲು ಜೈನ ಸನ್ಯಾಸಿಗಳು ತಿಳಿಸಿದ. ಮುಂದೆ ಬರಲಿದ್ದ 12 ವರ್ಷಗಳ ದೀರ್ಘಕಾಲದ ಕ್ಷಾಮವು ಕಾರಣವೆಂದು ತಿಳಿದುಬರುತ್ತದೆ. ಆದರೆ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿಯೇ ಸಲ್ಲೇಖನ ವ್ರತದಿಂದ ಅಸುನೀಗಿದ ಮೌರ್ಯ ದೊರೆ ಅಶೋಕ ಚಕ್ರವರ್ತಿಯ ಮೊಮ್ಮಗ ಸಂಪ್ರತಿ ಚಂದ್ರಗುಪ್ತನೆಂದು ಶ್ಯಾಮಶಾಸ್ತ್ರಿ ಮತ್ತು ಫ್ಲೀಟ್‌ರವರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. 1129ರ ಶ್ರವಣಬೆಳಗೊಳ ಶಾಸನ ಕಲ್ಪಸೂತ್ರ ಮತ್ತು ಹರಿಸೇನನ ಬೃಹತ್ ಕಥಾರೋಗ ಚಂದ್ರಗುಪ್ತ ಮೌರ್ಯ ಮತ್ತು ಭದ್ರಬಾಹು ಶ್ರವಣಬೆಳಗೊಳದಲ್ಲಿದ್ದರೆಂಬುದನ್ನು ಸಾಬೀತು ಮಾಡಿದ್ದಾರೆ. ಇದು ಅಲ್ಲದೆ ಶ್ರವಣಬೆಳಗೊಳದ ಚಂದ್ರಗಿರಿ ಬೆಟ್ಟದ ಮೇಲಿನ ಕಟ್ಟಲಾಗಿರುವ ಚಂದ್ರಗುಪ್ತ ಬಸದಿ, ಭದ್ರಬಾಹು ಬಸದಿ ಮೌರ್ಯರ ನಂತರ ಅಧಿಕಾರಕ್ಕೆ ಬಂದ ಅವನ ಮಗ ಬಿಂದುಸಾರನು ಅನೇಕ ಯುದ್ಧಗಳ ಮುಖಾಂತರ ಮೈಸೂರು ಮತ್ತು ಕೊಡಗಿನ ಹಲವು ಪ್ರದೇಶಗಳ ಮೇಲೆ ತನ್ನದೇ ಆದ ಅಧಿಕಾರವನ್ನು ಹೊಂದಿದ್ದನು ಎಂದು ತಿಳಿದುಬರುತ್ತದೆ.[10]

ಒಟ್ಟಿನಲ್ಲಿ ಹೇಳುವುದಾದರೆ, ಮೌರ್ಯರ ಆಡಳಿತ ದಕ್ಷಿನ ಕರ್ನಾಟಕದ ಮೇಲೂ ಸಹ ತನ್ನದೇ ಆದ ಪ್ರಭಾವವನ್ನು ಹೊಂದಿದ್ದರು. ಚಂದ್ರಗುಪ್ತ ಮೌರ್ಯ ಮತ್ತು ಅಶೋಕ ಚಕ್ರವರ್ತಿಯಿಂದ ಕ್ರಮವಾಗಿ ಜೈನ ಮತ್ತು ಬೌದ್ಧ ಮತಗಳು ದಕ್ಷಿಣಭಾರತದಲ್ಲಿ ಬೆಳೆಯಲು ಕಾರಣಭೂತರಾದರು. ಆಡಳಿತವು ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರವಾಗಿಯೇ ನಡೆಯುತ್ತಿತ್ತು. ಮೌರ್ಯರ ನಂತರ ದಖನ್ನಿನ ಅಧಿಕಾರಕ್ಕೆ ಬಂದಂತಹ ಶಾತವಾಹನರು ಮತ್ತು ಅದರ ರಾಜಮನೆತನಗಳು ಮೌರ್ಯ ಆಡಳಿತದ ನೀತಿ ನಿಯಮವನ್ನು ಮುಂದುವರೆಸಿರುವುದು ಸಹ ಕಂಡುಬರುತ್ತದೆ.

**ಕದಂಬರ ಕಾಲದ ಆಡಳಿತ**

ಶಾತವಾಹನರ ತದನಂತರ ಕರ್ನಾಟಕದ ನಾನಾ ಭಾಗಗಳಲ್ಲಿ ರಾಜಕೀಯ ಹಿಡಿತ ಸಾಧಿಸಿದ ಮನೆತನವೆಂದರೆ, ಕದಂಬರು. ಇವರನ್ನು ಬನವಾಸಿಯ ಕದಂಬರು ಎಂದೇ ಕರೆಯುತ್ತಾರೆ. ಬನವಾಸಿಯ ಕದಂಬರು ಕ್ರಿ.ಶ.3ನೇ ಶತಮಾನದ ಪೂರ್ವಾರ್ಧದಿಂದ ಕ್ರಿ.ಶ.6ನೇ ಶತಮಾನದ ಕೊನೆಯವರೆಗೆ ಬನವಾಸಿಯಲ್ಲಿ ಆಡಳಿತ ನಡೆಸಿದ್ದಾನೆ. ಕರ್ನಾಟಕದ ಪಶ್ಚಿಮದಲ್ಲಿ ಕದಂಬರು ಆಳ್ವಿಕೆ ನಡೆಸಿದರೆ, ಪೂರ್ವದಲ್ಲಿ ಗಂಗರು ಆಳ್ವಿಕೆ ನಡೆಸುತ್ತಿದ್ದರು. ಕ್ರಿ.ಶ.4ನೇ ಶತಮಾನದ ವೇಳೆಗೆ ಆಡಳಿತ ನಡೆಸಿದ ಕದಂಬ ದೊರೆ ಮಯೂರಶರ್ಮ ಕಾಕುಸ್ಥವರ್ಮನ ತಾಳಗುಂದಶಾಸನದ ಪಾಠದಿಂದ ಮಾಹಿತಿ ತಿಳಿದು ಬರುತ್ತದೆ.[11] ಕದಂಬರು ಕ್ರಿ.ಶ.11–12ನೇ ಶತಮಾನದ ಕಾಲಕ್ಕೆ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಇದರ ಕಾಲದಲ್ಲಿ ಮಾಂಡಲೀಕರಾಗಿ ಕನ್ನಡ ನಾಡಿನಲ್ಲಿ ಹಲವು ಸಣ್ಣಪುಟ್ಟ ರಾಜರಿದ್ದನೆಂದು ಸಹ ತಿಳಿದುಬರುತ್ತದೆ.[11]

ಕ್ರಿ.ಶ.4ನೇ ಶತಮಾನದ ಆರಂಭದಲ್ಲಿ ಕದಂಬರ ಮಯೂರವರ್ಮನು ಪಲ್ಲವರ ವಿರುದ್ಧ ಹೋರಾಡಿ ರಾಜ್ಯವನ್ನು ಸ್ಥಾಪಿಸಿದ. ಬನವಾಸಿ ಕದಂಬರ ರಾಜಧಾನಿಯಾಗಿತ್ತು. ದಕ್ಷಿನದಲ್ಲಿ ಕಾವೇರಿ ತೀರದವರೆಗೂ ಆತನ ಅಧೀನಕ್ಕೆ ಸೇರಿತು. ಬನವಾಸಿಯ ಬಳಿಯಿರುವ ಗುಡ್ನಾಪುರದ ಶಾಸನವು ಮಯೂರಶರ್ಮನ ತಾತನಾದ ವೀರಶರ್ಮನು ಚತುರ್ವೇದ ಸಂಹಿತೆಗಳ ಪಂಡಿತನಾಗಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ ಈತನು ವೀರಶರ್ಮನ ಮಗನಾದ ಬಂಧು ಷೇಣನ ಪುತ್ರನೆಂದೂ ತಿಳಿದುಬರುತ್ತದೆ. ವೀರಶರ್ಮನು ಅಂದಿನ ಪ್ರಸಿದ್ಧ ಘಟಿಕಾ ಸ್ಥಾನವಾಗಿದ್ದ ಹಾಗೂ ಪಲ್ಲವರ ರಾಜಧಾನಿಯಾಗಿದ್ದ ಕಂಚೀಪುರಕ್ಕೆ ಉನ್ನತ ಶಿಕ್ಷಣ ಪಡೆಯಲಿಕ್ಕೆ ಹೋಗಿದ್ದನು ಎಂದು ತಿಳಿದುಬರುತ್ತದೆ. ಕದಂಬ ರಾಜ ಕಾಕುಸ್ಥವರ್ಮನು ತನ್ನ ಹೆಣ್ಣುಮಕ್ಕಳನ್ನು ಗುಪ್ತ, ವಾಕಟಕ, ಭಟಾರಿ ಹಾಗೂ ಗಂಗವಂಶದ ರಾಜರಿಗೆ ಮದುವೆ ಮಾಡಿರುವ ವಿಚಾರ

ತಿಳಿದುಬರುತ್ತದೆ. ಕದಂಬ ವಂಶವು ನೆರೆ ರಾಜ್ಯಗಳೊಂದಿಗೆ ಸ್ನೇಹಸಂಬಂಧವನ್ನು ಹೊಂದಿದ್ದನು, ಈ ರೀತಿ ಕರ್ನಾಟಕದ ಉತ್ತರ ಭಾಗವು ಕದಂಬರ ಅಧೀನಕ್ಕೆ ಸೇರಿತ್ತು. ದಕ್ಷಿಣ ಭಾಗವು ತಲಕಾಡಿನ ಗಂಗರಿಗೆ ಸೇರಿತ್ತು. ಈ ಎರಡೂ ರಾಜವಂಶಗಳು ಪ್ರೀತಿಯಿಂದ ರಾಜ್ಯಭಾರ ಮಾಡಿತ್ತೆಂಬುದು ಸಹ ತಿಳಿದುಬರುತ್ತದೆ.

## ತಲಕಾಡಿನ ಗಂಗರು

ಗಂಗರು ತಮ್ಮ ಆಡಳಿತವನ್ನು ಕ್ರಿ.ಶ.350 ರಲ್ಲಿ ಕೋಲಾರದಿಂದ ಆರಂಭಿಸಿದರು. ಇವರು ಕ್ರಿ.ಶ.3ನೇ ಶತಮಾನದಿಂದ 10ನೇ ಶತಮಾನದ ಕೊನೆಯವರೆಗೂ ರಾಜಕೀಯವಾಗಿ ಆಡಳಿತವನ್ನು ನಡೆಸಿದರು. ಗಂಗರ ಕುರಿತು ಅವರ ರಾಜಮನೆತನಗಳ ಕುರಿತು ಇನ್ನೂ ನಿರಂತರವಾಗಿ ಸಂಶೋಧನೆಗಳು ನಡೆಯುತ್ತಿವೆ.[12] ದಡಿಗ ಮತ್ತು ಮಾಧವ ಎಂಬ ಇಬ್ಬರು ರಾಜಕುಮಾರರು ನದಗಿರಿ (ನಂದೀಬೆಟ್ಟ) ಮತ್ತು ಕುವಲಾಲಪುರ (ಕೋಲಾರ) ಎಂಬ ಎರಡು ಪ್ರಮುಖ ಪ್ರಾಂತ್ಯಗಳನ್ನುಳ್ಳ ಗಂಗವಾಡಿ 96000 ಪ್ರಾಂತ್ಯದಲ್ಲಿ ತಮ್ಮ ರಾಜ್ಯ ಸ್ಥಾಪನೆ ಮಾಡಿದರೆಂದೂ ತಿಳಿದುಬರುತ್ತದೆ. ತದನಂತರ ಮೈಸೂರು ಜಿಲ್ಲೆಯ ತಲಕಾಡಿಗೆ ರಾಜಧಾನಿಯನ್ನು ಬದಲಾಯಿಸಿಕೊಂಡರು. ಮದಗಜ (ಆನೆ) ಗಂಗ ರಾಜ ಲಾಂಛನವಾಯಿತು. ಬಾದಾಮಿ ಚಾಳುಕ್ಯರು ಆಡಳಿತ ಪ್ರಾರಂಭವಾಗುವವರೆಗೆ ಇವರು ಹೆಚ್ಚು ಕಡಿಮೆ ಸಾರ್ವಭೌಮರಾಜರಂತೆಯೇ ಇದ್ದರು. ಹಲವಾರು ಗಂಗರಾಜರು, ಪಂಡಿತರು, ಕವಿಗಳು ಆಗಿದ್ದರಷ್ಟೇ ಅಲ್ಲದೆ, ಪಂಡಿತರಿಗೆ ಆಶ್ರಯ ನೀಡಿದ ದಾನಿಗಳೂ ಸಹ ಆಗಿದ್ದರು. ಮುಂದೆ ಅವರು ಕ್ರಿ.ಶ.10ನೇ ಶತಮಾನದ ಕೊನೆಯವರೆಗೆ ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಸಾಮಂತರಾಗಿ ದಕ್ಷಿಣ ಕರ್ನಾಟಕದ ಪ್ರಮುಖ ಭಾಗವನ್ನು ಹಾಗೂ ತಮಿಳುನಾಡಿನ ಕೆಲವು ಭಾಗಗಳನ್ನು ಆಳಿದರು.

ದುರ್ವಿನೀತನ (ಕ್ರಿ.ಶ.529-579) ಈತನು ಗಂಗವಂಶದ ಶ್ರೇಷ್ಠರಾಜ. ಈತನು ಹಲವಾರು ಪುಸ್ತಕಗಳನ್ನು ಕನ್ನಡ ಮತ್ತು ಸಂಸ್ಕೃತ ಭಾಶೆಗಳಲ್ಲಿ ಬರೆದಿದ್ದಾನೆ. ಈತನ ಆಸ್ಥಾನದಲ್ಲಿ ಸಂಸ್ಕೃತ ಭಾಷೆಯ ಶ್ರೇಷ್ಠಕವಿ ಭಾರವಿ ಇದ್ದನು. ಅಂದು ಪ್ರಾಚೀನ ಪ್ರಾಂತ್ಯವಾಗಿದ್ದ ಪುನ್ನಾಟ ದೇಶ ಅಂದರೆ ಮೈಸೂರು ಜಿಲ್ಲೆಯ ವ್ಯಾಪ್ತಿಗೆ ಬರುವ ಹೆಗ್ಗಡದೇವನ ಕೋಟೆ ತಾಲ್ಲೂಕು ಪ್ರದೇಶವಾಗಿತ್ತು. ಇದು ಅಂದಿನ ಕಾಲಘಟ್ಟದಲ್ಲಿ ಸೇರಿತ್ತು. ಇವನ ಮರಿ ಮೊಮ್ಮಗನಾದ ಭೂವಿಕ್ರಮ (ಕ್ರಿ.ಶ.654-79) ಬಾದಾಮಿಯ ಚಾಲುಕ್ಯರ ಸ್ನೇಹಿತನಾಗಿದ್ದನು. ಚಾಲುಕ್ಯ- ಪಲ್ಲವರ ಮಧ್ಯ ನಡೆದ ಯುದ್ಧದಲ್ಲಿ (ಕ್ರಿ.ಶ.670) ರಲ್ಲಿ ಭಾಗವಹಿಸಿ ಪಲ್ಲವ ಪರಮೇ.ಶ್ಅರ ವರ್ಮನ ಮೇಲೆ ಚಾಲುಕ್ಯ ಚಕ್ರವರ್ತಿಯು ಜಯವನ್ನು ಪಡೆಯುವಂತೆ

ನೋಡಿಕೊಂಡನು. ಯುದ್ಧದ ವಿಜಯದಿಂದಾಗಿ ಪಲ್ಲವ ರಾಜನು ಉಗ್ರೋದಯ ಎಂಬ ಕಂಠೀಹಾರವನ್ನು ತಾನೇ ಇಟ್ಟುಕೊಂಡ. ಚನ್ನಪಟ್ಟಣ ತಾಲ್ಲೂಕಿನ ಮಂಕುಂದ ಕೆಲವು ಕಾಲ ಆತನ ನೆಲೆಯಾಗಿತ್ತೆಂದು ತಿಳಿದುಬರುತ್ತದೆ.

ಗಂಗರ ವಂಶದ ತದನಂತರ ಬಂದ ರಾಜ ಶ್ರೀಪುರುಷನು (ಕ್ರಿ.ಶ.725– ರಿಂದ 788) ಈತನು ಚಾಲುಕ್ಯರ ಒಬ್ಬ ಆಪ್ತ ಗೆಳೆಯನಾಗಿದ್ದನು. ಅಲ್ಲದೆ ತನ್ನನ್ನು ನಿಯಂತ್ರಿಸಲು ಪ್ರಯತ್ನಿಸಿದ ರಾಷ್ಟ್ರಕೂಟರನ್ನು ಅವರು ಬಾದಾಮಿ ಚಾಲುಕ್ಯರನ್ನು ಪರಾಜಯಗೊಳಿಸಾಗಲೂ ಪ್ರತಿಭಟಿಸಿದ ಚಾಲುಕ್ಯರ ಪರವಾಗಿ ನಡೆದ ಕ್ರಿ.ಶ.734 ರ ವಿಳಂದಯಲ್ಲಿ ನಡೆದ ಯುದ್ಧದಲ್ಲಿ ಶ್ರೀಪುರುಷನು ಪಲ್ಲವ ಇಮ್ಮಡಿ ನಂದಿವರ್ಮನನ್ನು ಕೊಂದು, ಪಲ್ಲವ ರಾಜರುಗಳ ಬಿರುದನ್ನು ಪಡೆದನು. ಈತನು ತನ್ನ ರಾಜಧಾನಿಯನ್ನು ಬೆಂಗಳೂರಿನ ಬಳಿ ನೆಲಮಂಗಲ ತಾಲ್ಲೂಕಿನ ಮಣ್ಣೆ (ಮಾನ್ಯಪುರಂ) ಗೆ ಬದಲಾಯಿಸಿದನೆಂದು ತಿಳಿದುಬರುತ್ತದೆ. ಈತನ ಮಗ ಇಮ್ಮಡಿ ಶಿವಮಾರ (ಕ್ರಿ.ಶ.788–816) ಹಾಗೂ ಮೊಮ್ಮಗ ಒಂದನೇ ರಾಚಮಲ್ಲ (ಕ್ರಿ.ಶ.816–853) ರಾಷ್ಟ್ರಕೂಟರ ಮೇಲಿನ ಪ್ರತಿಭಟನೆಯನ್ನು ಮುಂದುವರೆಸಿದರು. ಕೊನೆಯಲ್ಲಿ ರಾಷ್ಟ್ರಕೂಟ ದೊರೆ ಅಮೋಘವರ್ಷ ಒಂದನೇ ನೃಪತುಂಗ (ಕ್ರಿ.ಶ.814–878) ತನ್ನ ಮಗಳನ್ನು ಗಂಗರಾಜ ಕುಮಾರನಿಗೆ ಮದುವೆ ಮಾಡುವುದರ ಮೂಲಕ ಗಂಗರೊಂದಿಗೆ ರಾಜಿ ಮಾಡಿಕೊಳ್ಳಲು ಪ್ರಯತ್ನಿಸಿದನು. ತದನಂತರ ಬೆಳವಣಿಗೆಯಲ್ಲಿ ಚೋಳರು ಪ್ರಬಲರಾದರು. ಗಂಗರಾಜ ಇಮ್ಮಡಿ ಬೂತುಗನು (ಕ್ರಿ.ಶ.938–961) ರಾಷ್ಟ್ರಕೂಟರೊಡನೆ ಸೇರಿಕೊಂಡು ಚೋಳರನ್ನು ವಿರೋಧಿಸಿದಾಗ ರಾಷ್ಟ್ರಕೂಟ ದೊರೆ ಮೂರನೇ ಕೃಷ್ಣನು ಕ್ರಿ.ಶ.937–967) ರ ಸಮಯದಲ್ಲಿ ಒಂದಾಗಿ ತಕ್ಕೋಲದಲ್ಲಿ ನಡೆದ ಭೀಕರ ಯುದ್ಧದಲ್ಲಿ ಅಂದರೆ (ಕ್ರಿ.ಶ.949) ರಲ್ಲಿ ಚೋಳ ದೊರೆಯಾದ ರಾಜಾದಿತ್ಯನನ್ನು ಕೊಂದು ಚೋಳರನ್ನು ಅವಮಾನದಿಂದ ನೋಡಿದರು. ಇದರ ವಿಚಾರ ನಮಗೆ ಆತಕೂರು ಶಿಲಾಶಾಸನದಿಂದ ತಿಳಿದುಬರುತ್ತದೆ.[13] ಈಗ ಈ ಶಾಸನವು ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿದ್.ಎ ಕೊನೆಯಲ್ಲಿ ಗಂಗರ ಆಡಳಿತ ಪ್ರದೇಶ ಚೋಳರ ಆಳ್ವಿಕೆಗೆ ಒಳಗಾಯಿತು. ಇವರ ಆಳ್ವಿಕೆ ಸುಮಾರು ಕ್ರಿ.ಶ.1004 ರಲ್ಲಿ ಕೊನೆಯಾಗುತ್ತದೆ. ಇವರು ತಲಕಾಡನ್ನು ತಮ್ಮ ಪ್ರಾಂತೀಯ ಕೇಂದ್ರವನ್ನಾಗಿ ಮಾಡಿಕೊಂಡು, ಗಂಗವಾಡಿ 96000 ಪ್ರಾಂತ್ಯವನ್ನು ಆಳಿದ ಚೋಳರನ್ನು ಕ್ರಿ.ಶ.1114 ರಲ್ಲಿ ಹೊಯ್ಸಳ ವಿಷ್ಣುವರ್ಧನನು ತಲಕಾಡಿನಿಂದ ತಮಿಳುನಾಡಿಗೆ ಓಡಿಸಿದನು. ಈ ಗಂಗರ ಒಂದು ಶಾಖೆ ಕ್ರಿ.ಶ.696 ರಲ್ಲಿ ಒರಿಸ್ಸಾದಲ್ಲಿ ಆಳುತ್ತಿದ್ದು, ಅವರನ್ನು ಪೂರ್ವ ಅಥವಾ ಕಳಿಂಗ ಗಂಗರೆಂದು ಇತಿಹಾಸದಲ್ಲಿ ದಾಖಲಿಸಲಾಗಿದೆ. ಗಂಗ ಸಾಮಂತರಲ್ಲಿ ಪ್ರಾಂತೀಯ ರಾಜಕೀಯ ಸೆಳವುಗಳಿಗೆ ತಕ್ಕಂತೆ ಸ್ಥಳೀಯ ರಾಜಕಾರಣದಲ್ಲಿ ಭಾಗಿಯಾಗಿರುವವರಲ್ಲಿ ನೊಳಂಬ ದೊರೆಗಳು ಸಹ

ಪ್ರಮುಖರಾಗಿದ್ದರು. ಗಂಗರು ರಾಜ್ಯ ಉದ್ದಗಲಕ್ಕೂ ಅನೇಕ ಕೆರೆಗಳನ್ನು ನಿರ್ಮಾಣ ಮಾಡಿಸಿದ್ದಾನೆ. ಅವರ ಆಡಳಿತದ ಕಾಲದ ಪ್ರಾರಂಭದಲ್ಲಿ ತುರುಳ್ನಾಡಾಗಿದ್ದ ಕೋಲಾರ ಪ್ರಾಂತ್ಯ ಹಾಗೂ ಮೈಸೂರು ಪ್ರಾಂತ್ಯಗಳು ಗಂಗರ ಕಾಲದಲ್ಲಿ ಹಲವಾರು ರೀತಿಯ ನೀರಾವರಿ ಅಭಿವೃದ್ಧಿಯನ್ನು ಪಡೆದುಕೊಂಡವು. ಶ್ರವಣ ಬೆಳಗೊಳ ಪ್ರದೇಶದಲ್ಲಿ ಹಲವಾರು ವೀರಗಲ್ಲುಗಳು, ಮಾಸ್ತಿಕಲ್ಲು ಕಂಡುಬಂದಿದೆ. ಗಂಗರು ಕಂಬದಹಳ್ಳಿ ಹಾಗೂ ಶ್ರವಣ ಬೆಳಗೊಳದಲ್ಲಿ ಅನೇಕ ಜೈನ ಬಸದಿಗಳನ್ನು ಕಟ್ಟಿಸಿದ್ದಾನೆ. ಮದ್ದೂರು ತಾಲ್ಲೂಕು ಕೊಳಗೆರೆಯ ಸಮೀಪದ ಅರತಿಪ್ಪೂರಿನಲ್ಲಿರುವ (ಕ್ರಿ.ಶ.918) ರಲ್ಲಿ ಸ್ಥಾಪಿಸಲಾದ ಸುಮಾರು 12 ಅಡಿ ಎತ್ತರವಿರುವ ಏಕಶಿಲಾ ಗೊಮ್ಮಟ ಶಿಲ್ಪ ಹಾಗೂ ಸುಮಾರು (ಕ್ರಿ.ಶ.982) ರಲ್ಲಿ ಶ್ರವಣ ಬೆಳಗೊಳದಲ್ಲಿ ಗಂಗರ ಮಂತ್ರಿಯಾದ ಚಾವುಂಡರಾಯನು ನಿರ್ಮಾಣ ಮಾಡಿಸಿದ ಸುಮಾರು 58 ಅಡಿ ಎತ್ತರ ಗೊಮ್ಮಟಮೂರ್ತಿ ಅತ್ಯಂತ ಅಪೂರ್ವವಾದದ್ದು. ಇತ್ತೀಚೆಗೆ ತಲಕಾಡಿನಲ್ಲಿ ನಡೆಸಿದ ಉತ್ಖನನಗಳಮ್ದ ಗಂಗರ ಕಾಲಕ್ಕೆ ಸೇರಿದ ಜೈನ ಬಸದಿಯ ಕಟ್ಟಡ ಭಾಗಗಳು ಅಲ್ಲದೆ ಪಾರ್ಶ್ವನಾಥನ ಶಿಲ್ಪಗಳು ಸೇರಿದಂತೆ ರೋಮನ್ನರ ಕಾಲಕ್ಕೆ ಸೇರಿದ ನಾಣ್ಯಗಳು ಸಹ ದೊರೆತಿವೆ. [14] ಕ್ರಿ.ಶ.725-88) ರಲ್ಲಿ ಶ್ರೀಪುರುಷ ಈ ಭಾಗದಲ್ಲಿ ಆಳ್ವಿಕೆ ನಡೆಸಿರುತ್ತಾನೆ. ಕೊಂಗುಣಿ ಮಹಾರಾಜ ಶ್ರೀಪುರುಷನ ಕಾಲದ ಎರಡು ಶಾಸನಗಳು ನೀರ್ಗುಂದರಸನನ್ನು ಉಲ್ಲೇಖಿಸಿದೆ. ಈ ನಿರ್ಗುಂದರಸನ ಆಳು ಪೊಟ್ಟೆಯರ ಕುಡಿಮುದ್ದನ ಮರಣವನ್ನು ತಿಳಿಸಿದ ಕಕ್ಕಿಹಳ್ಳಿಯ ಶಾಸನ ಅರಸನ ಹೆಸರನ್ನು ಹೇಳಿಲ್ಲ. [15] ಆದರೆ ನಾಗಮಂಗಲದ ತಾಮ್ರಪಟದಲ್ಲಿ ಪರಮಗೊಳ ಪೃಥ್ವಿಮಿ ನೀರ್ಗುಂದರಸ ದುಂಡು ಎಂದು ಹೇಳಿದ್ದು ಅವನ ಮಡದಿ ಕುಂದಾಚಿ ಶ್ರೀಪುರ (ಶಿಪುರ) ದಲ್ಲಿ ಲೋಕತಿಲಕ ಜಿನಾಲಯವನ್ನು ಕಟ್ಟಿಸಿರುವುದನ್ನು ತಿಳಿಸುತ್ತದೆ. [16] ಒಂದನೇ ರಾಚಮಲ್ಲ (ಕ್ರಿ.ಶ.816-843) ಈತನ ಗಂಡಸಿ ಶಾಸನ ರಾಷ್ಟ್ರಕೂಟ ದೊರೆ ಬಲ್ಲಹ (ನೃಪತುಂಗ)ನನ್ನು ಸ್ಥಳೀಯ ಅಧಿಕಾರಿ ಬಾಸಯ್ಯನನ್ನು ಪ್ರಸಿದ್ಧಿ ಮುನಿ ಜಿನಸೇನ ಹಾಗೂ ಗುಣಭದ್ರರನ್ನು ಅವರ ಶಿಷ್ಯ ಕಾಡಬ್ಬೆ ಕಂತಿಯನ್ನು ಉಲ್ಲೇಖಿಸಿದೆ. [17] ಈತನ ಕಾಲದಲ್ಲಿ ರಾಷ್ಟ್ರಕೂಟ ಸೇನಾನಿಯಾದ ಬಂಕೇಶನು ಗಂಗರಾಜ್ಯದ ವಿಸ್ತರಣೆಯನ್ನು ತಡೆದಿದ್ದರಿಂದ ರಾಚಮಲ್ಲನು ನೊಳಂಬಾಧಿರಾಜ ಪುಳಲ್ಲೋರನೊಂದಿಗೆ ಮಗಳು ಜಾಯಬ್ಬೆಯನ್ನು ಮದುವೆ ಮಾಡಿರುವ ವಿಚಾರ ತಿಳಿದುಬರುತ್ತದೆ.

ಇಮ್ಮಡಿ ರಾಚಮಲ್ಲ (ಕ್ರಿ.ಶ.870-919) ಎರೆಯಪ್ಪರಸ (886-920) ಇಮ್ಮಡಿ ರಾಚಮಲ್ಲನು ಗಂಗವಾಡಿಯನ್ನು ಆಳ್ವಿಕೆ ಮಾಡುತ್ತಿದ್ದಾಗ. ಎರೆಯಪ್ಪರಸನು ಆತನಿಗೆ ನೆರವಾಗುತ್ತಿದ್ದನೆಂಬುದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಇವರಿಬ್ಬರ ಕಾಲದಲ್ಲಿ ನೊಳಂಬರೊಂದಿಗೆ ಯುದ್ಧಗಳು ಆಗುತ್ತಿದ್ದುದನ್ನು ಈ ಪ್ರಾಂತ್ಯದ ಶಾಸನಗಳು ತಿಳಿಸುತ್ತವೆ.

ಚೆಲುವನಹಳ್ಳಿಯ ಶಾಸನವು[18] ಅತಿರಥ ಮಂಗಳದಲ್ಲಿ ನಡೆದ ಯುದ್ಧವನ್ನು ತಿಳಿಸುತ್ತದೆ. ಅರಪುರೆಯ ಶಾಸನವು ಅಸಂದಿ ನಾಡನ್ನು ಆಳುತ್ತಿದ್ದ ಸಾಮಂತ ಮುತ್ತರನು ಕಣಿಕಟ್ಟೆಯಲ್ಲಿ ನಡೆದ ನೊಳಂಬರೊಂದಿಗಿನ ಯುದ್ಧದಲ್ಲಿ ಮರಣ ಹೊಂದಿದನು ಎಂದು ತಿಳಿಸಿದೆ. ಈ ಮುತ್ತರನು ಬಲಿವಂಶ ತಿಲಕನಾಗಿದ್ದನು. ಈತನಿಗೆ ಭುವನಾದಿತ್ಯ ಮತ್ತು ಕಲಿಕಾಲ ಶೂದ್ರಕ ಎಂಬ ಬಿರುದುಗಳಿದ್ದವು. [19] ಕಡೂರು ಮತ್ತು ಮುಗವಳ್ಳಿಯ ಶಿಲಾಶಾಸನಗಳು ಈ ಯುದ್ಧದ ವಿಚಾರವನ್ನು ದೃಢಪಡಿಸುತ್ತದೆ. [20] ಅಲ್ಲದೆ ನೊಳಂಬಾಧಿರಾಜನು ಒಂದನೆಯ ಅಯ್ಯಪದೇವನೆಂದು ಸಹ ತಿಳಿದುಬರುತ್ತದೆ. ಮಗರ ಮುನ್ನೂರರ ಮೊದಲ ಬಾಡ ಕಣಿಕಟ್ಟ ಆಯಕಟ್ಟಿನ ಪ್ರದೇಶದಲ್ಲಿ ಯಾವಾಗಲೂ ದಾಳಿಗೆ ಒಳಗಾಗುತ್ತಿತ್ತು. ಗಂಗರ ಮತ್ತು ನೊಳಂಬರ ಸ್ನೇಹ ಸರಿಯಿಲ್ಲದ ದ್ವೇಷಕ್ಕೆ ತಿರುಗಿತ್ತೆಂಬುದು ಇದರಿಂದ ತಿಳಿಯುತ್ತದೆ. ಈತನ ಕಾಲದ ಅನೇಕ ವೀರಗಲ್ಲು ಶಾಸನಗಳು ಕಂಡುಬರುತ್ತದೆ. ಗಂಗರ ನೊಳಂಬರ ಮತ್ತು ಬಾಣರ ನಡುವೆ ನಡೆಯುತ್ತಿದ್ದ ಹೋರಾಟದ ಬಗ್ಗೆ ಮಾಹಿತಿಗಳು ದೊರೆತಿವೆ.

ಇಮ್ಮಡಿ ಮಾರಸಿಂಹ (ಕ್ರಿ.ಶ.963–974) ಇವನ ಆಳ್ವಿಕೆಯ ಕಾಲದ ಮೂರು ವೀರ ಶಾಸನಗಳಾಗಿದ್ದು ಉಳನೂರಿನಲ್ಲಿ ನಡೆದ ಯುದ್ಧ ಹಾಗೂ ರಾಜಾದಿತ್ಯನು (ಚಾಳುಕ್ಯ) ಮಾಡಿದ ಕದನವೊಂದರ ವಿಚಾರ ತಿಳಿದುಬರುತ್ತದೆ. [21] ನೊಳಂಬರ ವಿರುದ್ಧದ ಯುದ್ಧದಲ್ಲಿ ಅಣ್ಣವಸಯ್ಯನು ಮರಣ ಹೊಂದಿದ್ದು, ಆತನ ಮಗ ಬೂತುಗ ಸೀರ್ಙಗೆಯನ್ನು ಕಲ್ನಾಡಾಗಿ ಪಡೆದಿದ್ದಾನೆ. [21] ಅಣ್ಣವಸಯ್ಯನು ವೀರಾವೇಶದಲ್ಲಿ ಹೋರಾಡಿ ಎದುರಿಸಿದ ನೊಳಂಬ ದೊರೆ ಕಟ್ಟನಮಲ್ಲ ಒಂದನೆಯ ನನ್ನಿಗೊಳಂಬನಾಗಿದ್ದು, ಅವನೊಂದಿಗೆ ಅದರ ವೀರರಾದ ಕಾಡುಗತ್ತಿ, ಉತ್ತಿಗ, ನೊಲಪ ಹಾಗೂ ಚಟ್ಟಿಗ ಇದ್ದರು. [22] ಈ ಯುದ್ಧದಲ್ಲಿ ಜಯಶೀಲನಾದ ಇಮ್ಮಡಿ ಮಾರಸಿಂಹನ ನೊಲಂಬ ಕುಲಾನ್ತಕನೆಂಬ ಬಿರುದನ್ನು ಪಡೆದನು. ಹಾಸನ ಜಿಲ್ಲೆ ಹಾಗೂ ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರಾಂತ್ಯದಲ್ಲಿ ಗಂಗವಂಶದ ದೊರೆಗಳಾದ ಪೊಲವೀರ, ಶ್ರೀಪುರುಷ, ಬೂತುಗ, ಪೆರ್ಮಾಡಿ, 1ನೇ ರಾಚಮಲ್ಲ, 2ನೇ ರಾಚಮಲ್ಲ, ಮಾರಸಿಂಹ, ಎರೆಯಪ್ಪ ಇವರುಗಳು ರಾಜಕೀಯವಾಗಿ ಅಧಿಕಾರವನ್ನು ನಡೆಸಿರುತ್ತಾರೆ. [23] ಕ್ರಿ.ಶ. 5–6ನೇ ಶತಮಾನದ ವೇಳೆಗೆ ಹಾಸನ ಜಿಲ್ಲೆಯ ಬಹುತೇಕ ಪ್ರದೇಶದಲ್ಲಿ ಗಂಗರ ಕಾಲಕ್ಕೆ ಸೇರಿದ ದೇವಾಲಯಗಳು, ಬಸದಿಗಳು, ಶಾಸನಗಳು, ವೀರಗಲ್ಲುಗಳು, ಮಾಸ್ತಿ ಕಲ್ಲುಗಳು ಕಂಡುಬರುತ್ತವೆ.

ತಗರೆ ಗ್ರಾಮವು ತಗರೆ ನಾಡು 70 ಎಂಬುದರ ಕೇಂದ್ರವಾಗಿದ್ದಿತು. ಅಲ್ಲದೆ ಅದು ತಗರೆ 12ರ ಆಡಳಿತದ ಸ್ಥಳವೂ ಆಗಿತ್ತು. ಶ್ರವಣಬೆಳಗೊಳದ ಶಾಸನಗಳಲ್ಲಿ ಗಂಗರ ಆಡಳಿತ

ಪ್ರದೇಶವನ್ನು ಗಂಗರಾಜ್ಯ, ಗಂಗವಾಡಿ ೯೬೦೦೦ ಪ್ರಾಂತ್ಯವೆಂದು ವಿಧ ವಿಧವಾಗಿ ಹೆಸರಿಸಿರುವುದು ಶಾಸನಗಳಲ್ಲಿ ಕಾಣಬರುತ್ತದೆ. ಇದು ಗಂಗ ಅರಸರ ಆಡಳಿತದ ಪೂರ್ವ ಪ್ರದೇಶದ ಹೆಸರು ಕೆಸಕೋಡು ಹಳ್ಳಿ, ಬಿಕ್ಕಿಗೋಡ ನೆಕುಂದ ಗ್ರಾಮಗಳು ಬೆಕು/ಬೆಕ್ಕುನಾಡ ಭಾಗಗಳೆಂದು ತಿಳಿದುಬರುತ್ತದೆ. ಒಟ್ಟಾರೆ ಹೇಳುವುದಾದರೆ, ತಲಕಾಡಿನ ಗಂಗರು ಕರ್ನಾಟಕದ ಬಹುತೇಕ ಭಾಗವನ್ನು ಆಳ್ವಿಕೆ ನಡೆಸಿರುತ್ತಾರೆ. ಕರ್ನಾಟಕವನ್ನು ಅತೀ ಹೆಚ್ಚು ದೀರ್ಘವಾಗಿ ಆಡಳಿತ ನಡೆಸಿದವರೆಂದರೆ ಗಂಗರು, ಇವರು ಕ್ರಿ.ಶ.3ನೇ ಶತಮಾನದಿಂದ 10ನೇ ಶತಮಾನದ ಕೊನೆಯವರೆಗೂ ಸುಮಾರು 7 ಶತಮಾನಗಳ ಕಾಲ ನಿರಂತರವಾಗಿ ಅಧಿಕಾರವನ್ನು ಚಲಾಯಿಸಿದ್ದಾರೆ. ಕೊಂಗುಣಿವರ್ಮ ಗಂಗವಂಶದ ಪ್ರಥಮ ದೊರೆ ಎಂದು ನಂಬಲಾಗಿದೆ. ಅದರೆ ಕೊಂಗುಣಿವರ್ಮನಿಂದ ಪ್ರಾರಂಭವಾದ ಗಂಗರಾಜ್ಯ 3ನೇ ಶತಮಾನದವರೆಗೂ ಯಾವುದೇ ರೀತಿಯ ಶಾಸನಗಳು ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಕೆಲವು ಗಂಗ ರಾಜರುಗಳ ಬಗ್ಗೆ ಯಾವುದೇ ವಿಚಾರಗಳು ಕಂಡುಬರುವುದಿಲ್ಲ. ಸಂಶೋಧನೆಗೆ ಸಂಬಂಧಪಟ್ಟ ಪ್ರದೇಶಕ್ಕೆ ಹೊಂದಿಕೊಂಡಂತೆ ಈ ಭಾಗದ ಗಂಗರ ಇತಿಹಾಸ ರಾಚಮಲ್ಲ ರಾಷ್ಟ್ರಕೂಟರ ಅಧಿಪತ್ಯದಿಂದ ಗಂಗರಾಜ್ಯವನ್ನು ಸ್ವಾತಂತ್ರ್ಯಗೊಳಿಸಿದನು. ಈತನ ಸಮಕಾಲೀನ ರಾಜನಾಗಿದ್ದ ರಾಷ್ಟ್ರಕೂಟರ ದೊರೆ ಅಮೋಘವರ್ಷನು ಗಂಗರು ಸ್ವತಂತ್ರರೆಂದು ಒಪ್ಪಿಕೊಂಡಿದ್ದಲ್ಲದೆ ಗಂಗರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿದನು. ಈತನ ನಂತರ ಇಮ್ಮಡಿ ರಾಚಮಲ್ಲ, ಇಮ್ಮಡಿ ಬೂತುಗ, ಮೂರನೆಯ ಮಾರಸಿಂಹ ಮತ್ತು ನಾಲ್ಕನೇ ರಾಚಮಲ್ಲ ಕ್ರಮವಾಗಿ ಗಂಗರಾಜ್ಯವನ್ನು ಆಳಿದರು. ನಾಲ್ಕನೇ ರಾಚಮಲ್ಲನ ಕಾಲದಲ್ಲಿ ಅದರಲ್ಲೂ ಈ ಚೆನ್ನರಾಯಪಟ್ಟಣ ತಾಲ್ಲೂಕಿನ ಆಡಳಿತ ನಡೆಸಿರುವುದು ಕರ್ನಾಟಕದ ಶಿಲ್ಪಕಲಾ ಇತಿಹಾಸದಲ್ಲಿ ಒಂದು ಪ್ರಮುಖ ಘಟ್ಟ ಎಂದರೆ ತಪ್ಪಾಗಲಾರದು. ಈತನ ಕಾಲದಲ್ಲಿ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನ ವಿಗ್ರಹವನ್ನು ಮೂಡಿಸಲಾಯಿತು. ನಂತರ ಕಾಲದಲ್ಲಿ ಗಂಗರಾಜ್ಯ ನೆರೆಯ ಚೋಳರ ಪ್ರಖ್ಯಾತ ದೊರೆ ಒಂದನೇ ರಾಜರಾಜ ಮತ್ತು ರಾಜೇಂದ್ರ ಚೊಲನ ಆಳ್ವಿಕೆಯ ಕಾಲದಲ್ಲಿ ಅತ್ಯಂತ ದೀರ್ಘಕಾಲ ಕರ್ನಾಟಕವನ್ನಾಳಿದ ರಾಜಮನೆತನ ಇತಿಹಾಸ ರಂಗದಿಂದ ಕಣ್ಮರೆಯಾದರೂ ಕೂಡ ಅವರು ಬಿಟ್ಟು ಹೋಗಿರುವ ಪ್ರಾಚೀನ ದೇವಾಲಯಗಳು ಇಂದಿಗೂ ಉಳಿದಿದೆ.

**ರಾಷ್ಟ್ರಕೂಟರು**

ಇವರನ್ನು ಮಾನ್ಯಕೂಟದ ರಾಷ್ಟ್ರಕೂಟರು ಎಂದು ಕರೆಯುತ್ತಾರೆ. ಅಲ್ಲದೆ ಮಾನ್ಯಖೇಟ ಅಥವಾ ಮಾಳಖೇಡ ಎಂದು ಕರೆಯುವರು. ಪ್ರಾರಂಭದಲ್ಲಿ ಬಾದಾಮಿ ಚಾಲುಕ್ಯರ

ಸಾಮಂತರಾಗಿದ್ದರು. ಇಂದ್ರನ ಪುತ್ರ ದಂತಿದುರ್ಗ ಈ ಮನೆತನ ಪ್ರಥಮ ಪ್ರಸಿದ್ಧರಾಜ ರಾಷ್ಟ್ರಕೂಟರ ನೇರವಾದ ರಾಜಕೀಯ ಹಾಸನ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ. ಆದರೆ ಇವರ ಕಾಲಕ್ಕೆ ರಾಷ್ಟ್ರಕೂಟರ ಸಾಮಂತರಾಗಿದ್ದ ತಲಕಾಡಿನ ಗಂಗರು ಅಧಿಕಾರವನ್ನು ನಡೆಸಿರುತ್ತಾರೆ. ಏಕೆಂದರೆ ಗಂಗ ಮತ್ತು ರಾಷ್ಟ್ರಕೂಟರ ನಡುವೆ ವಿವಾಹ ಸಂಬಂಧ ಹಾಗೂ ಅಂದಿನ ಕಾಲದ ಪ್ರಮುಖ ಧರ್ಮವಾಗಿದ್ದ ಜೈನ ಧರ್ಮದ ಪ್ರೀತಿ ಪ್ರೇಮದಿಂದ ಒಬ್ಬನೊಬ್ಬರು ಒಂದುಗೂಡಿ ಆಡಳಿತ ನಡೆಸಿದರು. ಆದರೆ ಚೋಳರ ಸಾಮಂತರಾಗಿ ಕೊಂಗಾಳ್ವರು ಮತ್ತು ಚೆಂಗಾಳ್ವರು ಈ ಭಾಗದ ಮೇಲೆ ಆಡಳಿತವನ್ನು ನಡೆಸಿರುತ್ತಾರೆ. ರಾಷ್ಟ್ರಕೂಟರ ಕಾಲದ ನೃಪತುಂಗ ಜೈನ ಮತಾವಲಂಬಿಯಾಗಿದ್ದರೂ ಸಹ ಧಾರ್ಮಿಕ ವಿಚಾರಗಳಲ್ಲಿ ಅತ್ಯಂತ ಉದಾರ ನೀತಿಯನ್ನು ಅನುಸರಿಸಿದನು. ಕನ್ನಡ ನಾಡಿನ ಪ್ರಾಚೀನ ಹಾಗೂ ಪ್ರಸಿದ್ಧವಾದ ಕವಿರಾಜಮಾರ್ಗ, ಈತನಿಮ್ದ ರಚಿತವಾಗಿದೆ. ಈ ಹಿನ್ನೆಲೆಯಿಂದ ಹಾಸನ ಜಿಲ್ಲೆಯ ಬಹುತೇಕ ಭಾಗಗಳಲ್ಲಿ ಹಾಗೂ ಚೆನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳಗೊಳಕ್ಕೆ ಇವರ ಕೊಡುಗೆ ಇದೆ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

**ಚೋಳರು**

ತಂಜಾವೂರಿನ ಚೋಳರು ಹಾಸನ ಜಿಲ್ಲೆಯ ಕೆಲವೊಂದು ಭಾಗಗಳಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಚೋಳರ ದೊರೆ ಮೊದಲನೆಯ ರಾಜರಾಜ ಚೋಳನಿಂದ ಶುರುವಾಗಿ ಮೊದಲನೆಯ ಕುಲೋತ್ತುಂಗ ಚೋಳನವರೆಗೂ ಸರಿ ಸಮನಾಗಿ ಸುಮಾರು ಒಂದು ಶತಮಾನಗಳ ಕಾಲ ಆಡಳಿತವನ್ನು ನಡೆಸಿರುತ್ತಾರೆ. ಚೋಳ ಮನೆತನ ದಕ್ಷಿಣ ಭಾರತದ ಅತ್ಯಂತ ಪ್ರಾಚೀನ ಮನೆತನಗಳಲ್ಲೊಂದು. ಚೇರ, ಪಾಂಡ್ಯರ ಜೊತೆಗೆ ಚೋಳರ ಇತಿಹಾಸ ನಮಗೆ ಕ್ರಿ.ಪೂ.ದಲ್ಲಿಯೇ ಇತ್ತೆಂದು ತಿಳಿದುಬರುತ್ತದೆ. [24] ಅಲ್ಲದೆ ಕಾವೇರಿ ತೀರ ಹಾಗೂ ನದಿ ದಂಡೆಯ ಪ್ರದೇಶದಲ್ಲಿ ಆಡಳಿತ ನಡೆಸಿರುತ್ತಾರೆ. [25] ಕ್ರಿ.ಶ.ಸುಮಾರು 2-3ನೇ ಶತಮಾನಗಳಲ್ಲಿ ಬರೆದಿರುವ ಸಂಗಂಸಾಹಿತ್ಯದಲ್ಲಿ ಚೋಳರ ಕಾಲದ ಕಥೆಗಳು ಕಂಡುಬರುತ್ತವೆ. ಚೋಳರು ಮೊದಲಿಗೆ ದಕ್ಷಿಣ ಕರ್ನಾಟಕದ ಆಗ್ನೇಯ ಭಾಗಗಳನ್ನು ವಶಪಡಿಸಿಕೊಂಡರು. ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು, ಚಾಮರಾಜನಗರ ಜಿಲ್ಲೆಯ ಬಹುತೇಕ ಎಲ್ಲಾ ಭಾಗಗಳು ಚೋಳರ ಕೈಸೇರಿತ್ತು. ತದನಂತರ ಮೈಸೂರು ಜಿಲ್ಲೆಯಲ್ಲಿರುವ ತಲಕಾಡನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ನಂತರ ಕಾಲದಲ್ಲಿ ಹಾಸನ ಜಿಲ್ಲೆಯಲ್ಲಿಯೇ ಅಧಿಕಾರವನ್ನು ನಡೆಸಿರುತ್ತಾರೆ. ಆದರೆ ಹಾಸನ ಜಿಲ್ಲೆಯ ಕೆಲವೊಂದು ಪ್ರದೇಶಗಳ್ಳಲಿ ಚೋಳರ ಸಾಮಂತರಾಗಿ ಚೆಂಗಾಳ್ವರು ಮತ್ತು ಕೊಂಗಾಳ್ವರು ಹಾಸನ ಜಿಲ್ಲೆಯ ದಕ್ಷಿಣ ಭಾಗವನ್ನು ಆಳ್ವಿಕೆ

ನಡೆಸಿರುತ್ತಾರೆ. ಕ್ರಿ.ಶ.1022 ರ ಒಂದು ಶಾಸನದಲ್ಲಿ ಚೋಳರ ರಾಜ ರಾಜೇಂದ್ರ ಚೊಲರ ಹೆಸರನ್ನು ತಿಳಸುವ ಶಾಸನವಿದೆ. [26] ಅಂದು ಚೋಳರು ಪಲ್ಲವರು ಪ್ರಭಾವವನ್ನು ಕಳೆದುಕೊಂಡ ನಂತರ ತುಂಗಾಭದ್ರೆಯ ತೀರದ ಅಂದರೆ ದಕ್ಷಿಣ ಭಾರ౦ತ್ಅದ ಬಹುಭಾಗದ ಮೇಲೆ ಚೋಳ ಪ್ರಾಬಲ್ಯ ಮುಂದುವರೆಯಿತು. ಕ್ರಿ.ಶ.೯೦೦ ರಿಂದ ಸುಮಾರು ಮೂರು ಶತಮಾನಗಳ ಕಾಲ ಚೋಳರು ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ನಡುವೆ ಆದಂತಹ ಯುದ್ಧಗಳೇ ಅಂದಿನ ಕಾಲದ ದಕ್ಷಿಣ ಭಾರತದ ಇತಿಹಾಸದಲ್ಲಿನ ಪ್ರಮುಖ ಘಟನೆ ಎಂದರೆ ತಪ್ಪಾಗಲಾರದು. ಚೆಂಗಾಳ್ವರು ಮೂಲತಃ ಜೈನಧರ್ಮೀಯರು ಎಂಬುದಾಗಿ ತಿಳಸುವ ಕ್ರಿ.ಶ. 11ನೇ ಶತಮಾನದ ಚಿಕ್ಕಹನಸೋಗೆ ಬಸದಿಯಲ್ಲಿರುವ ಶಾಸನದಿಂದ ತಿಳದುಬರುತ್ತದೆ. ಈ ಶಾಸನವು ಶ್ರೀ ವೀರ ರಾಜೇಂದ್ರ ಚಂಗಾಳ್ವ ದೇವರ್ಮಾಡಿಸಿದ ಪುಸ್ತಕ ಗಚ್ಛದ ಬಸದಿ ಹಾಗೂ ಅರಕಲಗೂಡು ತಾಲ್ಲೂಕು ಸುಳುಗೋಡು ಸೋಮವಾರದಲ್ಲಿರುವ ಶಾಸನದಿಂದ ತಿಳದುಬರುತ್ತದೆ.

ಈ ಶಾಸನದಲ್ಲಿ ಪೋಚಾಂಬಿಕೆಯ ಪುತ್ರನಾದ ಶ್ರೀ ಮತ್ಸ್ಯ ಭೂ ಪಾಳಕಂ ಆ ಚಂಗಾಳ್ವನ್ನಿಜಸತಿಗೇಚಬ್ಬರನಗೆ ಪರೋಕ್ಷ ವಿನಯನಿಮಿತ್ತಂ ಶ್ರೀ ಚೈತ್ಯ ಗೃಹದುನೊಪ್ಪಿರಲಾ ಚಂದ್ರಸ್ಥಾಯಿಯಪ್ಪಿನಂ ಮಾಡಿದಂ ಎಂಬ ನುಡಿಗಳು ಇವರ ಇತಿಹಾಸದ ಮಾಹಿತಿಯನ್ನು ತಿಳಸುತ್ತದೆ. ಇದು ಅಲ್ಲದೆ ಚಂಗಾಳ್ವ ಸೋಮದೇವ ಮತ್ತು ಬೊಪ್ಪದೇವ ಎಂಬ ಅರಸರನ್ನು ಶ್ರೀರಾಮನಾಥ ದೇವರ ದಿಬ್ಬ ಶ್ರೀಪಾದ ಪದ್ಮರಾಧಾಕರು ಎಂದು ತಿಳದುಬರುತ್ತದೆ. [27] ಚಂಗಾಳ್ವರು ಬೇರೆ ಬೇರೆ ದೊರೆಗಳ ಸಾಮಂತರಾಗಿದ್ದ ಕಾಲದಲ್ಲಿ ಬೇರೆ ಬೇರೆ ರಾಜಮನೆತನಗಳ ಜೊತೆಗೆ ವಿವಾಹ ಸಂಬಂಧವನ್ನು ಹೊಂದಿದ್ದರು. ಹಾಗೂ ಬೇರೆ ಬೇರೆ ಧರ್ಮಗಳನ್ನು ಅನುಸರಿಸಿದ ಕಾರಣಕ್ಕೋ ಒಡೆದು ಹೋಗಿರಬೇಕೆಂದು ಹೇಳಬಹುದಾಗಿದೆ.

ಚೆಂಗಾಳ್ವರು ಮೊದಲಿಗೆ ಯಡತೊರೆ ಹಾಗೂ ಹನಸೋಗೆಯಲ್ಲಿ ಕಂಡುಬರುವ ಜೈನಶಾಸನಗಳಲ್ಲಿ ಕಂಡುಬರುತ್ತರೆ. [28] ಆರಂಭ ಕಾಲದಲ್ಲಿ ಚೆಂಗಾಳ್ವರು ಗಂಗವಾಡಿಯನ್ನು ಪಡೆದುಕೊಂಡಿದ್ದ ಚೋಳರ ಅಧೀನರಾಗಿ ಅವರ ಸಾಮಂತರಾದರು. ನಂತರ ನೃಪಕಾಮನ ತರುವಾಯ ಬಂದ ಹೊಯ್ಸಳ ರಾಜ ವಿನಿಯಾದಿತ್ಯನ ಕಾಲದಲ್ಲಿ (ಕ್ರಿ.ಶ.1047–1098) ರ ಸಂದರ್ಭದಲ್ಲಿ ಚಂಗಾಳ್ವರ ನನ್ನಿ ಚಂಗಾಳ್ವ ಮಾಚೆಯರಸ, ಮಾದೇವ, ಒಡೆಯಾದಿತ್ಯ ಎಂಬಂತಹ ರಾಜರು ಈ ಶಾಸನಗಳಲ್ಲಿ ಕಂಡುಬರುತ್ತಾರೆ.

ಚಿಕ್ಕಹನಸೋಗೆಯ ಶಾಂತೀಶ್ವರ ಬಸದಿ (ಅಬ್ಬೆಯ ಜಿನಾಲಯ) ವನ್ನು ನಿರ್ಮಿಸಿದ ನನ್ನಿ ಚಂಗಾಳ್ವ ವೀರ ರಾಜೇಂದ್ರ ನನ್ನಿಚಂಗಾಳ್ವ ಎಂಬ ಹೆಸರುಗಳನ್ನು ಪಡೆದುಕೊಂಡಿದ್ದನು. ಈತನ ಕಾಲ ಸರಿಸುಮಾರು ಕ್ರಿ.ಶ.1034 ಮತ್ತು ಕ್ರಿ.ಶ.1060ರ ಮಧ್ಯ ಚೋಳರ ಅಧೀನ

ಪ್ರಭುವಾಗಿದ್ದ ಕಾರಣ ನನ್ನಿ ಚಂಗಾಳ್ವ ತನ್ನ ಹೆಸರಿನೊಂದಿಗೆ ಚೋಳ ಚಕ್ರವರ್ತಿಗಳ ಹೆಸರುಗಳನ್ನು ಸೇರಿಸಿಕೊಂಡಿದ್ದಾನೆ. ಇವನು ಶಕ್ತಿಶಾಲಿಯಾದ ದೊರೆಯಾಗಿದ್ದನು. ನನ್ನಿ ಚಂಗಾಳ್ವನ ಆಡಳಿತ ನಂತರ ಕ್ರಿ.ಶ.1090 ರ ಒಂದು ಶಾಸನದಲ್ಲಿ ಮಾದೆಯರಸ, ಅಥವಾ ಮಾಚೆಯರಸ ಚಂಗಾಳ್ವರ ಹೆಸರು ಕ್ರಿ.ಶ.1091 ರ ಶಿಲಾಶಾಸನದಲ್ಲಿ ಮಾದೇವ ಅಥವಾ ಮಾದೇವಣ್ಣ ಚಂಗಾಳ್ವನ ಹೆಸರು ಕಂಡುಬರುತ್ತದೆ. ಹೀಗೆ ಚೋಳರು ಈ ಭಾಗದಲ್ಲಿ ತಾವು ನೇರವಾಗಿ ಆಡಳಿತವನ್ನು ನಡೆಸದೇ ಹೋದರೂ ಆಯಾ ಸಾಮಂತರ ಮೂಲಕ ಅಧಿಕಾರ ನಡೆಸಿರುವುದು ಹಾಸನ ಜಿಲ್ಲೆಯಲ್ಲಿ ಕಂಡುಬರುತ್ತದೆ.

## ಬಾದಾಮಿ ಚಾಲುಕ್ಯರು

ಕದಂಬ ಮನೆತನದ ಅವನತಿಯ ನಂತರ ಕಾಲದ ಕರ್ನಾಟಕದಲ್ಲಿ ರಾಜ್ಯಸ್ಥಾಪನೆಯ ಮನೆತನವೆಂದರೆ, ಅದು ಬಾದಾಮಿ ಚಾಲುಕ್ಯರಿಗೆ ಸಲ್ಲಬೇಕು. ಇವರು ತಮ್ಮ ರಾಜಧಾನಿಯನ್ನು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಇವರು ಕ್ರಿ.ಶ.6ನೇ ಶತಮಾನದಿಂದ ಸುಮಾರು 200 ವರ್ಷಗಳ ಕಾಲ ರಾಜಕೀಯವಾಗಿ ಆಡಳಿತವನ್ನು ನಡೆಸಿರುತ್ತಾರೆ. ಇವರ ರಾಜಧಾನಿ ಬಾದಾಮಿ ಆಗಿರುವುದರಿಂದ ಬಾದಾಮಿ ಚಾಲುಕ್ಯರು ಎಂದೇ ಕರೆಯಲಾಗಿದೆ. ಬಾದಾಮಿ ಚಾಲುಕ್ಯರ ಮನೆತನವನ್ನು ಎರಡು ವಿಭಾಗಗಳಾಗಿ ಮಾಡಲಾಗಿರುತ್ತದೆ. ಒಂದು ಬಾದಾಮಿ ಚಾಲುಕ್ಯ ಅಥವಾ ಪಶ್ಚಿಮ ಚಾಲುಕ್ಯರೆಂದೂ ಮತ್ತೊಂದು ಕಲ್ಯಾಣದ ಚಾಲುಕ್ಯರೆಂದು ಕರೆಯಲಾಗಿದೆ. [29] ಬಾದಾಮಿ ಚಾಲುಕ್ಯರ ಮೂಲ ಪುರುಷ ಜಯಸಿಂಹ ಜಯಸಿಂಹನಿಮ್ದ ಪ್ರಾರಂಭವಾಗಿ ಸತ್ಯಾಶ್ರಯ ನೃಪಸಿಂಹ ಕೀರ್ತಿವರ್ಮ 2 ವರೆವಿಗೂ ಸುಮಾರು 9 ಜನ ಪ್ರಮುಖ ರಾಜರುಗಳು ಸುಮಾರು ಕ್ರಿ.ಶ.757 ರ ತನಕ ಆಳ್ವಿಕೆ ಮಾಡಿರುತ್ತಾರೆ. ಆದರೆ ದಕ್ಷಿಣ ಕರ್ನಾಟಕದ ಭಾಗದಲ್ಲಿ ಇದರ ರಾಜ್ಯಭಾರ ಕ್ರಮ ವಹಿಸಿದ್ದರೂ ಸಹ ಹಾಸನ ಜಿಲ್ಲೆಯಲ್ಲಿ ಇವರ ಕೊಡುಗೆ ಇಲ್ಲವೆಂದೇ ಹೇಳಬಹುದಾಗಿದೆ. ಆದರೆ ಕಲ್ಯಾಣಿ ಚಾಲುಕ್ಯರು ಈ ಭಾಗದಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ರಾಷ್ಟ್ರಕೂಟರಿಂದ ಸೋಲನ್ನು ಕಂಡ ಬಾದಾಮಿ ಚಾಲುಕ್ಯ ವಂಶದವನೇ ಮತ್ತೆ ರಾಷ್ಟ್ರಕೂಟರನ್ನು ಸೋಲಿಸಿ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತವನ್ನು ನಡೆಸಿದ ಕಾರಣ ಇವರಿಗೆ ಕಲ್ಯಾಣ ಚಾಲುಕ್ಯರು ಎಂದು ಕರೆಯಲಾಗಿದೆ. ರಾಷ್ಟ್ರಕೂಟರ ಅಧಿಕಾರಿಗಳಾಗಿದ್ದ, ಚಾಲುಕ್ಯರ ಸಮಯವನ್ನು ನೋಡಿ ಮತ್ತೆ ತಮ್ಮ ಅಧಿಕಾರವನ್ನು ಪಡೆದರು. ಒಂದು ಸಮಯದಲ್ಲಿ ಹಾಸನ ಜಿಲ್ಲೆಯ ಕೆಲವೊಂದು ಪ್ರದೇಶದಲ್ಲಿ ಕಲ್ಯಾಣದ ಚಾಲುಕ್ಯರು ರಾಜಕೀಯವಾಗಿ ಪ್ರೇರಣೆಯಿಂದ ಅಧಿಕಾರವನ್ನು ನಡೆಸಿದರು. ಕ್ರಿ.ಶ.1076ರಲ್ಲಿ ಅಧಿಕಾರಕ್ಕೆ

ಬಂದ ವಿಕ್ರಮಾದಿತ್ಯನು ಕ್ರಿ.ಶ.1126 ರ ವರೆಗೆ ಸುಮಾರು 50 ವರ್ಷಗಳ ಕಾಲ ಸುದೀರ್ಘವಾಗಿ ಆಡಳಿತವನ್ನು ನಡೆಸಿರುತ್ತಾರೆ. ಈತನಿಗೆ ತ್ರಿಭುವನ ಮಲ್ಲ ಎಂಬ ಬಿರುದನ್ನು ಪಡೆದುಕೊಂಡಿದ್ದನು. ಈತನು ಸಿಂಹಾಸ್ನಕ್ಕೆ ಬಂದ ಕೂಡಲೇ ತನ್ನ ಹೆಸರಿನಲ್ಲಿ ಚಾಲುಕ್ಯ ವಿಕ್ರಮಶಕೆಯನ್ನು ಪ್ರಾರಂಭಿಸಿದನು. ವಿಕ್ರಮಾದಿತ್ಯನು ಈ ಭಾಗದಲ್ಲಿ ಚೋಳರೊಡನೆ ಯುದ್ಧ ಮಾಡುವುದನ್ನು ತಪ್ಪಿಸಿಕೊಂಡರೂ ಇನ್ನಿತರರ ಮೇಲೆ ಹಲವಾರು ಯುದ್ಧಗಳನ್ನು ಮಾಡಬೇಕಾಯಿತು. [30] ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನಲ್ಲಿ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ನಾಲ್ಕು ಶಾಸನಗಳಿವೆ. [31] ಕ್ರಿ.ಶ.1097-1098 ರಲ್ಲಿ ಬರೆಸಲಾಗಿರುವ ಶಿಲಾಶಾಸನದಲ್ಲಿ ಚಾಲುಕ್ಯ ವಿಕ್ರಮಾದಿತ್ಯನ ಆಡಳಿತ ಕಾಲದಲ್ಲಿ ಪ್ರಾರಂಭಿಸಿದಂತಹ ವಿಕ್ರಮ ಶಕೆಯನ್ನು ತಿಳಿಸಿದ್ದರೂ ಸಹ ಅವರನ್ನು ಅಧಿ ರಾಜರು ಎಂದು ತಿಳಿಸದ್ದೇ ಇರುವುದು ಒಂದು ದುರಂತ. [32] ಆದ ಕಾರಣ ಚಾಲುಕ್ಯರ ಅಧಿರಾಜತ್ವವನ್ನು ಪರಿಪೂರ್ಣವಾಗಿ ಅದರ ಬಿರುದಾವಳಿಗಳೊಂದಿಗೆ ತಿಳಿಸಿರುವ ಅತ್ಯಂತ ಪ್ರಾಚೀನ ಶಿಲಾಶಾಸನವೆಂದರೆ ಬೇಲೂರಿನಲ್ಲಿರುವ ಶಾಸನವಾಗಿದೆ. [33] ಈ ಜಿಲ್ಲೆಯಲ್ಲಿ ದೊರೆಯುವ ಕೆಲವೊಂದು ಶಾಸನಗಳ ಹಿನ್ನೆಲೆಯಿಂದ ಕಲ್ಯಾಣ ಚಾಲುಕ್ಯರ ಇತಿಹಾಸವನ್ನು ನಿರೂಪಿಸಲು ಸಹಾಯಕವಾಗಿದೆ. ಕೆಲವು ಶಾಸನ 6ನೇ ವಿಕ್ರಮಾದಿತ್ಯನ ಆಡಳಿತದ ಕಾಲಕ್ಕೆ ಪೂರಕವಾಗಿ, ಹೊಯ್ಸಳ ರಾಜ ಒಂದನೇ ಬಲ್ಲಾಳನು ಈ ಭಾಗಕ್ಕೆ ಬಿಟ್ಟಿರುವ ದತ್ತಿಗಳನ್ನು ಕೆಲವೊಂದು ಶಾಸನಗಳು ತಿಳಿಯಪಡಿಸುತ್ತದೆ. [34]

ಕ್ರಿ.ಶ.1099 ರಲ್ಲಿ ಹೊಯ್ಸಳ ರಾಜ ಎರೆಯಂಗನು ಅಧಿಕಾರದಲ್ಲಿದ್ದಾಗ ಆತನ ಶಾಸನದಲ್ಲಿವನ ಬಿರುದಾವಳಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಒಂದನೆಯ ಬಲ್ಲಾಳ ತಂದೆಯೊಂದಿಗೆ ಜೊತೆಯಾಗಿ ರಾಜ್ಯಭಾರವನ್ನು ನಡೆಸುತ್ತಿದ್ದನು ಎಂದು ತಿಳಿದುಬರುತ್ತದೆ. [35] ಇದು ಅಲ್ಲದೆ ಆ ಒಂದು ಶಾಸನದ ಮುಖ್ಯ ವಿಚಾರವೇನೆಂದರೆ, ತಂದೆ ಮಕ್ಕಳಿಬ್ಬರೂ ಸೇರಿ ಆಡಳಿತವನ್ನು ನಡೆಸುತ್ತಿದ್ದರೆಂದೂ ಇವರು ಚಾಲುಕ್ಯರನ್ನು ಅಧಿರಾಜರೆಂದು ಒಪ್ಪಿಕೊಂಡಿರುವುದು ಅಷ್ಟೇ ಸ್ಪಷ್ಟವಾದ ವಿಷಯದಿಂದ ಕೂಡಿದೆ. ಆರನೆಯ ವಿಕ್ರಮಾದಿತ್ಯನ ಆಡಳಿತದ ಕಾಲಮಾನದಲ್ಲಿ ಆಅತನ ಮಾಂಡಲೀಕನಾದ ವಿಶ್ಣುವರ್ಧನ ವೀರ ಗಂಗ ಹೊಯ್ಸಳ ದೇವನು ದತ್ತಿ ಬಿಟ್ಟ ವಿಚಾರ ತಿಳಿದುಬರುತ್ತದೆ.

ಕೋಗೂಡಿನ ಸಕಲಗಾವುಂಡಗಳು ಮತ್ತು ಚಾಲುಕ್ಯ ಮತಿ ವರ್ಮನೂ ಸೇರಿ ಸೀಮೆಯ ಮೇಲೆ ಹರಿದುಬಂದ ರಾಜರಾಜನನ್ನು ಆತನ ಸೈನ್ಯದಲ್ಲಿಯೆ ಹರಿಯಲ್ಲಂಡರಸನೆಂಬವನ ತಮ್ಮ ಅಯ್ಯನನ್ನು ಎದುರಿಸುತ್ತಾನೆ. ಈ ಚಾಳುಕ್ಯ ಮತಿವರ್ಮನು ಯಾರೆಂದು ತಿಳಿದುಬರುವುದಿಲ್ಲ. ಈ ಶಾಸನದಲ್ಲಿ ಕಂಡುಬರುವ ಅಕ್ಷರ ಲಿಪಿಗಳು ಹಳೆಯ

ಕನ್ನಡದ ಅಕ್ಷರಗಳೆಂದೂ ತಿಳಿದು ಬರುವುದರಿಂದ ಇಲ್ಲಿನ ರಾಜ ಪ್ರಾಯಶಃ ಚೋಳ ರಾಜನಾಗಿರಬಹುದೆಂದು ಹೇಳಬಹುದು. ಈ ಅಭಿಪ್ರಾಯ ಸರಿಯಾದರೆ ಈ ಶಾಸನದ ಕಾಲ ಕ್ರಿ.ಶ.985–1016 ಎಂದರೆ ರಾಜರಾಜನ ಆಡಳಿತ ಕಾಲ ಎಂದು ಹೇಳಬಹುದಾಗಿದೆ. ಅದು ಅಲ್ಲದೆ ಇದು ಚೋಳರ ಮತ್ತು ಚಾಲುಕ್ಯರ ಒಂದು ಯುದ್ಧವನ್ನು ತಿಳಿಸುವಂತಹದ್ದು, [36] ಅಲ್ಲದೆ ಕಲ್ಯಾಣದ ಚಾಲುಕ್ಯರ ವಿಚಾರವನ್ನು ತಿಳಿಸುವಂತಹ ಶಾಸನಗಳು ವಾಸ್ತವ ಅಂಶವನ್ನು ಎರೆಯಂಗ, ವಿಷ್ಣುವರ್ಧನ, ಒಂದನೆಯ ನರಸಿಂಹ ಮತ್ತು ಇಮ್ಮಡಿ ಬಲ್ಲಾಳರಂಥ ಹೊಯ್ಸಳ ರಾಜರುಗಳಿಗೆ ಸೇರಿಸಬಹುದಾದ ವಿಚಾರಗಳು ಕಂಡುಬರುತ್ತದೆ. ವಿಷ್ಣುವರ್ಧನನಿಂದ ಪ್ರಾರಂಭವಾಗಿ ಹೊಯ್ಸಳ ರಾಜರುಗಳು ಸ್ವತಂತ್ರರಾಗಿ ಆಡಳಿಅ ನಡೆಸಿದರು ಎಂಬ ವಿಚಾರ ತಿಳಿದುಬರುತ್ತದೆ. ಕ್ರಿ.ಶ.1099–1100 ರ ಕಾಲಮಾನದಲ್ಲಿ ಚಾಲುಕ್ಯರ ದೊರೆ ತ್ರಿಭುವನ ಮಲ್ಲನು ಪೃಥ್ವೀ ರಾಜ್ಯವನ್ನಾಳುತ್ತಿದ್ದನೆಂದು ತಿಳಿದು ಈತನ ಆಧಿರಾಜನಾದ ಸಮಧಿಗತ ಪಂಚಮಹಾಶಬ್ಧ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪೊಯ್ಸಳದೇವನು ಎರೆಯಂಗನೆಂದೂ ತಿಳಿದುಬರುತ್ತದೆ. ಚಾಲುಕ್ಯ ಕುಲಕ್ಕೆ ಸೇರಿದ ಮುದ್ದಮರಸನ ಪುತ್ರನಾದ ಬಾಚರಸನನ್ನು ಸಹ ತಿಳಿಸುವ ಶಾಸನವಾಗಿದೆ. ಈತನಿಗೆ ಮಹಾಮಂಡಲೇಶ್ವರ, ಚಾಲುಕ್ಯಭರಣ, ಚಾಲುಕ್ಯ ಕುಲತಿಲಕ ಮುಂತಾದ ಬಿರುದುಗಳಿದ್ದವು. ಆತನೊಬ್ಬ ಶಿವಭಕ್ತನಾಗಿದ್ದನೆಂದು ಪರಿಗಣಿಸಲಾಗಿದೆ. ಆತ ತಪೋಧನರಿಗೆ ಕೆರೆಯೊಂದನ್ನು ದಾನವಾಗಿ ನೀಡಿದನು. ಈ ವಿಚಾರ ಕಣಿಕಟ್ಟೆಯಲ್ಲಿರುವ ಶಾಸನದಿಂದ ತಿಳಿದುಬರುತ್ತದೆ. [37] ಆದರೆ ಕಲ್ಯಾಣ ಚಾಲುಕ್ಯರ ತ್ರಿಭುವನಮಲ್ಲನು ಕಲ್ಯಾಣದಲ್ಲಿ ಆಡಳಿತ ನಡೆಸುತ್ತಿದ್ದ ಎಂದು ತಿಳಿದುಬರುತ್ತದೆ. ಈ ಹಿನ್ನೆಲೆಯನ್ನು ಗಮನಿಸಿದರೆ, ತ್ರಿಭುವನಮಲ್ಲ ಕಲ್ಯಾಣದಲ್ಲೇ ಕುಳಿತು ಹಾಸನ ಜಿಲ್ಲೆಯ ಬಹುತೇಕ ಭಾಗದ ಮೇಲೆ ಆಡಳಿತವನ್ನು ನಡೆಸುತ್ತಿದ್ದನು ಎಂದು ಭಾವಿಸಬಹುದಾಗಿದೆ. ಇನ್ನೊಂದು ಶಾಸನವನ್ನು ಗಮನಿಸಿದರೆ, ಚಾಲುಕ್ಯ ಭೂಲೋಕಮಲ್ಲ ಸೋಮೇಶ್ವರನ ಆಳ್ವಿಕೆಯ ವಿಚಾರವೂ ಸಹ ಇದೆ. ನಂತರ ವಿಷ್ಣುವರ್ಧನನವರೆಗಿನ ಹೊಯ್ಸಳ ವಂಶಾವಳಿಯನ್ನು ಇದರಲ್ಲಿ ಕಾಣಲಾಗಿದೆ. ಚೋಳಯನೆಂಬಾತ ಶಿವದೇಗುಲವೊಂದನ್ನು ನಿರ್ಮಿಸಿ ಅದಕ್ಕೆ ಕೆಲವೊಂದು ದಾನದತ್ತಿಗಳನ್ನು ನೀಡಿರುವ ವಿಚಾರವು ಸಹ ತಿಳಿದುಬರುತ್ತದೆ. [38]

ಚೋಳಯ್ಯನು ಬಾಣಾಅರ ಸೂರಲ ಮಾವು ಹೆಣೆಯಗೆರೆ, ಹಂದರಹಾಳು ಅಲ್ಲದೆ ಕಿತ್ತನಕೆರೆಯನ್ನು ನೋಡಿಕೊಳ್ಳುತ್ತಿದ್ದನು. ತನ್ನ ಅಣ್ಣನು ಮರಣ ಹೊಂದಿದಾಗ ಆತನ ನೆನಪಿಗಾಗಿ ಒಂದು ಶಿವದೇವಾಲಯವನ್ನು ನಿರ್ಮಿಸಿದನು. ಚಾಲುಕ್ಯ ಅಹವಮಲ್ಲನು ಆಳುತ್ತಿದ್ದಾಗ ಮಂಡಲೇಶ್ವರ ವೀರಗಂಗ ಹೊಯ್ಸಳ ದೇವನು ಬೆಲುಹೂರಿನ ನೆಲೆವೀಡಿನಿಂದ ಗಂಗವಾಡಿ ರಾಜ್ಯವನ್ನಾಳುತ್ತಿದ್ದನೆಂದು ಕ್ರಿ.ಶ.1134ರ ವರ್ಷದ ಶಾಸನದಿಮ್ದ ತಿಳಿದುಬರುತ್ತದೆ. [39]

ಚನ್ನರಾಯಪಟ್ಟಣ ತಾಲ್ಲೂಕಿನ ಒಂದು ಶಾಸನದಲ್ಲಿ ಆರನೆಯ ವಿಕ್ರಮಾದಿತ್ಯನ ಆಡಳಿತದ ಕಾಲದಲ್ಲಿ ಆತನ ಅಧಿಕಾರವನ್ನು ತಿಳಿಸುವಂತಹ ಒಂದು ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನನ ವಿಚಾರ ಸಹ ತಿಳಿದುಬರುತ್ತದೆ. [40] ಮರಿಯಾನ ಮತ್ತು ಭರತ ಹಾಗೂ ಮರಿಯಾನೆ ಮತ್ತು ಚಿಕ್ಕಬ್ಬೆಯ ಮಕ್ಕಳಾದ ಭರತ ಮತ್ತು ಬಾಹುಬಲಿಯನ್ನು ತಿಳಿಸಲಾಗಿರುತ್ತದೆ. ಮಾಚಿರಾಜ ಮತ್ತು ಮರುದೇವಿಯ ಮಗಳಾದ ಚಾಮಲೆಯ ವಿಚಾರವು ಸಹ ತಿಳಿದು ಬರುತ್ತದೆ. [41]

ಚಾಲುಕ್ಯ ಜಗದೇಕಮಲ್ಲ ಮತ್ತು ಹೊಯ್ಸಳ ಒಂದನೆಯ್ ಅನರಸಿಂಹರ ವಿಚಾರವೂ ಸಹ ತಿಳಿದುಬರುತ್ತದೆ. [42] ಮಹಾಪ್ರಧಾನ ಬಲ್ಲಣ್ಣನ ವಿಚಾರವನ್ನು ತಿಳಿಸುವಂತಹ ಬಳ್ಳಿಗಾವೆಯ ದಾಸೋಜನ ವಿಚಾರವೂ ಸಹ ಇದೆ. [43] ಚಾಲುಕ್ಯ ಆರನೆಯ ವಿಕ್ರಮಾದಿತ್ಯ ಮತ್ತು ಹೊಯ್ಸಳ ರಾಜ ಒಂದನೆಯ ನರಸಿಂಹರ ವಿಚಾರವು ಕಂಡುಬರುತ್ತದೆ. ಇದರ ಕಾಲಮಾನ ಕ್ರಿ.ಶ.1159–1161[42] ಚಾಲುಕ್ಯ ತ್ರಿಭುವನಮಲ್ಲ ಮತ್ತು ಹೊಯ್ಸಳ ಇಮ್ಮಡಿ ಬಲ್ಲಾಳರನ್ನು ತಿಳಿಸುವಂತಹ ಶಾಸನವೂ ಸಹ ಇದೆ. ಈ ಶಾಸನದ ಕಾಲ ಕ್ರಿ.ಶ.1174 ಈ ಎಲ್ಲಾ ಆಧಾರಗಳಿಂದ ಸೂಕ್ಷ್ಮವಾಗಿ ಗಮನಿಸಿದರೆ ಕಲ್ಯಾಣ ಚಾಲುಕ್ಯರ ಕಾಲದ ರಾಜಕೀಯ ಒಂದು ಕ್ರಮಬದ್ಧವಾಗಿ ಹಾಸನ ಜಿಲ್ಲೆಯಲ್ಲಿ ಕಂಡುಬಂದಿದೆ. ಒಟ್ಟಾರೆ ಅಭಿಪ್ರಾಯವೇನೆಂದರೆ, ಕಲ್ಯಾಣಿ ಚಾಲುಕ್ಯರ ಈ ಭಾಗದಲ್ಲಿ ಹೊಯ್ಸಳರ ಮಾರ್ಗದರ್ಶನದಲ್ಲಿಯೇ ರಾಜಕೀಯವಾಗಿ ಅಧಿಕಾರವನ್ನು ನಡೆಸಿರಬೇಕೆಂದು ಈ ಸಂಶೋಧನೆ ಫಲವಾಗಿ ವ್ಯಕ್ತವಾಗುತ್ತದೆ.

## ಹೊಯ್ಸಳರು

ಹೊಯ್ಸಳರ ಆಡಳಿತ ಕನ್ನಡನಾಡಿನಲ್ಲಿ ಅತ್ಯಂತ ಸ್ಮರಣೀಯವಾಗಿದೆ. ಕ್ರಿ.ಶ.10ನೇ ಶತಮಾನದಲ್ಲಿ ಸಣ್ಣ ರಾಜ್ಯವನ್ನು ಸ್ಥಾಪಿಸಿ 14ನೇ ಶತಮಾನದವರೆಗೂ ಕನ್ನಡನಾಡನ್ನು ವೈಭವದಿಂದ ಆಳಿದರು. ಇವರು ಕರ್ನಾಟಕವಲ್ಲದೆ, ತಮಿಳುನಾಡಿನ ಕೆಲವು ಭಾಗಗಳನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದ್ದರು. ಈ ವಂಶದ ರಾಜರುಗಳಲ್ಲಿ ಗಮನಾರ್ಹ ಸಾಧನೆ ಮಾಡಿದವರು ವಿಷ್ಣುವರ್ಧನ, ಎರಡನೇ ವೀರಬಲ್ಲಾಳ, ಎರಡನೇ ನರಸಿಂಹ, ಸೋಮೇಶ್ವರ ಮತ್ತು ಮೂರನೇ ವೀರ ಬಲ್ಲಾಳ ಈ ಎಲ್ಲಾ ದೊರೆಗಳು ಸಾಹಿತ್ಯ ಕಲೆ ಮತ್ತು ಧರ್ಮಕ್ಕೆ ವಿಶೇಷ ಪ್ರೊತ್ಸಾಹ ನೀಡಿದ್ದಾರೆ. ದಕ್ಷಿಣ ಭಾರತದಲ್ಲಿ ಪರಮಾಧಿಕಾರ ಸ್ಥಾಪಿಸುವ ಸಲುವಾಗಿ ಕಲ್ಯಾಣಿ ಚಾಲುಕ್ಯರಿಗೂ ಮತ್ತು ಚೋಳರಿಗೂ ಕ್ರಿ.ಶ.10 ಹಾಗೂ ಕ್ರಿ.ಶ.11ನೇ ಶತಮಾನದಲ್ಲಿ ನಿರಂತರವಾಗಿ ಕದನಗಳು ನಡೆದವು. 11ನೇ ಶತಮಾನದ ಪ್ರಾರಂಭದಲ್ಲಿ ಚೋಳರ ದೊರೆ ರಾಜರಾಜನು ತಲಕಾಡಿನ ಗಂಗರನ್ನು ಸೋಲಿಸಿ ಗಂಗವಾಡಿಯ ಬಹುಭಾಗವನ್ನು ತಮಿಳು

ಸಾಮ್ರಾಜ್ಯದ ಭಾಗವನ್ನಾಗಿ ಮಾಡಿದನು. ಈ ಕಾಲಮಾನದಲ್ಲಿ ಹೊಯ್ಸಳ ವಂಶದ ಸ್ಥಾಪಕನೆಂದು ಭಾವಿಸಲಾಗಿರುವ ಹೊಯ್ಸಳ ಅಥವಾ ಸಳ ಮಲೆನಾಡಿನ ಸಣ್ಣ ಪಾಳೆಪಟ್ಟಿನ ನಾಯಕನಾಗಿದ್ದನೆಂದು ತಿಳಿದುಬರುತ್ತದೆ.

ಹೊಯ್ಸಳರು ಕಲಾಪ್ರೇಮಿಗಳಾಗಿದ್ದರು, ತಮ್ಮ ಸಾರ್ವಭೌಮರಾಗಿದ್ದ ಕಲ್ಯಾಣದ ಚಾಲುಕ್ಯರ ಶ್ರೇಷ್ಠ ಪರಂಪರೆಯನ್ನು ಮುಂದುವರೆಸಿದರು. ಅನೇಕ ಕಡೆ ಸುಂದರವಾದ ದೇವಾಲಯಗಳನ್ನು ನಿರ್ಮಿಸಿದರು. ಕ್ರಿ.ಶ.1000 ರಲ್ಲಿ ಪ್ರಾರಂಭವಾದ ಇವರ ರಾಜಕೀಯ ಆಡಳಿತ ಕ್ರಿ.ಶ.1336 ರ ತನಕ ಅಂದರೆ ಸುಮಾರು 300 ವರ್ಷಗಳಿಗೂ ಹೆಚ್ಚು ಕಾಲ ಸುಭದ್ರವಾಗಿ ಆಡಳಿತ ನಡೆಸಿದರು. ಆದರೆ ಇವರ ಆರಂಭ ಕಾಲದ ಇತಿಹಾಸದ ಕುರುಹುಗಳು ಸರಿಯಾದ ರೀತಿಯಲ್ಲಿ ಕಂಡುಬರುವುದಿಲ್ಲ. ಕೆಲವೊಂದು ಶಾಸನಗಳ ಪ್ರಕಾರ ಸಳನೇ ಹೊಯ್ಸಳರ ಕಾಲದ ಮೂಲಪುರುಷನೆಂಬುದಾಗಿ ತಿಳಿಸುತ್ತದೆ. ಹೊಯ್ಸಲರು ತಮ್ಮನ್ನು ಯಾದವ ಕುಲದವರೆಂದೂ ಹೇಳಿಕೊಂಡಿದ್ದಾರೆ. ಲೂಯಿ ರೈಸ್ ಹಾಗೂ ಇನ್ನಿತರ ವಿದ್ವಾಂಸರುಗಳ ಪ್ರಕಾರ ಇದೇ ವಿಚಾರವನ್ನು ತಿಳಿಸಿದ್ದಾನೆ. ಹೊಯ್ಸಳರ ಮೂಲ ನೆಲೆ ಶನಕಪುರ ಅಥವಾ ಸೊಸೆವೂರು ಇದು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಅಂಗಡಿ ಎಂಬ ನೆಲೆಯಲ್ಲಿದೆ. ಅಂದಿನ ಕಾಲದಲ್ಲಿ ಇದು ಪ್ರಮುಖ ವ್ಯಾಪಾರದ ಕೇಂದ್ರವಾಗಿತ್ತು. ಈ ಮಾತನ್ನು ಕುರಿತು ಹಲವಾರು ಶಾಸನಗಳು ತಿಳಿಸುತ್ತವೆ. [42] ಕ್ರಿ.ಶ.1060 ರ ಒಂದು ಶಿಲಾಶಾಸನದ ಪ್ರಕಾರವಾಗಿ ಈ ಗ್ರಾಮದ ವ್ಯಾಪಾರಿ ಒಬ್ಬನು ಸೇರಿ ಲೋಕಜಿತ್ ಎಂಬುವವನಿಗೆ ಸ್ಮಾರಕ ಒಂದನ್ನು ಕಟ್ಟಿಸಿದ್ದಾನೆಂದು ಉಲ್ಲೇಖವಿದೆ.[43] ಆದಕಾರಣ ಇದು ಜೈನರ ಕೇಂದ್ರವಾಗಿರಬೇಕೆಂದು ಹೇಳಲಾಗಿದೆ. ಕ್ರಿ.ಶ.1040ರ ಒಂದು ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರ ಎಂಬುವವನು ಇಲ್ಲಿಯೇ ಮರಣ ಹೊಂದಿದ್ದನೆಂದು ತಿಳಿದುಬರುತ್ತದೆ. [44]

ಕರ್ನಾಟಕದ ಆಗ್ನೇಯ ಭಾಗದಲ್ಲಿ ತಲಕಾಡಿನ ಗಂಗರು ಸ್ಥಾಪಿಸಿದ ಗಂಗವಾಡಿಯಲ್ಲಿ ತಲಕಾಡಿನಲ್ಲಿ ಗಂಗರು ಅಧಿಕಾರವನ್ನು ಕಳೆದುಕೊಂಡ ಮೇಲೆ ಹೊಯ್ಸಳರು ತಮ್ಮ ಸಾಮ್ರಾಜ್ಯದ ಬೆಳವಣಿಗೆಯನ್ನು ಹೆಚ್ಚಿಸಿಕೊಂಡು ಗಂಗವಾಡಿಯ ಕೆಲವು ಭಾಗಗಳನ್ನು ಪಡೆದುಕೊಂಡರು. ಮೊದಲಿಗೆ ಹೊಯ್ಸಳರು, ಚಂಗಾಳ್ವರು, ಕೊಂಗಾಳ್ವರು, ಚೋಳರ ಅಧಿಕಾರವನ್ನು ಒಪ್ಪಿಕೊಂಡಿದ್ದರು. ಹೊಯ್ಸಳರ ಆಳ್ವಿಕೆಯ ಕೊನೆಯ ಕಾಲದಲ್ಲಿ ಹಾಸನ ಜಿಲ್ಲೆ ಈ ರಾಜ್ಯದ ಅವಿಭಾಜ್ಯ ಅಂಗವಾಗಿತ್ತು. ಹೊಯ್ಸಳ ಅರಸರು ಹಾಸನ ಜಿಲ್ಲೆಗೆ ಸೇರಿದಂತೆ ವಿಶ್ವವಿಖ್ಯಾತ ದೇವಾಲಯಗಳನ್ನು ಬಸದಿಗಳನ್ನು ಕೆರೆ ಕುಂಟೆಗಳನ್ನು ನಿರ್ಮಿಸಿರುವುದು, ನೃಪಕಾಮನ ಅಧಿಕಾರ ನಡೆಸಿರುವುದರ ಬಗ್ಗೆ ಶಿಲಾಶಾಸನ ಕಂಡುಬರುತ್ತದೆ. [45] ಕ್ರಿ.ಶ.978 ರಲ್ಲಿ

ಕಂಡುಬರುವ ಚಾವುಂಡರಾಯಪುರಾಣ ಪುಸ್ತಕದಲ್ಲಿ ಸ್ವತಃ ಚಾವುಂಡರಾಯನು ಸೋಲಿಸಿದ ವ್ಯಕ್ತಿಗಳಲ್ಲಿಯೂ ಒಬ್ಬ ಹೊಯ್ಸಳ ರಜಾನೂ ಸಹ ಇದ್ದಾನೆ ಎಂದು ತಿಳಿಸಿದ್ದಾನೆ. ಕ್ರಿ.ಶ.1207 ರ ಒಂದು ಶಾಸನದಲ್ಲಿ ಬಲ್ಲಾಳನ ವಂಶಾವಳಿಯನ್ನು ತಿಳಿಸುತ್ತಾ, ಹೊಯ್ಸಳರ ಪ್ರಥಮ ರಾಜಧಾನಿ ಶಸಕಪುರ ಎಂಬುದು ಹೇಗೆ ಸ್ಥಾಪನೆಯಾಗಿತ್ತೆಂಬುದನ್ನು ತಿಳಿಸಲಾಗಿರುತ್ತದೆ. [46] ಕ್ರಿ.ಶ.10ನೇ ಶತಮಾನದ ಉತ್ತರಾರ್ಧದ ವೇಳೆಗೆ ಹೊಯ್ಸಳರು ತಲೆ ಎತ್ತಿದರು. ಈ ವಿಚಾರಕ್ಕೆ ಪೂರಕವಾಗಿ ಹಲವಾರು ರೀತಿಯ ಕುರುಗಳಿವೆ. 11ನೇ ಶತಮಾನದಲ್ಲಿ ಚೋಲರ ವಿರುದ್ಧ ಹೋರಾಡಿದರು. ವಿಷ್ಣುವರ್ಧನನು ರಾಮಾನುಜಾಚಾರ್ಯರಿಗೆ ಆಶ್ರಯ ನೀಡಿದನು. ಗಂಗವಾಡಿ ಪ್ರಾಂತ್ಯಗಳಲ್ಲಿ ಶ್ರೀ ವೈಷ್ಣವ ಅನುಯಾಯಿಗಳಾಗಿದ್ದ ಚೋಳ ಅಧಿಕಾರಿಗಳ ಪ್ರಭಾವಕ್ಕೆ ಮೊದಲೇ ಒಳಗಾಗಿದ್ದನೆಂಬ ಅಭಿಪ್ರಾಯವೂ ಸಹ ಇದೆ. ಕಲ್ಯಾಣದ ಚಾಲುಕ್ಯ ಚಕ್ರವರ್ತಿಗಳ ಸಾರ್ವಭೌಮತ್ವವನ್ನು ಪ್ರಶ್ನಿಸಿ ತಾನು ಚಕ್ರವರ್ತಿಯಾಗಬೇಕೆಂಬ ಪ್ರೀತಿಯಿಂದ ಆತನು ಅಗ್ನಿಷ್ಟೋಮ, ಹಿರಣ್ಯಗರ್ಭ ಮೊದಲಾದ ವೈದಿಕ ಯಜ್ಞಗಳನ್ನು ನಡೆಸಿದನು. ಅಂದಿನ ಕಾಲಕ್ಕೆ ಜೈನಧರ್ಮವು ಇಂತಹ ರೀತಿಯ ಆಚರಣೆಗಳನ್ನು ಒಪ್ಪುತ್ತಿರಲಿಲ್ಲ. ಆದರೂ ಅವನು ಜೈನ ಧರ್ಮವನ್ನು ಪೋಷಿಸಿದ ಅಷ್ಟೇ ಅಲ್ಲ ಅವನ ಅನೇಕ ಮಂದಿ ಸೇನಾದಿಪತಿಗಳು ಮತ್ತು ಪ್ರಸಿದ್ಧಳಾದ ರಾಣಿ ಶಾಂತಲಾ ಸಹ ಜೈನಧರ್ಮವನ್ನು ಅವಲಂಬಿಸಿದವರಾಗಿದ್ದರು. ಆದರೂ ಅವನ ದಂಡನಾಯಕರ ಲ್ಲೊಬ್ಬರಾಗಿದ್ದ ಕೇಶಮಲ್ಲನು ಹಳೇಬೀಡಿನಲ್ಲಿ ಪ್ರಸಿದ್ಧವಾದ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ.

ಕರ್ನಾಟಕದ ಅಗ್ರಹಾರಗಳನ್ನು ಒಳ್ಳೆಯ ರೀತಿಯಲ್ಲಿ, ಒಳ್ಳೆಯ ವಾತಾವರಣದಲ್ಲಿ ಬೆಳೆಸಿದರು. ತಮಿಳುನಾಡಿನ ಶ್ರೀವೈಷ್ಣವ ತತ್ವದ ಪ್ರತಿಪಾದಕರಾದ ರಾಮಾನುಜಾಚಾರ್ಯರಿಗೆ ತಮ್ಮ ಬೋಧನೆಗಳಿಗೆ ಸ್ವಂತ ನೆಲದಲ್ಲಿ ಅವಕಾಶವಿಲ್ಲವಾಯಿತೋ, ಆಗ ಕರ್ನಾಟಕಕ್ಕೆ ಬಂದರು. ಕರ್ನಾಟಕದ ಬೌದ್ಧಿಕ ವರ್ಗವು ಸೇರಿದಂತೆ ಸಾಮಾನ್ಯ ಜನವರ್ಗವು ರಾಮಾನುಜಾಚಾರ್ಯರ ಅನುಯಾಯಿಗಳಾದರು. ಅವರ ಸ್ವಂತ ನೆಲದಲ್ಲೇ ಅವರ ಜೀವನಕ್ಕೆ ಅಪಾಯ ಒದಗಿತ್ತೆಂಬ ಅಭಿಪ್ರಾಯವೂ ಇದೆ. ದಕ್ಷಿಣ ಭಾರತದ ಚಾರಿತ್ರಿಕ ಇತಿಹಾಸದಲ್ಲಿ ಹೊಯ್ಸಳ ಮನೆತನ ಮಹತ್ವದ ಸ್ಥಾನವನ್ನು ಹೊಂದಿದೆ. 11 ರಿಂದ 14ನೇ ಶತಮಾನದ ಮೂರನೇ ದಶಕದವರೆಗೂ ಆಳಿದ ಈ ಮನೆತನದ ವಿಷ್ಣುವರ್ಧನ, ಬಲ್ಲಾಳ, ನರಸಿಂಹ, ಸೋಮೇಶ್ವರ ಇವರೇ ಮೊದಲಾದ ರಾಜರುಗಳು ಹೊಯ್ಸಳ ಮನೆತನದ ಕೀರ್ತಿ ಪತಾಕೆಯನ್ನು ಉತ್ತುಂಗ ಶಿಖರಕ್ಕೆ ಏರಿಸಿದರು. ಹೊಯ್ಸಳರ ಕಾಲದ ರಾಜಕೀಯ ಸ್ಥಿತಿಗತಿಗಳನ್ನು ನಾವು ಗಮನಿಸಿದಾಗ ಅವರು ಆಳ್ವಿಕೆ ಪ್ರಾರಂಭಿಸಿದ ಹೊಸದರಲ್ಲಿ ಅಷ್ಟಾಗಿ ಸರಳವಾಗಿರಲಿಲ್ಲ. ದಕ್ಷಿಣ ಭಾರತದ ಎಲ್ಲೆಡೆ ಹಲವಾರು ರಾಜಮನೆತನಗಳು ಅಧಿಕಾರಕ್ಕೆ ಕಾದಾಟ ನಡೆಸಿದ್ದವು. ರಾಷ್ಟ್ರಕೂಟರು ಮತ್ತು ಚೋಳರು ತಮ್ಮ

ಅಧಿಕಾರದ ವ್ಯಾಪ್ತಿಯನ್ನು ವರ್ಧಿಸಿಕೊಳ್ಳಲು ಅನೇಕ ಯುದ್ಧಗಳು ಆಗಾಗ್ಗೆ ನಡೆದವು. ಅಂದಿನ ದಕ್ಷಿನ ಕರ್ನಾಟಕದ ಪ್ರ್ರೌಮುಖ ರಾಜಮನೆತನಗಳಾದ ತಲಕಾಡಿನ ಗಂಗರು, [47] ಆದಾಗ್ಯೂ ಅವರುಗಳು ಹೆಚ್ಚು ಕಾಲ ರಾಷ್ಟ್ರಕೂಟರ ಮಾಂಡಲಿಕ ಅರಸರಾಗಿಯೇ ಇದ್ದರು ಎಂದು ತಿಳಿದುಬರುತ್ತದೆ. ಈ ರಾಜಕೀಯ ಅಸ್ಥಿರತೆಯ ಸ್ಥಿತಿಯಲ್ಲಿ ಹೊಯ್ಸಳರು ಪ್ರಾರಂಭದಲ್ಲಿ ಒಂದು ಪುಟ್ಟದಾದ ವ್ಯಾಪ್ತಿಯಲ್ಲಿ ರಾಜ್ಯಾಡಳಿತ ಪ್ರಾರಂಭಿಸಿದರು. ಆದರೂ ಕೂಡ ಪ್ರಾರಂಭದಿಂದ ಹಿಡಿದು ವಿಷ್ಣುವರ್ಧನನ ತಂದೆ ಎರೆಯಂಗನ ಕಾಲದವರೆಗೂ ರಾಷ್ಟ್ರಕೂಟರ ಮತ್ತು ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿಯೇ ಮುಂದುವರೆದರು. ಅಂದಿನ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದ ಕಲ್ಯಾಣದ ಚಾಲುಕ್ಯರ ರಾಜಕೀಯ ಚರಿತ್ರೆಯಲ್ಲಿ ಹೊಯ್ಸಳರ ಪ್ರಾರಂಭಿಕ ರಾಜರು ಅವರ ಹಲವಾರು ಯುದ್ಧಗಳಲ್ಲಿ ಭಗವಹಿಸಿ ನಿರ್ಣಾಯಕ ಪಾತ್ರ ವಹಿಸಿದರೆಂದೂ ಅವರ ಹಲವಾರು ಶಿಲಾಶಾಸನಗಳಿಂದ ತಿಳಿದುಬರುತ್ತದೆ. [48] ರಾಜ ಕುಟುಂಬದ ಮೇಲೆ ಇಲ್ಲಸಲ್ಲದ ಅಪವಾದಗಳನ್ನು ಹೊರಿಸಿದವರಿಗೆ ಉಗ್ರವಾದ ಶಿಕ್ಷೆಗೆ ಒಳಪಡಿಸುತ್ತಿದ್ದರು. ಅಲ್ಲದೆ ರಾಜನ ಆಜ್ಞೆಯನ್ನು ಉಲ್ಲಂಘಿಸಿದವರೂ ಶಿಕ್ಷಾರ್ಹರಾಗುತ್ತಿದ್ದರು. ದೇವಸ್ಥಾನಗಳ ಅರ್ಚನಾ ಕೆಲಸಕ್ಕೆ ಉಮೇದುವಾರರನ್ನು ಆಯ್ಕೆ ಮಾಡುವುದು. ದೇವಾಲಯದ ಆಡಳಿತದ ಮೇಲೆ ನಿಯಂತ್ರಣ ವಿಧಿಸಿರುವುದು ಕಂಡುಬರುತ್ತದೆ.

ಅರಮನೆಯ ಕೆಲಸ, ರಾಣಿಯರ ನಿವಾಸ, ಸೈನ್ಯಗಳಿಗೆ ಬೇಕಾಗುವ ಕುದುರೆ, ಆನೆಗಳನ್ನು ಪೋಷಣೆ ಮಾಡುವುದು ರಾಜ್ಯವನ್ನು ನೋಡಿಕೊಳ್ಳಲು ರಾಯಭಾರಿಗಳನ್ನು, ವ್ಯಕ್ತಿಗಳಿಗೆ ನೀಡುವ ಇನಾಮುಗಳು ಅಥವಾ ಉಡುಗೊರೆ ಸಿಪಾಯಿಗಳ ಸಂಭಾವನೆ ಮುಂತಾದವುಗಳಿಗೆ ವಿಶೇಷವಾಗಿ ಹಣವನ್ನು ಸಹಾಯ ಮಾಡಲಾಗುತ್ತಿತ್ತು.

ಹೊಯ್ಸಳರ ಕಾಲದಲ್ಲಿ ಪಂಚ ಪ್ರಧಾನವಾದ ಮಂತ್ರಿಮಂಡಲವಿತ್ತು. ಅಂದಿನ ಕಾಲದ ಸರ್ವಾಧಿಕಾರಿಯೂ ಮುಖ್ಯಮಂತ್ರಿ ಅಥವಾ ಮಹಾಪ್ರಧಾನನಾಗಿದ್ದನೆಂದು ವಿಲಿಯಂ ಕೋಯೆಲ್‌ರವರು ತಮ್ಮ ಗ್ರಂಥ ರಚಿಸಿದ್ದಾರೆ. ಅಂದಿನ ಕಾಲದಲ್ಲಿ ಆಡಳಿತದಲ್ಲಿ ದಳಪತಿಗಳನ್ನಾಗಿ ನೇಮಿಸುವುದು ವಾಡಿಕೆಯಲ್ಲಿದ್ದಿತು. ಅಕ್ಕಸಾಲಿಗರು, ಹಜಾಮರು ಇನ್ನೂ ಮೊದಲಾದವರಿಗೆ ಸೈನ್ಯದಲ್ಲಿ ಇರಲು ಅವಕಾಶವನ್ನು ಕಲ್ಪಿಸಲಾಗಿತ್ತು. ಹೊಯ್ಸಳರ ತಮ್ಮ ಪ್ರಾಂತ್ಯಗಳನ್ನು ಹಲವಾರು ಹೆಸರುಗಳಿಂದ ಕರೆದುಕೊಂಡಿದ್ದಾರೆ. ಉದಾಹರಣೆಗೆ ತಲಕಾಡು, ಕೊಂಗುನಾಡು, ನಂಗಲಿ, ಗಂಗವಾಡಿ, ನೊಳಂಬವಾಡಿ, ಹಲಗೇರೆ, ಹಳಸಿಗೆ, ಕುಂತಳ, ಕೊಂಡೆನಾಡು, ಪುನ್ನಾಡು, ಏಳು ಸಾವಿರ ಬನವಾಸಿ ಇನ್ನೂ ಮೊದಲಾದ ಹೆಸರುಗಳಿಂದ ಕರೆದುಕೊಂಡಿದ್ದಾರೆ. ಕೆಲವು ಸಂದರ್ಭದಲ್ಲಿ ಅದರ ಸೇವೆಗಳ ಆಧಾರದ ಹಾಗೂ ಯೋಗ್ಯತೆಗಳ

ಆಧಾರದ ಮೇಲೆ ಬೇರೆಯವರು ಆಯಾ ಪ್ರಾಂತ್ಯಗಳ ರಾಜ್ಯಪಾಲರಾಗಿ ಕೆಲಸಕ್ಕೆ ಸೇವೆ ಸಲ್ಲಿಸಿರುವುದು ಕಾಣಬರುತ್ತದೆ. ಹೊಯ್ಸಳರ ಕಾಲದಲ್ಲಿ ಕಂಡುಬರುವ ಹಲವಾರು ನಗರಪಟ್ಟಣಗಳು ಮಾರುಕಟ್ಟೆಯ ಕೇಂದ್ರಗಳಾಗಿರುವುದು ತಿಳಿದುಬರುತ್ತದೆ. ಆ ಕೇಂದ್ರದಿಂದ ವಿವಿಧ ಶೇಖರಣೆಯ ಉತ್ಪನ್ನ ವಸ್ತುವನ್ನು ಬೇರೆ ಬೇರೆ ದೇಶಗಳಿಗೆ ಕಳುಹಿಸುತ್ತಿದ್ದರು. ಇವುಗಳನ್ನು ನೋಡಿಕೊಳ್ಳಲು ವರ್ತಕ ಸಂಘಗಳಿದ್ದವು. ಈ ಮಾದರಿಯಲ್ಲಿ ಹೊಯ್ಸಳ ಅರಸರು ರಾಜಕೀಯವನ್ನು ನಡೆಸಿರುತ್ತಾರೆ. ರಾಜಕೀಯದ ಜೊತೆ-ಜೊತೆಯಲ್ಲಿ ಶಿಲ್ಪಕಲಾ ಶೈಲಿಯ ಬೆಳವಣಿಗೆಯನ್ನು ಬೆಳೆಸಿದ್ದಾರೆ. ಹೊಯ್ಸಳರ ಇತಿಹಾಸ ಪರಂಪರೆಯ ಒಂದು ಪಕ್ಷಿನೋಟವನ್ನು ನೋಡಿದರೆ, ಸಳ್, ವಿನಿಯಾದಿತ್ಯ, ನೃಪಕಾಮ, ಎರಡನೆಯ ವಿನಿಯಾದಿತ್ಯ, ಎರೆಯಂಗ, ದೇಪ್ಪವೆ (ಮರಿಯಾನೆ ದಂಡನಾಯಕನನ್ನು ಮದುವೆಯಾದಳು) ಮೊದಲನೆಯ ಬಲ್ಲಾಳ, ಬಿಟ್ಟಿದೇವ (ವಿಷ್ಣುವರ್ಧನ) ಉದಯಾದಿತ್ಯ, ಮೊದಲನೆಯ ನರಸಿಂಹ, ಎರಡನೆಯ ಬಲ್ಲಾಳ ಎರಡನೆಯ ನರಸಿಂಹ, ಸೋವಳ್‌ದೇವಿ, ಸೋಮೇಶ್ವರ, ಮೂರನೆಯ ನರಸಿಂಹ, ರಾಮನಾಥ, ಮೂರನೆಯ ಬಲ್ಲಾಳ ವಿಶ್ವನಾಥ ಇವರುಗಳು ಆಡಳಿತ ನಡೆಸಿ ಅನೇಕ ಸುಧಾರಣೆಗಳನ್ನು ತಂದಿರುವುದು ತಿಳಿದುಬರುತ್ತದೆ. ನರಸಿಂಹನ ಮಗ ಬಲ್ಲಾಳನು ಹೊಯ್ಸಳ ಸಾಮ್ರಾಜ್ಯದ ಅಧಿಕಾರದ ಚುಕ್ಕಾಣಿ ಹಿಡಿದಾಗ ಹೊಯ್ಸಳ ಸಾಮ್ರಾಜ್ಯದ ಸೂರ್ಯ ಪಶ್ಚಿಮದತ್ತ ಮುಖ ಮಾಡಿದ್ದ, ರಾಜಕೀಯವಾಗಿ ಅದರ ಸುತ್ತಲಿನ ಬಲಿಷ್ಠರಾಗಿ ಬೆಳೆಯತೊಡಗಿದ್ದರು. ದೇವಗಿರಿಯ ಸೇವುಣ ದೊರೆ ರಾಮಚಂದ್ರನು ಹೊಯ್ಸಳ ಬಲ್ಲಾಳನ ಮೇಲೆ ಕದನಕ್ಕಿಳಿದನು. ಇಬ್ಬರಿಗೂ ನಡೆದ ಯುದ್ಧದಲ್ಲಿ ಅಪಾರ ಹಾನಿಗಳಾದವು. ಕೊನೆಗೂ ರಾಮಚಂದ್ರನು ಸೋತು ಹೋದ. ಇದಕ್ಕಿಂತ ಮುಖ್ಯವಾಗಿ ಅಕಾಲಿಕ ರಾಜಕೀಯವಾಗಿ ಹಲವಾರು ವಿದೇಶಿ ರಾಜರು ಭಾರತದಲ್ಲಿ ಬುನಾದಿ ಹಾಕಲು ಪ್ರಾರಂಭಿಸಿದ ಕಾಲವೂ ಸಹ ಆಗಿದೆ. ಮೂರನೆಯ ಬಲ್ಲಾಳನು ಅಧಿಕಾರಕ್ಕೆ ಬಂದಾಗ ಉತ್ತರ ಭಾರತದಲ್ಲಿ ಮುಸ್ಲಿಂ ದೊರೆಗಳು ಪ್ರಬಲರಾಗುತ್ತಿದ್ದರು. ದಕ್ಷಿಣದಲ್ಲಿ ಎಲ್ಲ ಹಿಂದೂ ರಾಜಮನೆತನಗಳು ಆಂತರಿಕ ಕಲಹಗಳಲ್ಲಿ ತೊಡಗಿದ್ದರು. ಇದರಿಂದ ಪ್ರಭಾವಿತರಾದ ದಿಲ್ಲಿಯ (ದೆಹಲಿಯ) ಖಿಲ್ಜಿ ಮನೆತನದ ಅರಸು ಅಲ್ಲಾವುದ್ದೀನ್ ಖಿಲ್ಜಿಯು ಅಧಿಕವಾದ ನಿಧಿ ಗಳಿಸುವ ಉದ್ದೇಶದಿಂದ ದಕ್ಷಿಣ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸಿದೆ. ದೇವಗಿರಿಯ ಸೇವುಣರು ಅವನ ದಾಳಿಗೆ ತುತ್ತಾದವರಲ್ಲಿ ಮೊದಲಿಗರು ಹೊಯ್ಸಳರ ಸಂಪದ್ಭರಿತ ರಾಜ್ಯ ಅವನ ಗಮನ ಸೆಳೆಯಿತು. ಬಲ್ಲಾಳನು ಮೊದಲು ಖಿಲ್ಜಿಗಳೊಂದಿಗೆ ರಾಜಿ ಮಾಡಿಕೊಂಡು ಅಪಾರ ಧನಕನಕಗಳನ್ನು ನೀಡಿ ಯುದ್ಧದಿಂದ ಆಗುವ ಅನಾಹುತ ಸಾವು-ನೋವುಗಳನ್ನು ತಪ್ಪಿಸಿದ. ಅಂದು ದಾಳಿಯಲ್ಲಿ ಮುಖ್ಯಪಾತ್ರವಹಿಸಿದ್ದ ಮಲ್ಲಿಕಾಫರ್ [49] ಹೊಯ್ಸಳ ಇತಿಹಾಸದಲ್ಲಿ ಎಂದೂ ಮರೆಯದಂತಹ ಕರಾಳ ವ್ಯಕ್ತಿಯಾಗಿದ್ದಾನೆ. ಬಲ್ಲಾಳನು ಈ ದಾಳಿಯ ನಂತರವೂ

ರಾಜ್ಯವನ್ನು ಒಂದುಗೂಡಿಸಲು ಪ್ರಯತ್ನಿಸಿದ, ಆದರೆ ಕ್ರಮೇಣ ಇದು ಸಾಧ್ಯವಾಗಲಿಲ್ಲ. ಆಗ ಪ್ರವರ್ಧಮಾನಕ್ಕೆ ಬರುತ್ತಿದ್ದ ವಿಜಯನಗರದ ಅರಸರು ಕ್ರಮೇಣ ಹೊಯ್ಸಳರ ಕೇಂದ್ರ ಸ್ಥಾನಗಳ ಮೇಲೆ ತಮ್ಮ ಹತೋಟಿಯನ್ನು ಸ್ಥಾಪಿಸುವುದರೊಂದಿಗೆ ಹೊಯ್ಸಳ ರಾಜಮನೆತನ ಇತಿಹಾಸದಲ್ಲಿ ಮರೆಯಾಗಿ ಹೋಯಿತು. ಅವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು, ಬಸದಿಗಳು, ಚಿರಂತನವಾಗಿ ಐತಿಹಾಸಿಕ ದಾಖಲೆಗಳಾಗಿ ಅಂದಿನ ಕಾಲದ ಕಲಾ ಪ್ರೌಢಿಮೆಗೆ ಕೈಗನ್ನಡಿಯಾಗಿ ಇಂದಿಗೂ ನಿಂತಿದೆ. ವಿಭಿನ್ನ ವಿನ್ಯಾಸದ ದೇವಾಲಯಗಳು, ಶಿಲ್ಪಗಳು ಆ ಕಾಲದ ಕಲೋನ್ನತಿಯ ಕುರುಹುಗಳಾಗಿದೆ. ಕನ್ನಡ ಸಾಹಿತ್ಯದ್ಲಲಿ ದಿಗ್ಗಜರಾದ ಜನ್ನ, ರಾಘವಾಂಕ, ಹರಿಹರ, ನೇಮಿಚಂದ್ರ, ಪದ್ಮರಸ, ಮಲ್ಲಿಕಾರ್ಜುನ, ಕೇಶಿರಾಜ ಇನ್ನೂ ಮೊದಲಾದವರು ಈ ನಾಡಿನಲ್ಲಿ ಬಾಳಿ ಬದುಕಿದ ಕಾಲವದು. ಆಗ ಜೈನ ಸಾಹಿತ್ಯ ಕಲೆಗೆ ಹೊಸ ಆಯಾಮವನ್ನು ದೊರಕಿಸಿದರು. ಹೊಯ್ಸಳ ದೊರೆಗಳ್ ಅಹಿಂದು ದೇವಾಲಯಗಳಿಗೆ ಸಮಾನವಾಗಿ ಬಸದಿಗಳನ್ನು ನಿರ್ಮಿಸಿ ಧರ್ಮ  ಸಹಿಷ್ಣುಗಳೆಂಬುದನ್ನು ತೋರಿಸಿದರು. ಮೇಲೆ ತಿಳಿಸಿರುವಂತೆ ಶ್ರೀರಾಮಾನುಜರು ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದಾಗ ಅವರಿಗೆ ರಾಜಾಶ್ರಯ ನೀಡಿ ಅವರು ಸ್ಥಾಪಿಸಿದ ಶ್ರೀ ವೈಷ್ಣವ ಧರ್ಮವನ್ನು ಬೆಳೆಸಿ ಪೋಷಿಸಿ ಅದಕ್ಕೊಂದು ಉನ್ನತವಾದ ಸ್ಥಾನ ಕಲ್ಪಿಸಿದ ಬಿಟ್ಟಿದೇವ ಇದರ ಪ್ರಭಾವದಿಂದಲೇ ವಿಷ್ಣುವರ್ಧನನಾದ ಹೀಗೆ ಹೊಯ್ಸಳರು ಕರ್ನಾಟಕದ ಇತಿಹಾಸದ ಚಿರಸ್ಮರಣೀಯವಾಗಿದೆ. ಉತ್ತರ ಕರ್ನಾಟಕದಲ್ಲಿ ಕಲ್ಯಾಣದ ಚಾಲುಕ್ಯರು ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಹೊಸ ಹೊಸ ಆಯಾಮಗಳನ್ನು ನೀಡಿದರೆ ಇತ್ತ ದಕ್ಷಿಣ ಭಾರತದಲ್ಲಿದ್ದ ಹೊಯ್ಸಳರು ಎಲ್ಲಾ ರಂಗದಲ್ಲಿ ತಮ್ಮದೇ ಆದ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ.

**ವಿಜಯನಗರದ ಅರಸರು**

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿರುವುದು ಕ್ರಿ.ಶ.13–14ನೇ ಶತಮಾನದಲ್ಲಿ ವಿಶೇಷವಾಗಿ ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದ ಘಟನೆ. ಈ ಸಾಮ್ರಾಜ್ಯ ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಪ್ರಾರಂಭದ ನಾಂದಿಯನ್ನು ಹಾಡಿತು. ಈ ಸಾಮ್ರಾಜ್ಯದ ಅರಸರು ಮೂರು ಶತಮಾನಗಳ ಕಾಲ ದಕ್ಷಿಣ ಭಾರತ ಹಾಗೂ ಕರ್ನಾಟಕದ ಸಂಸ್ಕೃತಿ ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಧರ್ಮ, ಆರ್ಥಿಕತೆಗೆ ಪ್ರಾಮುಖ್ಯತೆಯನ್ನು ನೀಡಿದೆ. ದೆಹಲಿಯ ಸುಲ್ತಾನರ ಸೈನ್ಯಗಳು, ದಕ್ಷಿಣದ ನಾಲ್ಕು ಬೃಹತ್ ಸಾಮ್ರಾಜ್ಯಗಳಾದ ದೇವಗಿರಿಯ ಸೇವುಣರು, ವಾರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು ಮತ್ತು ಮಧುರೆಯ ಪಾಂಡ್ಯರನ್ನು ನಿರ್ನಾಮ ಮಾಡಿದಾಗ ಈ ಪರ್ಯಾಯ ದ್ವೀಪಕ್ಕೆ ಧಾರ್ಮಿಕ ನಂಬಿಕೆಯ

ರಾಜಕೀಯ ಶಕ್ತಿಯೊಂದು ದಕ್ಷಿಣದಲ್ಲಿ ಪ್ರಭಾವಶಲಿಯಾಗುತ್ತದೆಂದು ತೋರಿತು. ಸೇವುಣರ ಸಾಮಂತರಾದ ಬಳ್ಳಾರಿ ಜಿಲ್ಲೆಯ ಕಂಪ್ಲಿಯ ಕಂಪಿಲರಾಯನ ಧೀರ ಹಾಗೂ ಸಾಹಸಿ ಪುತ್ರ ಕುಮಾರ ರಾಮನು ಸೇರಿದಂತೆ ಅನೇಕ ರಾಜಕುಮಾರರು ಮುಸ್ಲಿಮರ ಆಕ್ರಮಣಗಳನ್ನು ಪ್ರತಿಭಟನೆ ನಾಮಾವಶೇಷವಾದನು. ಉತ್ತರ ಕಡೆಯಿಂದ ಬಂದ ಈ ಆಕ್ರಮಣಕಾರರು ಅನುಸರಿಸಿದ ಅಮಾನವೀಯ ಧೋರಣೆಯಿಂದ ಜನರು ದಿಗ್ಭ್ರಾಂತರಾದರು. ಕುಮಾರ ರಾಮನ ಮೇಲೆ ಕಟ್ಟಿರುವ ಹಾಡು ಮತ್ತು ಲಾವಣಿಗಳು ಜನರ ಆತಂಕವನ್ನು ವ್ಯಕ್ತಪಡಿಸುತ್ತದೆ. ಸಂಗಮ ವಂಶದ ಪಂಚ ಸೋದರರಾದ ಹರಿಹರ, ಬುಕ್ಕ, ಕಂಪಣ್ಣ, ಮುದ್ದಪ್ಪ ಮತ್ತು ಮಾರಪ್ಪರುಗಳು ಜನಬಲದೊಂದಿಗೆ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಜನಸಾಮಾನ್ಯರು ಅದನ್ನು ಅತ್ಯಂತ ಪ್ರೀತಿಯಿಂದ ಸ್ವಾಗತಿಸಿದರು. ಸಂಗಮ ವಂಶದ ಸಹೋದರರಿಗೆ ಧನಸಹಾಯ ಮಾಡಲು ವಿದ್ಯಾರಣ್ಯಯತಿಗಳು ಸುವರ್ಣ ಮಳೆಗರೆದರೆಂದು ಐತಿಹ್ಯ ಕಥೆಗಳು ತಿಳಿಸುತ್ತದೆ. ವಿಜಯನಗರದ ಸ್ಥಾಪಕರಿಎ ಬೇರೆ ಬೇರೆ ಮೂಲಗಳಿಂದ ಧನಸಹಾಯವನ್ನು ನೀಡುವಲ್ಲಿ ಅಂದಿನ ಋಷಿ ಮುನಿಗಳು ಸಹಾಯಕರಾಗಿದ್ದರೆಂದು ತಿಳಿದುಬರುತ್ತದೆ. ವಿದ್ಯಾರಣ್ಯರ ಗುರುಗಳಾದ ಭಾರತಿ ತೀರ್ಥರಿಗೆ ಹರಿಹರ ಮತ್ತು ಅವನ ಸಹೋದರರು ಕ್ರಿ.ಶ.1346 ರಲ್ಲಿ ಕೆಲವು ದಾನ ಧರ್ಮಗಳನ್ನು ಕೊಟ್ಟಿದ್ದಾರೆ.[50] ಶೃಂಗೇರಿ ಶಾಸನದಲ್ಲಿ ಆಸಂದರ್ಭದಲ್ಲಿ ಅಲ್ಲೇ ಹಾಜರಿದ್ದ ಆಳುಪ ಮೂಲದ ಹೊಯ್ಸಳ ರಾಣಿ ಚಿಕ್ಕಾಯಿ ತಾಯಿ ಅದೆ ದಿನದಂದು ಇದಕ್ಕೆ ಪೂರಕವಾಗಿ ದಾನ ನೀಡಿದ ಉಲ್ಲೇಖವೂ ಸಹಕಂಡುಬರುತ್ತದೆ. [51]

ಸಂಗಮ ವಂಶ (ಕ್ರಿ.ಶ.1336–1485) ಹರಿಹರ (ಕ್ರಿ.ಶ.1336–1356) ಈ ಸಂದರ್ಭದಲ್ಲಿ ಸಾಮ್ರಾಜ್ಯವನ್ನು ಕ್ರಿ.ಶ.1336 ರ ಸಮಯದಲ್ಲಿ ಸ್ಥಾಪಿಸಲಾಗಿದೆ. ಈತನು ಕರ್ನಾಟಕ ಮತ್ತು ಆಂಧ್ರಪ್ರದೇಶದ ಭಾಗಗಳ ಸಮುದ್ರ ಮೇರೆಗಳ ನಡುವಣ ಉತ್ತರ ಕರ್ನಾಟಕದ ಭಾಗಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿದ್ದನು. ಮೂರನೆಯ ಬಲ್ಲಾಳ (ಕ್ರಿ.ಶ.1343 ಹಾಗೂ ಅವನ ಮಗ ವಿರೂಪಾಕ್ಷ ಬಲ್ಲಾಳ (ಕ್ರಿ.ಶ.1346) ರ ಮರಣದ ತರುವಾಯ ಹೊಯ್ಸಳ ಸಾಮ್ರಾಜ್ಯವು ಹರಿಹರನ ಆಡಳಿತಕ್ಕೆ ಸಂಪೂರ್ನವಾಗಿ ಕೈ ಸೇರಿತು. ಈತನ ತಮ್ಮನಾದ ಮೊದಲು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಶಾಸನ ಪಾಠದಿಂದ ಕುಮಾರ ಕಪ್ಪಣ್ಣನ ಬಗ್ಗೆ ತಿಳಿದುಬರುತ್ತದೆ.[52]

ಬುಕ್ಕರಾಯನು ಮಧುರೆಯ ಸುಲ್ತಾನರ ಪ್ರಭುತ್ವವನ್ನು ನಾಶಪಡಿಸುವಲ್ಲಿ ಯಶಸ್ವಿಯಾದನು. ಅವನು ಚೀನಾ ದೇಶಕ್ಕೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದ ಪ್ರಸಿದ್ಧ ವಿದ್ವಾಂಸರಾದ ಸಾಯಣ ಮತ್ತು ಮಾಧವರ ನಿರ್ದೇಶನದಲ್ಲಿ ಹಲವಾರು ವಿದ್ವಾಂಸರನ್ನು

ತೊಡಗಿಸಿ ವೇದಗಳಿಗೆ ವ್ಯಾಖ್ಯಾನ ಬರೆಯಿಸಿ ವೇದಾರ್ಥ ಪ್ರಕಾಶ ಎಂಬ ಉತ್ಕೃಷ್ಟ ಕೃತಿಯೊಂದು ರಚನೆಯಾಗುವಂತೆ ಪ್ರಾಯೋಜಿಸಿದನು. ಈ ದೊರೆ ಆಕೃತಿ ಇವನ ಮಗ ಇಮ್ಮಡಿ ಹರಿಹರನ (ಕ್ರಿ.ಶ.1377–1404) ಆಳ್ವಿಕೆಯ ಕಾಲದಲ್ಲಿ ಪೂರ್ಣವಾಯಿತು. ಎರಡನೇ ಹರಿಹರನು ತನ್ನ ಸಾಮ್ರಾಜ್ಯವನ್ನು ಕೊಂಕಣ ಪ್ರದೇಶದ ಗೋವಾದ ಆಚೆಗೆ ಚಾಲ್‌ವರೆವಿಗೂ ವಿಸ್ತರಿಸಿದನು.[53]

ಪೂರ್ವ ದಿಕ್ಕಿನಲ್ಲಿ ಆತನು ಕೃಪೆಯ ಉತ್ತರದ ಪಾಂಗಳದ ಕೋಟೆಯನ್ನು ವಶಪಡಿಸಿಕೊಳ್ಳಲು ಸುಲ್ತಾನ ಫಿರೋಜ್‌ಷಾ ಬಹಮನಿ ಮಾಡಿದ ಪ್ರಯತ್ನಗಳನ್ನು ಸಂಗಮರ ಶ್ರೇಷ್ಠ ದೊರೆಯಾದ ಇಮ್ಮಡಿ ದೇವರಾಯನು (ಕ್ರಿ.ಶ.1424–1449) ರಲ್ಲಿ ಆತನು ಯುವರಾಜನಾಗಿದ್ದಾಗಲೇ ವಿಫುಲಗೊಳಿಸಿದ್ದ. ಆದ ಕಾರಣ ಬಹಮನಿ ಸುಲ್ತಾನರು ಕ್ರಿ.ಶ.'1426 ರಲ್ಲಿ ತಮ್ಮ ರಾಜಧಾನಿಯನ್ನು ಉತ್ತರದ ಕಡೆಗೆ ಅಂದರೆ ಬೀದರ್‌ಗೆ ವರ್ಗಾಹಿಸಿದನು. ಇದು ಅಲ್ಲದೆ ಮುದ್ಗಲ್ ಪ್ರದೇಶವನ್ನು ತಮ್ಮ ಕೈವಶ ಮಾಡಿಕೊಳ್ಳುವ ಬಹುಮನಿಗಳ ಪ್ರಯತ್ನಗಳನ್ನು ವಿಫಲಗೊಳಿಸಿದನು. ಈತನ ಸೇನಾಧಿಪತಿಗಳಲ್ಲಿ ಒಬ್ಬನಾದ ಲಕ್ಕಣ್ಣ ದಂಡೇಶನು ಸಿಲೋನಿನ ಮೇಲೂ ದಾಳಿ ಮಾಡಿದ್ದ ಪೆಗು ಮತ್ತು ಬರ್ಮಾ (ಈಗಿನ ಮಯನ್ಮಾರ್ ತೆನೆಸೆರಿಮ್ ಅರಸರು ಇವನಿಗೆ ನಿಷ್ಠರಾಗಿದ್ದು, ಕಪ್ಪ ಕಾಣಿಕೆಗಳನ್ನು ನೀಡುತ್ತಿದ್ದರು. ಇವನು ವೀರಶೈವ ಧರ್ಮಕ್ಕೆ ವಿಶೇಷ ಪ್ರೋತ್ಸಾಹ ನೀಡಿದ್ದರೂ ಸಹ ಹಂಪಿಯಲ್ಲಿರುವ ಹಜಾರ ರಾಮಸ್ವಾಮಿ ದೇವಾಲಯ ಇವನ ಕಾಲದ ಒಂದು ಸುಂದರ ದೇವಾಲಯವಾಗಿದೆ. ಈತನ ಆಸ್ಥಾನಕ್ಕೆ ಪರ್ಶಿಯಾ ದೇಶದ ಪ್ರವಾಸಿ ಅಬ್ದುಲ್ ರಜಾಕ್ ಭೇಟಿ ನೀಡಿದ್ದು, ಈತನ ರಾಜಧಾನಿಯ ಬಗ್ಗೆ ಪ್ರಪಂಚದಲ್ಲಿ ಇದಕ್ಕೆ ಸರಿಸಮನಾದ ಬೇರೊಂದು ನಗರವಿಲ್ಲ ಎಂದು ತಿಳಿಸಿದ್ದಾನೆ. ಇಮ್ಮಡಿ ದೇವರಾಯನು ವಿದ್ವಾಂಸನಾಗಿದ್ದು, ಡಿಂಡಿಮ ಎಂಬ ಸಂಸ್ಕೃತ ಕವಿ ಹಾಗೂ ಶ್ರೀನಾಥನೆಂಬ ತೆಲುಗು ಕವಿಗೂ ಅಶ್ರಯ ನೀಡಿದ್ದನು. ಇಮ್ಮಡಿ ದೇವರಾಯನ ನಂತರ ಬಂದ ಸಂಗಮ ವಂಶದ ರಾಜರುಗಳು ಸಮರ್ಥರಾಗಿರಲಿಲ್ಲ. ಆದ ಕಾರಣ ಇವರ ಸಾಮ್ರಾಜ್ಯ ಛಿದ್ರಛಿದ್ರವಾಯಿತು. ತದನಂತರ ಬಂದ ಸಾಳುವ ವಂಶದ ನರಸಿಂಹ ಕ್ರಿ.ಶ.1485ರಲ್ಲಿ ಅಧಿಕಾರವನ್ನು ವಹಿಸಿಕೊಂಡು ಸಮರ್ಥ ದಂಡನಾಯಕರನ್ನು ರಕ್ಷಿಸಿದ. ಕ್ರಿ.ಶ.1485–1505ರಲ್ಲಿ ಕೆಲವು ಕಾಲ ಆಡಳಿತ ನಡೆಸಲು ಕಾರಣವಾಯಿತು. ಈ ಅವಧಿಯನ್ನು ಕ್ರಿ.ಶ.1498ರ ಪೋರ್ಚುಗೀಸ್ ಯಾತ್ರಿಕ ವಾಸ್ಕೊಡಗಾಮನು ಕಲ್ಲಿಕೋಟೆಗೆ ಬಂದು ಇಲ್ಲಿ ವ್ಯಾಪಾರವನ್ನು ನಡೆಸಿದನು. ಕಾಲಾನಂತರದಲ್ಲಿ ತುಳುವ ವೀರ ನರಸಿಂಹನ ಮುಂದಾಳತ್ವದಲ್ಲಿ ಸಿಂಹಾಸನದ ವಿಷಯದಲ್ಲಿ ಎರಡನೆಯ ಆಕ್ರಮಣ ನಡೆಯಿತು. ಈತನ ತದನಂತರ ತುಳುವವಂಶದ ಆಡಳಿತಾವಧಿ (ಕ್ರಿ.ಶ.1503–1570) ರಲ್ಲಿ ಪ್ರಾರಂಭವಾಯಿತು.

ಕ್ರಿ.ಶ.1510ರಲ್ಲಿ ಆಳ್ವಿಕೆಗೆ ಬಂದವನು ಕೃಷ್ಣದೇವರಾಯ. 1529 ರವರೆಗೆ ಆಳ್ವಿಕೆ ನಡೆಸಿದನು. ಈತನು ರಾಯಚೂರು ದೋ-ಅಬ್- ಪ್ರದೇಶವನ್ನು ಕ್ರಿ.ಶ.1512 ರಲ್ಲಿ ಆಕ್ರಮಿಸಿದನು. ಆನಂತರ ಶತ್ರುರಾಜಧಾನಿ ಪಟ್ಟಣಗಳಾದ ಬೀದರ್ (ಕ್ರಿ.ಶ.1512) ಬಿಜಾಪುರ (1523) ಮತ್ತು ಕಟಕ್ (1518) ರ ಸಮಯದಲ್ಲಿ ಸೈನ್ಯವನ್ನು ಮುನ್ನಡೆಸಿ ಜಯಗಳಿಸಿದನು.

ತಿರುಮಲೆಯ ವೆಂಕಟೇಶನ (ತಿಮ್ಮಪ್ಪನ) ಮಹಾಭಕ್ತನಾಗಿದ್ದ ಈತನು ಮೇಲಿಂದ ಮೇಲೆ ಏಳು ಬಾರಿ ತಿರುಪತಿಗೆ ಭೇಟಿ ನೀಡಿ ವೆಂಕಟೇಶ್ವರನಿಗೆ ಉದಾರವಾಗಿ ದಾನ ದತ್ತಿಗಳನ್ನು ನೀಡಿದ ಆಧಾರಗಳಿವೆ. [54]

ಶ್ರೀಕೃಷ್ಣದೇವರಾಯನ ಭಕ್ತಿಯ ಜ್ಞಾಪಕವಾಗಿ ಈಗಲೂ ಸಹ ತಿರುಪತಿಯಲ್ಲಿ ಕೃಷ್ಣದೇವರಾಯ ಮತ್ತು ಆತನ ಇಬ್ಬರು ಪತ್ನಿಯರು ಕಂಚಿನ ಶಿಲ್ಪಗಳನ್ನು ಇಡಲಾಗಿದೆ. ಪೋರ್ಚುಗೀಸ್ ರಾಯಭಾರಿ ಪೇಸ್‌ನ ಹೇಳಿಕೆಯಂತೆ ಮಹಾ ಆಡಳಿತಗಾರ ಹಾಗೂ ನ್ಯಾಯ ಪಕ್ಷಪಾತಿಯಾಗಿದ್ದ ಕೃಷ್ಣದೇವರಾಯನು ಸ್ವತಃ ಸಾಹಿತಿಯಾಗಿದ್ದು, ವಿದ್ವಾಂಸರಿಗೆ ಆಶ್ರಯದಾತನೂ ಸಹ ಆಗಿದ್ದ. ರಾಜನು ಅಮುಕ್ತಮೌಲ್ಯ ಎಂಬ ತೆಲುಗು ಮಹಾಕಾವ್ಯವನ್ನು ಬರೆದಿದ್ದಾರೆ. ಆತನ ಆಸ್ಥಾನದಲ್ಲಿ ಎಂಟು ಜನ ಕವಿಗಳಿದ್ದರು. ಅವರಲ್ಲಿ ಒಬ್ಬ ಅಲ್ಲಸಾನಿ ಪೆದ್ದಣನು ರಾಜಧಾನಿ ವಿಜಯನಗರದಲ್ಲಿ ಕೃಷ್ಣಸ್ವಾಮಿ ದೇವಾಲಯವನ್ನು ರಚಿಸಿದ. ಅವನ ಆಳ್ವಿಕೆಯ ಕಾಲದಲ್ಲಿಯೇ ಕ್ರಿ.ಶ.1510 ರಲ್ಲಿ ಪೋರ್ಚುಗೀಸರು ಗೋವೆಯನ್ನು ಬಿಜಾಪುರದ ಸುಲ್ತಾನರಿಂದ ವಶಪಡಿಸಿಕೊಂಡರು. ಪೋರ್ಚುಗೀಸರು ವಿಜಯನಗರ ಅರಸರಿಗೆ ಆದ್ಯತೆಯ ಮೇರೆಗೆ ಕುದುರೆಗಳನ್ನು ಒದಗಿಸುತ್ತಿದ್ದರು. ಇದರಿಂದ ಆಡಳಿತದಿಂದಾಗಿ ಗೋವೆಯಲ್ಲಿ ಅನೇಕ ವಿಶೇಷ ಪರಿಣಾಮಗಳಾದವು. ಅವರು ತಂಬಾಕು, ಕಡ್ಲೆಕಾಯಿ, ಮೆಣಸಿನಕಾಯಿ ಮೊದಲಾದ ಹೊಸ ಸಸ್ಯವರ್ಗಗಳನ್ನು ಈ ಭಾಗಕ್ಕೆ ಪರಿಚಯಿಸಿದರು. ಅದು ಅಲ್ಲದೆ ಮುದ್ರಣ ತಂತ್ರಜ್ಞಾನವನ್ನು ಭಾರತಕ್ಕೆ ಪರಿಚಯಿಸಿದರು. ಮಂಗಳೂರು ಮತ್ತು ಬಾರಕೂರುಗಳು ವಿಜಯನಗರದ ಅರಸರ ಕಾಲದಲ್ಲಿ ಕರಾವಳಿ ಪ್ರದೇಶದ ಪ್ರಮುಖ ಪ್ರಾಂತ್ಯಗಳಾಗಿದ್ದು, ವಿಜಯನಗರದ ಅರಸರಿಮ್ದ ನೇಮಕವಾದ ರಾಜ್ಯಪಾಲರುಗಳಿಂದ ಆ ಪ್ರಾಂತ್ಯಗಳ ಆಳ್ವಿಕೆ ನಡೆಯುತ್ತಿತ್ತು. ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಕಿ.ಶ.1543-70 ನಾಲ್ಕು ಜನ ಷಾಹಿ ಸುಲ್ತಾನರು ಸಾಮ್ರಾಜ್ಯದ ಮೇಲೆ ಆಕ್ರಮಣ ನಡೆಸಿದರು. ಕ್ರಿ.ಶ.1565 ರಲ್ಲಿ ಸಂಭವಿಸಿದ ರಕ್ಕಸತಂಗಡಿ (ರಕ್ಕಸಗಿ- ತಂಗಡಗಿ) ಯುದ್ಧದಲ್ಲಿ ವಿಜಯನಗರದ ಮಂತ್ರಿಯೂ ಕೃಷ್ಣದೇವರಾಯನ ಅಳಿಯನೂ ಆಗಿದ್ದ ಅರವೀಡು ವಂಶದ ಅಳಿಯ ರಾಮರಾಯನನ್ನು (ಕ್ರಿ.ಶ.1542-1565) ರಲ್ಲಿ ಕೊಂದು ರಾಜಧಾನಿ ವಿಜಯನಗರವನ್ನು ಸೂರೆ ಮಾಡಿದರು. [55] ತದನಂತರ ರಾಮರಾಯನ ತಮ್ಮಂದಿರಾದ

ತಿರುಮಲರಾಯ ಹಾಗೂ ವೆಂಕಟಪತಿರಾಯರು ರಾಜಧಾನಿಯನ್ನು ಪೆನುಗೊಂಡಗೆ ಬದಲಾಯಿಸಿದರು. ಕಾಲಾನಂತರದಲ್ಲಿ ವಿಜಯನಗರದ ದೊರೆಗಳಿಗೆ ಚಂದ್ರಗಿರಿ ಮತ್ತು ವೆಲ್ಲೂರಗಳು ರಾಜಧಾನಿಗಳಾದವು. ತುಳುವ ವಂಶದ ಆಡಳಿತವನ್ನು ಅರವೀಡು ವಂಶದವರು ಕ್ರಿ.ಶ.1570 ರಲ್ಲಿ ಬದಿಗೊತ್ತಿ ತಾವೆ ದೊರೆಗಳಾದರು. ಅರವೀಡು ವಂಶದ ಕೊನೆಯ ದೊರೆಯಾದ ಮೂರನೆಯ ಶ್ರೀರಂಗರಾಯನಿಗೆ ಅವನ ಮರಣದವರೆವಿಗೂ ಕೆಳದಿಯ ದೊರೆಗಳು ಆಶ್ರಯ ನೀಡಿದರು. ವಿಜಯನಗರದ ಆಳ್ವಿಕೆಯ ಕಾಲದ್ಲಲಿ ಕರ್ನಾಟಕದ ಕರಾವಳಿ ಪ್ರಾಂತ್ಯದಲ್ಲಿ ಅಜಲ, ಚಾಟ, ಬಂಗ, ಮೂಲ, ಹೆಗ್ಗಡೆ, ಬಲ್ಲಾಳ, ದೊಂಬ ಮೊದಲಾದ ಕೆಲವು ಸಣ್ಣಪುಟ್ಟ ಸ್ಥಳೀಯ ಪಾಳೆಯಗಾರರು ಹೆಚ್ಚು ಕಡಿಮೆ ಸ್ವತಂತ್ರರಾಗಿಯೇ ಆಡಳಿತ ನಡೆಸಿದರು. ವೇಣೂರು, ಮೂಡಬಿದ್ರೆ ಹಾಗೂ ಕಾರ್ಕಳಗಳು ಪ್ರಮುಖ ಜೈನ ಕೇಂದ್ರಗಳಾಗಿ ಬೆಳೆದವು. [56]

ವಿಜಯನಗರದ ಅರಸರು ಎಲ್ಲಾ ಧರ್ಮಗಳಿಗೂ ಆಶ್ರಯ ನೀಡಿದ್ದರು. ಪೋರ್ಚುಗೀಸ್ ಪ್ರವಾಸಿ ಬಾರ್ಬೋಸಾ ವಿಜಯನಗರ ಚಕ್ರವರ್ತಿಗಳ ಔದಾರ್ಯ ಗುಣವನ್ನು ಪ್ರಮಾಣಪೂರ್ವಕವಾಗಿ ಗುರುತಿಸಿದ್ದಾರೆ. ದಕ್ಷಿಣ ಭಾರತದ ಎಲ್ಲಾ ಭಾಷೆಗಳ ಸಾಹಿತ್ಯಿಕ ಚಟುವತಿಕೆಗಳಿಗೆ ಪ್ರೋತ್ಸಾಹ ನೀಡಲಾಯಿತು. ಭಾರತೀಯ ಪರಂಪರೆಯ ತತ್ವಶಾಸ್ತ್ರ, ಧರ್ಮ, ವಿಜ್ಞಾನ, ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಸಂರಕ್ಷಿಸುವ ಜವಾಬ್ದಾರಿಯನ್ನು ತಾನಾಗಿಯೇ ನಿಭಾಯಿಸುವ ಸಂದರ್ಭ ಈ ಸಾಮ್ರಾಜ್ಯಕ್ಕೆ ಅನಿವಾರ್ಯವಾಯಿತು. ಸ್ಥಳೀಯ ಪ್ರಾಂತ್ಯಗಳ ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡುವ ಕೆಲಸದಲ್ಲಿ ವಿಜಯನಗರ ಸಾಮ್ರಾಜ್ಯವು ಪ್ರಮುಖ ಪಾತ್ರವಹಿಸಿತು. ವೇದಗಳಿಗೆ ವ್ಯಾಖ್ಯಾನಗಳನ್ನು ಬರೆಯುವುದರ ಜೊತೆಗೆ ಸಾಯಣರು ಯಜ್ಞತಂತ್ರ ಸುಧಾನಿಧಿ, ಆಯುರ್ವೇದ ಸುಧಾನಿಧಿ, ಪುರುಷಾರ್ಥಸುಧಾನಿಧಿ, ಸುಭಾಷಿತ ಸುಧಾನಿಧಿ ಇನ್ನೂ ಮೊದಲಾದ ಕೃತಿಗಳ ಸಂಕಲನ ಕಾರ್ಯವನ್ನು ಮಾಡುವ ಮೂಲಕ ಭಾರತೀಯ ಪರಂಪರೆಯ ಸಂರಕ್ಷಣೆಗೆ ಪ್ರಮುಕರಾದರು (ವಿದ್ಯಾರಣ್ಯ ಶಿಷ್ಯ) ಭಾರತೀಯ ಮೂಲದ ಎಲ್ಲಾ ಧರ್ಮಗಳನ್ನು ಪರಿಚಯಿಸುವ ಸರ್ವದರ್ಶನ ಸಂಗ್ರಹ ಕೃತಿಯನ್ನು ರಚಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯದ ದೊರೆಗಳು ಎಲ್ಲಾ ಧಾರ್ಮಿಕ ಪಂಥಗಳ (ಶೈವ, ವೈಷ್ಣವ, ಶ್ರೀವೈಷ್ಣವ, ಜೈನ ಇತ್ಯಾದಿ) ದೇವಾಲಯಗಳನ್ನು ಕಟ್ಟಿಸಿದ್ದಾರೆ. ಅದು ಅಲ್ಲದೆ ದುಃಸ್ಥಿತಿ ಹೊಂದಿದ ದೇವಾಲಯಗಳ ಪುನರ್ ನಿರ್ಮಾಣ ಕಾರ್ಯವನ್ನು ಮಾಡಿಸಿದ್ದಾರೆ. ದೇವಸ್ಥಾನಗಳಿಗೆ ವಿಸ್ತಾರವಾದ ಪ್ರಾಕಾರಗಳನ್ನು ಒದಗಿಸಲಾಯಿತು. ರಾಯಗೋಪುರ ಎಂದು ಪ್ರಸಿದ್ಧವಾಗಿರುವ ಎತ್ತರವು ಭವ್ಯವೂ ಆದ ಗೋಪುರಗಳನ್ನು ರಾಜಧಾನಿ ಹಂಪಿಯೂ

ಸೇರಿದಂತೆ ಆಂಧ್ರ ಪ್ರದೇಶ ಹಾಗೂ ತಮಿಳುನಾಡಿನ ಶ್ರೀ ಶೈಲಂ, ಕಾಳಹಸ್ತಿ, ತಿರುಪತಿ, ಶ್ರೀರಂಗಂ, ಚಿದಂಬರಂ, ಕಂಚಿ ಮೊದಲಾದ ಪ್ರಾಂತ್ಯಗಳಲ್ಲಿ ಕಟ್ಟಲಾಗಿದೆ. ತೆರೆದ ಕಲ್ಯಾಣ ಮಂಟಪ ಹಾಗೂ ಸಭಾಮಂಟಪಗಳನ್ನು ದೇವಾಲಯಗಳ ಸಂಕೀರ್ಣಕ್ಕೆ ಸೇರಿಸಲಾಯಿತು. ಇಂತಹ ಪ್ರತಿಯೊಂದು ಮಂಟಪಕ್ಕೂ ಸುಂದರ ಕಲಾಕೃತಿಗಳಾಗಿ ಎತ್ತರವಾದ ಹತ್ತಾರು ಏಕಶಿಲಾ ಕಂಬಗಳನ್ನು ಒದಗಿಸಲಾಗಿದೆ.

ಇವರ ಕಾಲದಲ್ಲಿ ಸಂಸ್ಕೃತ ಕನ್ನಡ, ತಮಿಳು ಮತ್ತು ತೆಲುಗು ಸಾಹಿತ್ಯಗಳು ಅಭಿವೃದ್ಧಿಗೊಂಡಿದೆ. ವೀರಶೈವ ಧರ್ಮ ಪುನರುಜ್ಜೀವನಗೊಂಡಿತು. ವಿದ್ಯಾರಣ್ಯ, ಕಲ್ಲಿನಾಥ, ರಾಮಾಮಾತ್ಮ, ಪುರಂದರದಾಸ, ಕನಕದಾಸರಿಂದ ಕರ್ನಾಟಕ ಸಂಗೀತ ಬೆಳೆಯಿತು. ಕರ್ನಾಟ್ಕಾ ಸಂಗೀತವನ್ನು ಕಲಿಸುವ ವ್ಯವಸ್ಥೆಗೆ ಜನಪ್ರಿಯತೆಯನ್ನು ತಂದುಕೊಟ್ಟ ಪುರಂದರದಾಸರನ್ನು ಸಂತ ತ್ಯಾಗರಾಜರುವರು ಕರ್ನಾಟಕ ಸಂಗೀತ ಪಿತಾಮಹ ಎಂದು ಕರೆದಿರುವುದು ಕಂಡುಬಂದಿದೆ. ಹೊಯ್ಸಳರ ನಂತರದಲ್ಲಿ ವಿಜಯನಗರ ಅರಸರ ಆಳ್ವಿಕೆಯ ಪ್ರಸ್ತುತ ಪ್ರದೇಶ ಅನೇಕ ಸಣ್ಣಸಣ್ಣ ಪ್ರಾಂತ್ಯಗಳಾಗಿ ವಿಂಗಡಣೆಯಾದವು ಮತ್ತು ಸ್ಥಳೀಯ ತುಂತರಸರ ಪಾಳೆಪಟ್ಟಾಗಿ ಇಲ್ಲವೆ ಆಳರಸರಿಂದ ನೇಮಿಸಲ್ಪಟ್ಟ ಅಮರನಾಯಕರ ಆಳ್ವಿಕೆಗೆ ಸೇರಿತು. ವಿಜಯನಗರ ಅರಸರ ಕಾಲದ ರಾಜರುಗಳಾದ ಕುಮಾರ ಕಂಪಣ್ಣದೊರೆಯ ಬುಕ್ಕಮಹೇಶ, ಇಮ್ಮಡಿ ಹರಿಹರ, ಇಮ್ಮಡಿ ದೇವರಾಯ, ಅಚ್ಯುತರಾಯ, ರಾಮರಾಯರ ಒಟ್ಟು ಎಂಟು ಶಾಸನಗಳು ಹಾಸನ ಜಿಲ್ಲೆಯಲ್ಲಿ ದೊರೆತಿವೆ.

**ಕುಮಾರ ಕಂಪಣ್ಣ ಒಡೆಯ**

ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಭದ್ರಬುನಾದಿಯನ್ನು ಹಾಕಿದ ಕುಮಾರ ಕಂಪಣ್ಣನು ಕ್ರಿ.ಶ.1352 ರಲ್ಲಿ ಬೇಲೂರ ಹಬಾನ ಮೇಲೆ ಆಕ್ರಮಣ ನಡೆಸಿದ ಸಮಯದಲ್ಲಿ ನೀರ್ಗುಂದ ನಾಡಿನ ಬಾಗೇವಾಳನ ನಾಯಕನೊಬ್ಬನ ಮರಣವನ್ನು ಒಂದು ಶಿಲಾಶಾಸನದಲ್ಲಿ ಬರೆಸಿದ್ದಾರೆ. [57] ಕಂಪಣ್ಣನು ಮಧುರೆಯ ದಿಗ್ವಿಜಯಕ್ಕೆ ಹೋಗುವ ಮೊದಲು ಬೇಲೂರು ರಾಜ್ಯವನ್ನು ಆಕ್ರಮಿಸಿದಂತೆ ತೋರುತ್ತದೆ.

**ಬುಕ್ಕ ಮಹೇಶ**

ಈತನ ವಿಚಾರವನ್ನು ತಿಳಿಸುವಂತಹ ಕೆಲ್ಲಂಗೆರೆಯ ಶಿಲಾಶಾಸನವೊಂದು[58] ಕ್ರಿ.ಶ.1367 ರಲ್ಲಿ ಊರಿನ ಕೆರೆಯ ಕೆರೆಬಂಡಿ ಆಳ ಜೀವಿತಕ್ಕೆ ಮಾಡಿದ ಏರ್ಪಾಟೊಂದನ್ನು ತಿಳಿಸುತ್ತದೆ. ಕ್ರಿ.ಶ.1368 ರ ಅರಸೀಕೆರೆಯ ಶಾಸನದಲ್ಲಿ ಪರ್ವನ ಮಸ್ಯವಾದ ಪಿರಿಯಾಪಟ್ಟಣ

ಮಹಾ ಅಗ್ರಹಾರ ಉದ್ಭವ ಸರ್ವಜ್ಞ ವೀರವಿಜಯ ಬಲ್ಲಾಳಪುರವೆಂದು ಕರೆದು ಮಲ್ಲಿಕಾರ್ಜುನ ದೇವಾಲಯಕ್ಕೆ ಮಹಾಜನರ ದಾನವನ್ನು ತಿಳಿಸುತ್ತದೆ. [59] ಅಂದರೆ ಈ ಕಾಲಕ್ಕೆ ಅರಸೀಕೆರೆಯು ರಾಜಧಾನಿಯಾಗಿ ಎಂಬುದು ತಿಳಿದುಬರುತ್ತದೆ. ಪಿರಿಯಾಪಟ್ಟಣ ಮಹಾ ಅಗ್ರಹಾರವಾಗಿ ಹೊಯ್ಸಳ ವೀರ ಬಲ್ಲಾಳನ ನೆನಪನ್ನು ಮಾತ್ರ ಉಳಿಸಿಕೊಂಡಿತ್ತು ಎನ್ನಬಹುದು. ಮಹಾಪ್ರಧಾನ ಬಸದಿಯ ದಂಡನಾಯಕ ಮತು ಆಚರಸನು ಇಲ್ಲಿ ಆಡಳಿತ ನಡೆಸುತ್ತಿದ್ದರು. ಪ್ರಸ್ತುತ ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಗ್ರಹಾರಗಳಿದ್ದು, ಅವುಗಳ ಆಡಳಿತವನ್ನು ಮಹಾಜನರು ಅಂದಿನ ಕಾಲದಲ್ಲಿ ಸುಸೂತ್ರವಾಗಿ ನಡೆಸಿಕೊಂಡು ಹೋಗುತ್ತಿದ್ದುದರಿಂದ ವಿಜಯನಗರದ ಅರಸರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಅಮರನಾಯಕರು ಅವುಗಳ ಜೀರ್ಣೋದ್ಧಾರ ಅಭಿವೃದ್ಧಿಯನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ದೇವಾಲಯ ಕೆರೆ, ಕಟ್ಟೆ, ಕಾಲುವೆಗಳ ಜೀರ್ಣೋದ್ಧಾರದ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ. [59]

**ಇಮ್ಮಡಿ ಹರಿಹರ**

ಕ್ರಿ.ಶ.1378 ರಲ್ಲಿ ಇಮ್ಮಡಿ ಹರಿಹರನು ತನ್ನ ತಾಯಿಯ ಹೆಸರಿನಲ್ಲಿ ಹೊನ್ನಲಾಪುರವೆಂದು ಕರೆದು ಜಂಬೂರು ಗ್ರಾಮವನ್ನು ದಾನ ನೀಡಿದ್ದಾನೆ. ಅಲ್ಲದೆ ಮುದ್ದ ದಂಡೇಶನೆಂಬ ಸಚಿವನ ವಿಚಾರವು ಸಹ ತಿಳಿದುಬರುತ್ತದೆ. ಒಂದನೇ ಬುಕ್ಕನ ರಾಜಗುರುವೆಂದು ಕ್ರಿಯಾಶಕ್ತಿ ಆಚಾರ್ಯವನ್ನು ತಿಳಿಸಲಾಗಿದೆ. [60] ಕ್ರಿ.ಶ.1398 ರಲ್ಲಿ ನಡೆದ ಮರೆಯವೂರಿನ ಯುದ್ಧವೊಂದರಲ್ಲಿ ಬೇರೆಯ ನಾಯಕ ಮಾಡಿದನೆಂದು ಶಾಸನವೊಂದು ತಿಳಿಸುತ್ತದೆ. [61] ಕ್ರಿ.ಶ.1399 ರ ಶಾಸನದಲ್ಲಿ ಲಕ್ಕಣ್ಣವೊಡೆಯನನ್ನು ಹಾಗೂ ಕೊಟ್ಟ ದಾನವನ್ನು ತಿಳಿಸಲಾಗಿರುತ್ತದೆ. [62] ಕ್ರಿ.ಶ.1403 ರ ಶಾಸನದಲ್ಲಿ ರಾಯಣ್ಣನೆಂಬ ಅಧಿಕಾರಿ ಗಂಡಸಿಯ ಸ್ಥಳವನ್ನಾಳುತ್ತಿದ್ದ ತಾಯಿಯ ಹೆಸರಿನಲ್ಲಿ ಮಂಗಾಪುರವೆಂಬ ಗ್ರಾಮವನ್ನು ಮತ್ತು ಮಂಗಸಮುದ್ರವೆಂಬ ತಟಾಕವನ್ನು ಕಟ್ಟಿಸಿ ಹಾಗೂ ಹಿರಿಯ ಗಂಡಸಿ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ ಹನುಮಂತ ದೇವರ ದೇವಾಲಯವನ್ನು ಕಟ್ಟಿಸಿದ್ದಾರೆ. [63]

**ಇಮ್ಮಡಿ ದೇವರಾಯ**

ಈತನ ಕಾಲದಲ್ಲಿ ನೇರ್ಲಗೆಯ ಪಿರುಪಣ್ಣನಾಯಕನು ಕ್ರಿ.ಶ.1429ರಲ್ಲಿ ನ್ಲಿಗೆಯ ಕೆರೆಯ ಕೆರೆಬಂಡಿಯನ್ನು ಮಾಡಿಸಿ ಭೂಮಿದಾನ ನೀಡಿದ್ದಾನೆ. ಈ ಕಾರ್ಯ ಅಲ್ಲಿನ ಅಧಿಕಾರಿ ತಿರುಮಕ್ಕಳ್ ಎಂದು ತಿಳಿಸಲಾಗಿದೆ. ಅಲ್ಲದೆ ಜಯಪ್ಪನಾಯಕನ ನಿರೂಪದ ಮೇರೆಗೆ ನಡೆದಿದೆ.[64] ಕ್ರಿಶ. 1432 ರಲ್ಲಿ ಇಂತದ್ದೆ ವಿಚಾರಕ್ಕೆ ಶಂಕರಶೆಟ್ಟಿಯು ದಾನ ನೀಡಿದ್ದಾನೆ. ಇತನು ಮೂರುರಾಯರ ಬಸವನೆಂದು ಬಿರುದನ್ನು ಪಡೆದಿದ್ದಾನೆ. [65]

**ಶ್ರೀಕೃಷ್ಣದೇವರಾಯ**

ಕೃಷ್ಣದೇವರಾಯನ ಸಾಮಂತ ದೊರೆ ಭೈರವ ಭೂಪಾಲ (ಜಾವಗಲ್ಲು) (ಪ್ರಭುಗಳು) ಜಾವಗಲ್ಲು ಸೀಮೆಯನ್ನು ಆಳ್ವಿಕೆ ನಡೆಸಿದ ಭೈರವ ಭೂಪಾಲನು ದಕ್ಷ ಆಡಳಿತಗಾರನಾಗಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾನೆ. ಕ್ರಿ.ಶ.1515 ರ ತೇದಿಯುಳ್ಳ ಇವನ ಶಿಲಾಶಾಸನದಲ್ಲಿ ಶ್ರೀ ಕೃಷ್ಣದೇವರಾಯನ ವಿಚಾರ ತಿಳಿದುಬರುವುದಿಲ್ಲ. ಭೈರವಪಾಲನು ಕಟ್ಟಿಸಿದ ಕಾಲುವೆಗೆ ಸಾಳುವನ ಅಗಳೆಂದು ಹೆಸರನ್ನು ನೀಡಿರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ, ಈತನು ವಿಜಯನಗರ ಅರಸರಾದ ಸಾಳುವ ಅರಸರ ಬಗೆಗೆ ಹೊಂದಿದ್ದ ಪ್ರೀತಿ ತಿಳಿದು ಬರುತ್ತದೆ. ಚಂದ್ರವಂಶದನಾದ ಚನ್ನಮಹೀಪತಿ ಅವನ ಮಗ ತಿಮ್ಮ ಮೊಮ್ಮಗ ರಾಜೇಂದ್ರ (ರಾಯಣ್ಣ) ಮತ್ತು ಮರಿ ಮಗ ಭೈರವಭೂಪಾಲಕ ವಂಶಾವಳಿಯನ್ನು ತಿಳಿಸಲಾಗಿರುತ್ತದೆ. ಭೈರವಪಾಲನಿಗೆ ಹದಿಮುರು ರಾಯರ ಗಂಡನೆಂಬ ಬಿರುದು ಇತ್ತು. ಈತನು ಭೈರವಮುದ್ರವೆಂಬ ಮಹಾತಟಾಕ ನಂದನವನ ಎಂಬ ಹೊಸ ಕಾಲುವೆ ಕಟ್ಟಿಸಿ ಕೋಟೆ ಗೋಡೆಯನ್ನು ಭದ್ರಪಡಿಸಿ ಈ ಸೀಮೆಯ ಅಭಿವೃದ್ಧಿಗೆ ಕಾರಣನಾಗಿದ್ದಾನೆ. ಇಲ್ಲಿಯ ದೇವಾಲಯ ಈತನ ಕಾಲದ ವಿಸ್ತರಣೆಯಾಗಿರುವುದು ತಿಳಿದುಬರುತ್ತದೆ. [66]

ಅಚ್ಯುತರಾಯ– ಅಮರನಾಯಕ– ಬಯಕಾರ್

**ರಾಮಪ್ಪ**

ಈ ಪ್ರದೇಶದಲ್ಲಿ ಅಚ್ಯುತರಾಯನ ಪ್ರಸಿದ್ಧ ಅಧಿಕಾರಿ ಬಯಕಾರ ರಾಮಪ್ಪನ ಎರಡು ಶಾಸನಗಳಿವೆ. ಆತನು ಹೊನ್ನವಳ್ಳಿ ಸೀಮೆಯನ್ನು ಅಚ್ಚುತರಾಯನಿಂದ ನಾಯಕತನಕ್ಕೆ ಪಡೆದು ಆಳುತ್ತಿದ್ದನು. ಈತನನ್ನು ವಾಗ್ಗೇಯಕಾರಿ ಕುಲತಿಲಕನೆಂದು ಹಾರ್ನಹಳ್ಳಿ ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಆತನ ತಂದೆಯ ಹೆಸರು ತಿಮ್ಮಯ್ಯ ಎಂದು ತಿಳಿದುಬರುತ್ತದೆ. ಈ ಶಾಸನ ತುಳುವೇಂದ್ರ ತಿಮ್ಮನಿಂದ ಪ್ರಾರಂಭಿಸಿ ಈಶ್ವರ, ನರಸಿಂಹ ಶ್ರೀಕೃಷ್ಣದೇವರಾಯ ಅಚ್ಚುತರಾಯನವರೆಗೆ ತುಳುವ ವಂಶಾವಳಿಯನ್ನು ನೀಡಲಾಗಿದೆ. ಇದರಲ್ಲಿ ವಿಶೇಷವಾಗಿ ಆತನ ಪರಾಕ್ರಮ ಮತ್ತು ದಾನ ಗುಣಗಳನ್ನು ತಿಳಿಸಲಾಗಿರುತ್ತದೆ. [67]

**ರಾಮರಾಜ (ಅಳಿಯ ರಾಮರಾಯ) ಕೋಳಿಗುಂಡದ ಪ್ರಭುಗಾವುಂಡರು**

ರಾಮರಾಯನ ಒಂದೇ ಒಂದು ಶಾಸನ ಅರಸೀಕೆರೆ ತಾಲ್ಲೂಕಿನಲ್ಲಿ ಕಂಡುಬಂದಿದೆ. ಇದರಲ್ಲಿ ಆತನನ್ನು ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರ ಪ್ರತಾಪ, ಮಹಾಮಂಡಲೇಶ್ವರ, ರಾಮರಾಜ ಮಹಾ ಅರಸ ಎಂದು ತಿಳಿಸಲಾಗಿರುತ್ತದೆ. ಅದು ಅಲ್ಲದೆ

ಆತನ ಕುಟುಂಬವಾದ ಕೋಳಗುಮ್ಮದ ಗೌಡರ ವಂಶಾವಳಯನ್ನು ತಿಳಸಲಾಗಿರುತ್ತದೆ. ಹಿರಿಯ ಗೊಂಡನ ಮಗ ಚಿಕ್ಕಣಗೊಂಡ ಅವನ ಮಗ ಹೊಳೆಯಗೊಂಡನು ಕೋಳಗುಂದವನ್ನು ಆಳುತ್ತಿದ್ದು, ಅಲ್ಲಿ ದೇವಾಲಯ ಒಂದನ್ನು ನಿರ್ಮಿಸಿದನೆಂದು ತಿಳದುಬರುತ್ತದೆ. [68]

ಕ್ರಿ.ಶ.1581ರ ಒಂದು ಶಾಸನದಲ್ಲಿ ಮಹಾರಾಜಾಧಿರಾಜ, ಪರಮೇಶ್ವರ, ಶ್ರೀಮನ್ಮಹಾಪ್ರತಾಪ ಸಾಳುವರಾಯ ದಿಗೂರ ನಿಂಗರಾಜಯ್ಯನವರಿಗೆ ಧರ್ಮವಾಗಬೇಕೆಂದು ರಾಮಪ್ಪಯ್ಯನೆಂಬ ಅಧಿಕಾರ ಮಾಡಿದ ದಾನವನ್ನು ತಿಳಸಿದೆ. [69]

ಈ ರಾಮಪ್ಪಯ್ಯನಿಗೆ ಜಾವಗಲ್ಲು ಸೀಮೆಯನ್ನು ಅವುಜ (ಅಮರ) ಮಾಗಣಿಯಾಗಿ ನೀಡಲಾಗಿತ್ತು. [70] ಈ ನಿಂಗರಾಜಯ್ಯನ ಬಗೆಗೆ ಹೆಚ್ಚಾಗಿ ವಿಚಾರ ತಿಳದುಬರುವುದಿಲ್ಲ.

## ಮೈಸೂರು ಒಡೆಯರ್

ತಾಳಕೋಟೆ ಕದನದ ನಂತರ ದಕ್ಷಿಣ ಭಾರತದಲ್ಲಾದ ರಾಜಕೀಯ ಸ್ಥಿತ್ಯಂತರ ಮೈಸೂರಿನ ಒಡೆಯರು ಪ್ರವರ್ಧಮಾನಕ್ಕೆ ಬಂದರು. ಒಡೆಯರ್ ವಂಶಸ್ಥರು ದ್ವಾರಕೆಯ ಯಾದವ ಕುಲಕ್ಕೆ ಸೇರಿದವರೆಂದು ಕರೆದುಕೊಂಡಿದ್ದಾರೆ. ಒಡೆಯರ್‌ರವರು ಸ್ಥಳೀಯ ಸಣ್ಣ ಪಾಳೆಪಟ್ಟನ್ನು ಹೊಂದಿದ್ದು, ಕಾಲಕ್ರಮೇಣ ಪ್ರಬಲರಾದರು ಎಂಬುದು ಹೆಚ್ಚು ವಿದ್ವಾಂಸರ ಅಭಿಪ್ರಾಯವಾಗಿದೆ. ಒಡೆಯರ್ ಮನೆತನದವರು ವಿಜಯನಗರ ಸಾಮ್ರಾಜ್ಯ ಆಳದ ನಂತರ ಕರ್ನಾಟಕದ ದಕ್ಷಿಣ ಭಾಗದಲ್ಲಿ ಇತ್ತೀಚಿನವರೆವಿಗೂ ರಾಜಕೀಯವಾಗಿ ಆಡಳತ ನಡೆಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಪತನವಾದಾಗ ದಕ್ಷಿನ ಭಾರತದಲ್ಲಿ ಅನೇಕ ಸಣ್ಣಪುಟ್ಟ ರಾಜ್ಯಗಳು ತಲೆ ಎತ್ತಿ ನಿಂತವು. ಕರ್ನಾಟಕದ ಏಳಗೆಗೆ ಬಂದ ರಾಜ್ಯಗಳಲ್ಲಿ ಇಕ್ಕೇರಿ, ಕಿತ್ತೂರು ಮತ್ತು ಮೈಸೂರು ಸಂಸ್ಥಾನಗಳು ಪ್ರಮುಖವಾಗಿವೆ. ಮೈಸೂರಿನಲ್ಲಿ ಹದಿನಾರನೆ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದ ಒಡೆಯರ್ ಮನೆತನದ ಅರಸರು ತಮ್ಮದೇ ಆದ ವಿಶಿಷ್ಠ ಇತಿಹಾಸವನ್ನು ಹೊಂದಿದ್ದಾರೆ. ಸುಮಾರು ಐದು ಶತಮಾನಕ್ಕು ದೀರ್ಘಕಾಲ ಆಳದ ಇಪ್ಪತ್ತೈದು ಮಂದಿ ಒಡೆಯರ್‌ಗಳು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ಶ್ರೀಮಂತಗೊಳಸಿದ್ದಾರೆ. ಒಡೆಯರ್‌ರವರು ವಿಜಯನಗರ ಸಾಮ್ರಾಜ್ಯದಷ್ಟು ಎತ್ತರಕ್ಕೆ ಏರದಿದ್ದರೂ ಅದೆ ಧ್ಯೇಯ ಧೋರಣೆಗಳನ್ನು ಬೆಳೆಸಿಕೊಂಡು ಬಂದರು.

ಮೈಸೂರು ಒಡೆಯರ ಇತಿಹಾಸ ರಚನೆಗೆ ವಿವಿಧ ಮೂಲಗಳ ಆಧಾರಗಳವೆ. ಅಂದಿನ ಕಾಲದ ಕೆಲವು ಶಾಸನಗಳು ಅಲ್ಲದೆ, ಅರಮನೆಯ ದಾಖಲೆಗಳು ವಿಫುಲವಾಗಿವೆ. ಸಾಹಿತ್ಯಿಕ ಗ್ರಂಥಗಳು ಕಂಡುಬರುತ್ತವೆ. 'ಕಂಠೀರವನರಸರಾಜ ವಿಜಯಂ', 'ಚಿಕ್ಕದೇವರಾಜ ಬಿನ್ನಪಂ'

ಚಿಕ್ಕದೇವರಾಜ ವಂಶಾವಳಿ, ಕೆಳದಿ ನೃಪವಿಜಯಂ, ಗ್ರಂಥಗಳು ಪ್ರಮುಖವಾಗಿವೆ. ಪರ್ಷಿಯನ್ ಭಾಶೆಯಲ್ಲಿರುವ ಕೀರ್ಮಾನಿ ವಿರಚಿತ ನಿಶಾನ್ ಏ ಹೈದರಿ ಹೈದರನ ಮೇಲೆ ಹೆಚ್ಚು ವಿಚಾರವನ್ನು ಬೆಳಕಿಗೆ ತರುತ್ತದೆ. ಇವೆ ಅಲ್ಲದೆ ಹೈದರ್ ಆಲಿ ಮತ್ತು ಟಿಪ್ಪುವಿನ ಬಗ್ಗೆ ಪ್ರೆಂಚ್, ಇಂಗ್ಲೀಷ್, ಕನ್ನಡ, ಮರಾಠಿ, ತಮಿಳು ಮತ್ತು ತೆಲುಗು ಭಾಶೆಗಳಲ್ಲೂ ಅಪಾರವಾದ ಐತಿಹಾಸಿಕ ಸಾಧನಗಳಿವೆ. ಅಂದಿನ ಕಾಲದ ಅನೇಕ ರೀತಿಯ ಕಲಾಸ್ಮಾರಕಗಳು ಅರ್‌ಮನೆಗಳು, ದೇವಾಲಯಗಳು, ಮಸೀದಿಗಳು ಮೈಸೂರು ಒಡೆಯರ ಇತಿಹಾಸಕ್ಕೆ ಸಾಕ್ಷ್ಯಿಯಾಗಿ ಇಂದಿಗೂ ಉಳಿದುಕೊಂಡು ಬಂದಿದೆ.

ಕ್ರಿ.ಶ.1399 ರಲ್ಲಿ ಮೈಸೂರು ಪ್ರದೇಶಕ್ಕೆ ಬಂದಂತಹ ಯದುರಾಯ (ವಿಜಯರಾಯ) ಮತ್ತು ಕೃಷ್ಣರಾಯ ಎಂಬ ಸಹೋದರರೇ ಮೈಸೂರು ಒಡೆಯರ ಮೂಲ ಪುರುಷರು ಅಲ್ಲದೆ ದ್ವಾರಕೆ ಎಂಬ ಪ್ರಾಂತ್ಯ ಇವರ ಮೂಲಸ್ಥಾನ ಶ್ರೀಕೃಷ್ಣನ ವಂಶಸ್ಥರಾದ ಇವರನ್ನು ಯಾದವ (ಯಧು) ವಂಶೀಯರೆಂದು ಕರೆಯಲಾಗಿದೆ. ದ್ವಾರಕಾ ಅಥವಾ ಮಧುರಾದಿಂದ ಇವರು ಮೈಸೂರಿಗೆ ಆಗಮಿಸಿದ್ದು, ವಿಧಿಯ ಲೀಲೆ ಎನ್ನಬಹುದು. ಕಾವೇರಿ ತೀರದಲ್ಲಿದ್ದ ಗೌತಮನೆಂಬ ತಪಸ್ವಿಯ ಗೋತ್ರಕ್ಕೆ ಸೇರಿದ ಚಾಮರಾಜನು ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮೈಸೂರನ್ನು ಕ್ರಿ.ಶ.1399 ರವರೆಗೂ ಆಳ್ವಿಕೆ ಮಾಡಿ ನಂತರ ಮರಣ ಹೊಂದಿದ ಮೇಲೆ ಆತನ ಹೆಂಡತಿ ಮತ್ತು ಒಬ್ಬ ಮಗಳನ್ನು ಬಿಟ್ಟು ಹೋದನು ಎಂದು ತಿಳಿದುಬರುತ್ತದೆ. ಇಂತಹ ಪರಿಸ್ಥಿತಿಯ ಕಾಲದಲ್ಲಿ ರಾಜ್ಯದ ಮೇಲೆ ಆಕ್ರಮಣ ನಡೆಸಿದ ಕಾರುಗಳ್ಳಿಯ ಪಾಳೆಯಗಾರ ಮಾಅನಾಯಕ ಎಂಬುವನು ಶ್ರೀರಂಗಪಟ್ಟಣ ಪ್ರಾಂತ್ಯವನ್ನು ವಶಪಡಿಸಿಕೊಂಡಿರುವುದಲ್ಲದೆ, ವಿಧವೆ ದೇವಾಜಮ್ಮಣ್ಣಿಯಲ್ಲಿ ಆಕೆಯ ಮಗಳಾದ ಚಿಕ್ಕದೇವರಸಿಯನ್ನು ತನಗೆ ವಿವಾಹ ಮಾಡಿ ಕೊಡಬೇಕೆಂದು ಒತ್ತಾಯ ಮಾಡಿದನು. ಅಂತಹ ಸಂದರ್ಭದಲ್ಲಿ ಮಹಾರಾಣಿ ದೇವಾಜಮ್ಮಣ್ಣಿಗೆ ಆದಿಶಕ್ತಿ ಚಾಮುಂಡೇಶ್ವರಿಯ ಅಭಯದಂತೆ ದ್ವಾರಕೆಯಿಂದ ಹೊರಟ ಯದುರಾಯ ಮತ್ತು ಕೃಷ್ಣರಾಯ ಸಹೋದರು ಕಣ್ಣಿಗೆ ಬಿದ್ದರು. ಅವರು ಕಾರುಗಳ್ಳಿಯ ಮಾರನಾಯಕನ್ನು ಸಂಹರಿಸಿದರು. ಇದರಿಂದ ಸಂತೋಷಗೊಂಡ ಮಹಾರಾಣಿ ಯದುರಾಯನಿಗೆ ತನ್ನ ಪ್ರೀತಿಯ ಮಗಳನ್ನು ಧಾರೆಯೆರೆದು ಕೊಟ್ಟು, ತನ್ನ ರಾಜ್ಯವನ್ನು ಅವರಿಗೆ ನೀಡಿ ಸಿಂಹಾಸನವನ್ನು ನೀಡಿದಳು. ಇವರಿಗೆ ಒಡೆಯರ್ ಎಂದು ನಾಮಕರಣ ಮಾಡಿದಳೆಂದು ಹೇಳಲಾಗಿದೆ. ಕಾರುಗಳ್ಳಿಯ ಪಾಲೆಗಾರನ ಉಪಟಳವನ್ನು ಅರಸರಿಗೂ ಅನ್ವಯವಾದಂತೆ ತಿಳಿದುಬರುತ್ತದೆ.

**ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ.1638-1659)**

ಈತನು ಅತ್ಯಂತ ಶಕ್ತಿಶಾಲಿಯಾದ ದೊರೆ, ಈತನು ತನ್ನ ಗಡಿಯನ್ನು ವಿಸ್ತರಿಸಿದನು. ಕ್ರಿ.ಶ.1646 ರಲ್ಲಿ ತುರುವೇಕೆರೆ ಯುದ್ಧದ ನಂತರ ಆ ಪ್ರಾಂತ್ಯವು ಈತನ ಅಧೀನಕ್ಕೆ ಸೇರಿತ್ತು.[71] ಹೊಯ್ಸಳರ ಕಾಲದಿಂದಲೂ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬೆಳೆದಿದ್ದ ಬಾಣಾವರದಲ್ಲಿ ಈತನ ಹೆಸರಿನಲ್ಲಿ ಕಂಠೀರಾಯಪೇಟೆ ಎಂಬ ಸಂತೆಮಾಳವು ಸ್ಥಾಪಿತವಾಗಿದ್ದು, ಉಭಯ ನಾನಾ ದೇಶೀ ವ್ಯಾಪಾರಿಗಳು ದಕ್ಷಿಣ ಭಾರತದ ಮೇಲೆ ಮೂಲೆಗಳಿಂದ ಇಲ್ಲಿಗೆ ಬಂದು ವ್ಯಾಪಾರ ವಹಿವಾಟು ನಡೆಸುತ್ತಿದ್ದರು. [72]

**ದೇವರಾಜ ಒಡೆಯರ್ (ಕ್ರಿ.ಶ.1659-1673)**

ಇವರ ಆಳ್ವಿಕೆಯ ಕಾಲದಲ್ಲಿ ಭಾರತದ ಇತಿಹಾಸದಲ್ಲಿ ಅತ್ಯಂತ ಮಹತ್ವದ ಕಾಲ. ಉತ್ತರಭಾರತದಲ್ಲಿ ಮೊಗಲ್ ಸಾಮ್ರಾಟ ಔರಂಗಜೇಬ ದಕ್ಷಿಣ ಕಡೆ ರಾಜ್ಯ ವಿಸ್ತರಣಾ ನೀತಿಯನ್ನು ಅನುಸರಿಸುತ್ತಿದ್ದ. ಔರಂಗಜೇಬನ ದಾಳಿಯನ್ನು ತಡೆಯಲು ಮಹಾರಾಷ್ಟ್ರದಲ್ಲಿ ಉದಯಿಸಿದ ಶಿವಾಜಿಯು ಪ್ರಮುಖ ಕಾರಣನಾದನು. ಇವರಿಬ್ಬರ ಸಂಘರ್ಷ ಸ್ವಾಭಾವಿಕವಾಗಿಯೇ ಮೈಸೂರು ರಾಜ್ಯದ ಮೇಲೆ ಪರಿಣಾಮ ಬೀರಿತು. ತನ್ನ ಪೂರ್ವಿಕರ ನೀತಿಯನ್ನು ಅನುಸರಿಸಿ ದೇವರಾಜ ಮಾಗಡಿ, ಮಧುಗಿರಿ ಮತ್ತು ಕೊರಟಗೆರೆಗಳನ್ನು ಗೆದ್ದುಕೊಂಡನು. ಮಧುರೆಯ ರಾಜನು ಮೈಸೂರು ರಾಜ್ಯದ ಮೇಲೆ ದಾಳಿ ಮಾಡಿದಾಗ ಅವನನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದನು. ಮೈಸೂರಿನ ಚಾಮುಂಡಿ ಬೆಟ್ಟಕ್ಕೆ ಮೆಟ್ಟಿಲುಗಳನ್ನು ನಿರ್ಮಿಸಲು ಈತನು ಕಾರಣನಾದ. ಯಾತ್ರಿಕರ ಅನುಕೂಲಕ್ಕಾಗಿ ಅನೇಕ ಧರ್ಮ ಛತ್ರಗಳನ್ನು ಸ್ಥಾಪಿಸಿದನು. ಈತನ ಕಾಲದಲ್ಲಿ ಪ್ರಥಮ ಬಾರಿಗೆ ಮೈಸೂರು ರಾಜ್ಯ ಯುರೋಪಿಯನ್ನರೊಂದಿಗೆ ಸಂಪರ್ಕ ಬೆಳೆಯಿತು. ದೇವರಾಜನ ಮರಣಾನಂತರ ಅವನ ಸಹೋದರ ಅಳಿಯ ಚಿಕ್ಕದೇವರಾಜರು ಮೈಸೂರು ರಾಜ್ಯದ ಅಧಿಪತಿಗಳಾದರು.

**ಚಿಕ್ಕದೇವರಾಜ ಒಡೆಯರ್ (ಕ್ರಿ.ಶ.1673-1704)**

ಈತನ ಕಾಲ ದಕ್ಷಿಣ ಭಾರತದ ಇತಿಹಾಸದಲ್ಲೇ ಮಹತ್ವದ ಕಾಲ. ಈತನ ಕಾಲದಲ್ಲೂ ಮೊಗಲರ ಮತ್ತು ಮರಾಠರ ಸಂಘರ್ಷ ಮುಂದುವರೆಯಿತು. ಔರಂಗಜೇಬನ ಆಕ್ರಮಣ ನೀತಿಯಿಂದಾಗಿ ಬಿಜಾಪುರ ಮತ್ತು ಗೋಲ್ಕೊಂಡ ಷಾಹಿ ರಾಜ್ಯಗಳು ಕೊನೆಗೊಂಡಿತ್ತು. ಮರಾಠರು ಮತ್ತು ಬಿಜಾಪುರ ಸುಲ್ತಾನರ ದಾಳಿಯನ್ನು ಕೊನೆಗಾಣಿಸುವುದಕ್ಕೆ ಮತ್ತು ಮೈಸೂರು ರಾಜ್ಯದ ಸಮಗ್ರತೆಯನ್ನು ಕಾಪಾಡಲು ಈತ ತನ್ನ ಪೂರ್ಣ ಸಾಮರ್ಥ್ಯವನ್ನು ಹೊಂದಿದ್ದನು.

ಇಕ್ಕೇರಿಯ ಬಸಪ್ಪನಾಯಕನನ್ನು ಸೋಲಿಸಿದ, ಮಧುರೆಯ ಚೊಕ್ಕನಾಥನ ವಿರುದ್ಧ ದಂಡಯಾತ್ರೆ ಕೈಗೊಂಡನು. 1675ರಲ್ಲಿ ಶಿವಾಜಿಯು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಆತನನ್ನು ಸೋಲಿಸಿದನು. ಈ ಜಯದಿಂದ ಚಿಕ್ಕದೇವರಾಜನ ಖ್ಯಾತಿ ಭಾರತದಲ್ಲೆಲ್ಲಾ ಪಸರಿಸಿತು. ಈ ವಿಜಯದಿಂದ ಅಪ್ರತಿಮವೀರ ಎಂಬ ಬಿರುದನ್ನು ಪಡೆದನು. ಔರಂಗಜೇಬನು ಈತನಿಗೆ ಜಗದೇವ ಎಂಬ ಬಿರುದನ್ನು ನೀಡಿದನು. ಈತನ ದಕ್ಷ ಆಡಳಿತಗಾರ ಮಂತ್ರಿಮಂಡಲವನ್ನು ಜಾರಿಗೆ ತಂದನು. ಪ್ರಥಮ ಬಾರಿಗೆ ಅಂಚೆ ವ್ಯವಸ್ಥೆಯನ್ನು ಜಾರಿಗೆ ತಂದನು. ರಾಜ್ಯದ ಆಡಳಿತದ ದೃಷ್ಟಿಯಿಂದ ಹದಿನೆಂಟು ಕಛೇರಿಗಳನ್ನು ಜಾರಿಗೆ ತಂದನು. ಇದನ್ನು ಅಠಾರಾ ಕಛೇರಿ ಎಂದು ಕರೆಯಲಾಗಿದೆ. ಈತನ ಆರ್ಥಿಕ ನೀತಿಯಿಂದ ರಾಜ್ಯದ ಬೊಕ್ಕಸ ಸದಾಕಾಲ ತುಂಬಿರುತ್ತಿತ್ತು. ಆದ ಕಾರಣ 'ನವಕೋಟಿ ನಾರಾಯಣ' ಎಂಬ ಬಿರುದನ್ನು ಪಡೆದನು. 1660 ರಲ್ಲಿ ಮೈಸೂರು ಅರಸರು ಗರುಡನಗಿರಿ ಪ್ರದೇಶದಲ್ಲಿ ಗಿರಿದುರ್ಗವೊಂದನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ. ಸುಮಾರು 1057 ಮೀಟರ್ ಎತ್ತರದಲ್ಲಿರುವ ಈ ಗಿರಿಯ ನೆತ್ತಿಯು ರಾಜ್ಯದ ಗಡಿ ರಕ್ಷಣೆಗೆ ಕಾವಲು ನೆಲೆಯಾಗಿತ್ತು. ನೊಣಬನ ಗುಡ್ಡವೆಂದು ಕರೆಯಲ್ಪಡುತ್ತಿದ್ದ ಈ ಗಿರಿಯು ಗರುಡನಗಿರಿ ಎಂದು ಪ್ರಸಿದ್ಧವಾಗಿದೆ. ಕ್ರಿ.ಶ.1690 ರಲ್ಲಿ ಚಿಕ್ಕದೇವರಾಜ ಒಡೆಯರ್ ಈ ಪ್ರಾಂತ್ಯವನ್ನು ಆಳುತ್ತಿದ್ದರು. [73]

**ಇಮ್ಮಡಿ ಕಂಠೀರವನರಸರಾಜ ಒಡೆಯರ್**

ಚಿಕ್ಕದೇವರಾಜನು ಮರಣ ಹೊಂದಿದ ನಂತರ ಆತನ ಮಗ ಇಮ್ಮಡಿ ಕಂಠೀರವನರಸರಾಜ ಒಡೆಯರ್ ಕೇವಲ ಹತ್ತು ವರ್ಷಗಳ ಕಾಲ ರಾಜ್ಯವನ್ನಾಳಿದ. 1914 ರಲ್ಲಿ ತೀರಿಕೊಂಡನು. ನಂತರ ಆತನ ಪುತ್ರ ದೊಡ್ಡಕೃಷ್ಣರಾಜ ಅಥವಾ ಒಂದನೇ ಕೃಷ್ಣರಾಜನು ಮೈಸೂರು ರಾಜ್ಯದ ಅಧಿಪತಿಯಾದನು. ಈತನಿಗೆ ಕೇವಲ 14 ವರ್ಷದ ಬಾಲಕನಾದುದರಿಮ್ದ ರಾಜ್ಯಭಾರ ಜವಾಬ್ದಾರಿ ದಳವಾಯಿ ದೇವರಾಜ ಮತ್ತು ಸರ್ವಾಧಿಕಾರಿ ನಂಜರಾಜನ ಕೈಸೇರಿತು.

1732 ರಲ್ಲಿ ಸಿಂಹಾಸನವನ್ನೇರಿದ ಏಳನೇ ಚಾಮರಾಜನನ್ನು ದಳವಾಯಿಗಳು ಬಂಧನದಲ್ಲಿಟ್ಟರು. ನಂತರ ಎರಡನೇ ಚಿಕ್ಕಕೃಷ್ಣರಾಜ ಒಡೆಯರ್ 1734-1766 ರಲ್ಲಿ ಮೈಸೂರಿನ ಸಿಂಹಾಸನಕ್ಕೆ ನಾಮಮಾತ್ರದ ರಾಜನಾದನು. ಈತ ಕೇವಲ ಐದು ವರ್ಷದ ಬಾಲಕನಾಗಿದ್ದುದರಿಂದ ಶ್ರೀರಂಗಪಟ್ಟಣದ ಅರಮನೆಯ ಎಲ್ಲಾ ಅಧಿಕಾರಗಳನ್ನು ದಳವಾಯಿಗಳು ತಮ್ಮಲ್ಲಿ ಕೇಂದ್ರೀಕರಿಸಿಕೊಂಡರು. ಈತನ ಬಗ್ಗೆ ಅಮರಗಿರಿ ಮಾಲೆಕಲ್ಲು, ತಿರುಪತಿ ದೇವಾಲಯದಲ್ಲಿನ ಕ್ರಿ.ಶ.1745ಕ್ಕೆ ಸೇರಿದ ಶಾಸನ ರಾಜರನ್ನು ಉಲ್ಲೇಖಿಸಿಲ್ಲವಾದರೂ

ಸಹ ಅರಸೀಕೆರೆ ಪ್ರದೇಶವು ಇಮ್ಮಡಿ ಕೃಷ್ಣರಾಜ ಒಡೆಯರ್ ಅಧೀನದಲ್ಲಿತ್ತು. ಗರುಡನಗಿರಿ ಬಾಣಾವರ ಸೀಮೆ ಕಣೆಕಟ್ಟಿ, ಜಾವಗಲ್ಲುಗಳು ಆಡಳಿತಕ್ಕೆ ಸೇರಿದ್ದು, ವಿವಿಧ ಖಾತೆಗಳ ಅಧಿಕಾರಿಗಳು ನಾಲೆಕಾರರು, ದಂತ್ರಿಕಾರರು, ಸೇರೆಗಾರರು, ಸೈನಿಕ ಪಡೆಯವರು ಒಟ್ಟಾಗಿ ತಿರುಪತಿ ವೆಂಕಟಾಚಲಪತಿಗೆ ದೀಪೋತ್ಸವಕ್ಕಾಗಿ ವರ್ಷಂಪ್ರತಿ ಶಾಶ್ವತ ಹೊನ್ನು ದಾನದ ಚಿನ್ನಹಗಳನ್ನು ಮಾಡಿದ್ದಾರೆ.[74] ಇವುಗಳಿಗೆ ಸ್ಥಳೀಯ ನಾಡಿಗರ ಒಪ್ಪವಿದೆ ಹಾಗೂ ಈ ಶಾಸನಗಳಲ್ಲಿ ಕಂಠೀರಾಯ ಹಣದ ಉಲ್ಲೇಖ ಸಹ ಬಂದಿದೆ. ಅಸಮರ್ಥನಾದ ಇಮ್ಮಡಿ ಕೃಷ್ಣರಾಜರನ್ನು ಅವನ ದಳವಾಯಿಗಳು ನಂಜರಾಜ ಮತ್ತು ಬಸವರಾಜರು ಅಂಕೆಯಲ್ಲಿಟ್ಟಿದ್ದರು. ಸಾಹಸಿಗನೂ ತೀಕ್ಷ್ಣಮತಿಯೂ ಆದ ಹೈದರ್ ಅಲಿ ನಂಜರಾಜನನ್ನು ಕೆಳಗಿಳಿಸಿ ಒಡೆಯರ ಅಸಮರ್ಥತೆಯ ಲಾಭ ಪಡೆದು ಅಧಿಕಾರದ ಚುಕ್ಕಾಣಿ ಹಿಡಿದನು. ಒಡೆಯನ ಮರಣದ ನಂತರ ಸ್ವಾತಂತ್ರ್ಯ ಅಡಳಿತಕ್ಕೆ ತೊಡಗಿದನು.

**ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ (ಕ್ರಿ.ಶ.1766–1799)**

ಕ್ರಿ.ಶ.1799 ರ ಸಮಯದಲ್ಲಿ ಹಾಸನ ಜಿಲ್ಲೆಯ ಬಹುತೇಕ ಪ್ರದೇಶವು ಪಾಳೇಗಾರರಿಂದ ಹೈದರನ ಕೈಸೇರಿತು. ಹೈದರ್ ಆಲಿ ಹಿರೇಕಲ್ಲು ಮತ್ತು ನಾಗಪುರಿಯಲ್ಲಿ ಒಂದು ಗರುಡನ ಗಿರಿಯಲ್ಲಿ ನೆಲೆಸುವಂತೆ ಮಾಡಿದನಾದರೂ ಹೊಸ ಸ್ಥಳದ ಅನಾರೋಗ್ಯ ವಾತಾವರಣದಿಂದಾಗಿ ಜನರು ಮತ್ತೆ ವಾಪಸ್ಸಾದರು[75] ಹೈದರು ಆಲಿ ಮತ್ತು ಟಿಪ್ಪು ಸುಲ್ತಾನನ ಕಾಲದಲ್ಲಿ ಬಾಣಾವರ ಕೋಟೆ ಗರುಡನಗಿರಿ ಹಾರನಹಳ್ಳಿ ಕೋಟೆಗಳು ಒಳಗೊಂಡು ಸೈನ್ಯದ ಠಾಣ್ಯವಾಗಿದ್ದವೆಂದು ತಿಳಿದುಬರುತ್ತದೆ. [76] ಹಾರನಹಳ್ಳಿಯ ಕೋಡಿಮಠಕ್ಕೆ ಹೈದರ್ ಆಲಿ ಕೆಲವು ಕಾಣಿಕೆಗಳನ್ನು ನೀಡಿದ್ದಾನೆ. ಕ್ರಿ.ಶ.1770ರಲ್ಲಿ ಚಿನಕುರುಳಿ ಯುದ್ಧದಲ್ಲಿ ಮರಾಠರ ತ್ರಿಯಂಬಕನು ಹೈದರನನ್ನು ಸೋಲಿಸಿ ಗರುಡನಗಿರಿ ಕೋಟೆಯನ್ನು ವಶಪಡಿಸಿಕೊಂಡನು.[77]

**ಹೈದರ್ ಮತ್ತು ಟಿಪ್ಪುವಿನ ಆಡಳಿತ**

ಭಾರತದಿಂದ ಬ್ರಿಟಿಷರನ್ನು ಹೊರದೂಡುವ ಸಲುವಾಗಿ ತನ್ನ ಜೀವವನ್ನೇ ಪಣವಾಗಿಟ್ಟ. ಟಿಪ್ಪು ಸುಲ್ತಾನ್ ಭಾರತ ಇತಿಹಾಸದಲ್ಲಿ ಯಮಧೈರ್ಯವುಳ್ಳ ರಾಜಕಾರಣಿಯಾಗಿದ್ದಂತೆ ದಕ್ಷ ಆಡಳಿತಗಾರನೂ ಆಗಿದ್ದ. ಇವನ ಆಡಳಿತ ಸಾಮರ್ಥ್ಯವನ್ನು ಅನೇಕ ಇತಿಹಾಸಕಾರರು ಹೊಗಳಿದ್ದಾರೆ. ರಾಜ್ಯರಕ್ಷಣೆಗಾಗಿ ಟಿಪ್ಪು ಸ್ಥಳೀಯ ಅರಸರೊಂದಿಗೆ ಬ್ರಿಟಿಷರೊಂದಿಗೆ ಅನೇಕ ಯುದ್ಧ ಮಾಡಬೇಕಾಗಿ ಬಂದರೂ ಆಡಳಿತದಲ್ಲಿ ವಿದೇಶಿ ನೀತಿಯನ್ನು ಅಳವಡಿಸಿಕೊಂಡು ಅನೇಕ ಸುಧಾರಣೆಗಳನ್ನು ಜಾರಿಗೆ ತಂದ.

ಪ್ರಜಾಕ್ಷೇಮವನ್ನೆ ತನ್ನ ಮುಖ್ಯಗುರಿಯಾಗಿಟ್ಟುಕೊಂಡಿದ್ದ. ಟಿಪ್ಪು ಇಸ್ಲಾಂ ಹಾಗೂ ಹಿಂದೂ ಕಾನೂನುಗಳೆರಡನ್ನೂ ಅಳವಡಿಸಿಕೊಂಡು ಸಮರ್ಥವಾಗಿ ಆಳ್ವಿಕೆ ನಡೆಸಿದ. ಓಪ್ಪು ತನ್ನ ರಾಜ್ಯವನ್ನು ದೈವದತ್ತ ರಾಜ್ಯವೆಂದು ನಂಬಿದ್ದ.

ಟಿಪ್ಪು ಎಲ್ಲಾ ಹಿಂದೂ ರಾಜರಂತೆ ನಿರಂಕುಶ ಅಧಿಕಾರಿಯಾಗಿದ್ದು, ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗದ ಮುಖ್ಯಸ್ಥನಾಗಿದ್ದ. ಟಿಪ್ಪು ಸೈನ್ಯದ ಮಹಾದಂಡನಾಯಕನೂ ಆಗಿದ್ದು, ವಿದೇಶಾಂಗ ವ್ಯವಹಾರವನ್ನು ನಿರ್ವಹಿಸುತಿದ್ದ. ರಣರಂಗದಲ್ಲಿ ಸೈನ್ಯವನ್ನು ತಾನೇ ನಡೆಸುತ್ತಿದ್ದು, ಇತರೆ ದಂಡನಾಯಕರು ಇವನ ಸೂಚನೆಯಂತೆ ಕಾರ್ಯ ನಿರ್ವಹಿಸುತ್ತಿದ್ದರು. ಟಿಪ್ಪು ನ್ಯಾಯಂಗದ ಮುಖ್ಯಸ್ಥನೂ ಆಗಿದ್ದು, ಬಡವ-ಬಲ್ಲಿದ ಎನ್ನದೆ ಎಲ್ಲರಿಗೂ ಒಂದೇ ರೀತಿಯ ನ್ಯಾಯ ನೀಡುತ್ತಿದ್ದು, ನ್ಯಾಯಾಂಗದ ವಿಚಾರದಲ್ಲಿ ಟಿಪ್ಪು ಮಾತೇ ಕೊನೆಯದಾಗಿತ್ತು.

ರಾಜ್ಯಾಡಳಿತ ವಿಷಯದಲ್ಲಿ ಟಿಪ್ಪು ಹೊಣೆಗೇಡಿತನದ ರಾಜನಂತೆ ವರ್ತಿಸುತ್ತಿರಲಿಲ್ಲ. ತನ್ನ ಪ್ರಜೆಗಳು ದೇವರ ಮಕ್ಕಳೆಂದು ತಿಳಿದು ಎಲ್ಲರಿಗೂ ಒಳಿತಾಗುವ ರೀತಿ ಆಡಳಿತ ನಡೆಸಿದ.

**ಕೇಂದ್ರ ಸರ್ಕಾರ**

ಟಿಪ್ಪು ತನ್ನ ತಂದೆಯಿಂದ ಸುವ್ಯವಸ್ಥಿತ ಸಾಮ್ರಾಜ್ಯ ಪಡೆದಿದ್ದು, ಈ ರಾಜ್ಯವನ್ನು ಅಭಿವೃದ್ಧಿಗೊಳಿಸುವ ದೃಷ್ಟಿಯಿಂದ ಗಣನೀಯ ಬದಲಾವಣೆಯನ್ನು ಜಾರಿಗೆ ತಂದ. ಹೈದರನಿಗಿಂತಲೂ ಟಿಪ್ಪು ಸದೃಢವಾದ ಕೇಂದ್ರ ಸರ್ಕಾರವನ್ನು ಟಿಪ್ಪು ರೂಪಿಸಿದ್ದು, ತನ್ನ ಆಡಳಿತದಲ್ಲಿ ಪಾಶ್ಚಾತ್ಯ ಪದ್ಧತಿಗಳನ್ನು ಜಾರಿಗೆ ತರುವ ನಿಟ್ಟಿನಲ್ಲಿ ಆಸಕ್ತಿ ತೋರಿದ ಪ್ರಥಮ ಭಾರತೀಯ ರಾಜ ಎನಿಸಿಕೊಂಡಿದ್ದಾನೆ. ಟಿಪ್ಪು ತನ್ನ ಸರ್ಕಾರದಲ್ಲಿ 7 ಪ್ರಧಾನ ಇಲಾಖೆಗಳನ್ನು ಹೊಂದಿದ್ದು, ಅವೆಂದರೆ 1) ಕಂದಾಯ 2) ಹಣಕಾಸು 3) ಸೈನ್ಯ 4) ವಾಣಿಜ್ಯ 5) ಯುದ್ಧ ಸಾಮಾಗ್ರಿಗಳು 6) ಖಜಾನೆ 7) ಟಂಕಶಾಲೆ ಮತ್ತು ಕಡಲ ಸಂಬಂಧವಾದ ಇಲಾಖೆ. ಇವುಗಳೊಂದಿಗೆ ಕೆಲವು ಉಪ ಇಲಾಖೆಗಳು ಇದ್ದು, ಪ್ರತಿಯೊಂದು ಇಲಾಖೆ ಮುಖ್ಯಾಧಿಕಾರಿಯನ್ನು ಹೊಂದಿತ್ತು. ಈ ಮುಖ್ಯಾಧಿಕಾರಿಗಳು ಒಂದು ಕಡೆ ಸಭೆ ಸೇರಿ, ಇಲಾಖೆಗಳಿಗೆ ಸಂಬಂಧಿಸಿದ ವಿಚಾರಗಳನ್ನು ಚರ್ಚಿಸಿ, ಒಂದು ವರದಿ ತಯಾರಿಸಿ, ಅದನ್ನು ಟಿಪ್ಪುವಿಗೆ ಸಲ್ಲಿಸುತ್ತಿದ್ದರು. ಅದನ್ನು ಪರಿಶೀಲಿಸಿದ ಟಿಪ್ಪು ತನ್ನ ಒಪ್ಪಿಗೆ ನೀಡುತ್ತಿದ್ದ. ಇದು ಅವನ ಉತ್ತಮ ಆಡಳಿತಕ್ಕೊಂದು ಶ್ರೇಷ್ಠ ನಿದರ್ಶನವಾಗಿದೆ. ಟಿಪ್ಪು ತನ್ನ ಆಡಳಿತದ ಅನುಕೂಲಕ್ಕಾಗಿ ತನ್ನ ರಾಜ್ಯವನ್ನು 3 ಭಾಗವಾಗಿ ವಿಭಾಗಿಸಿದ್ದ ಅವೆಂದರೆ,

1) ಕರಾವಳಿ ಜಿಲ್ಲೆಗಳು (ಯಮ ಸುಭಾ)

2) ಪರ್ವತ ಪ್ರದೇಶಗಳು (ತರನಾ ಸುಭಾ)

3) ಬಯಲು ಪ್ರದೇಶಗಳು (ಘಾಬ್ರಸುಭಾ)

**ಪ್ರಾಂತ್ಯಾಡಳಿತ**

ಟಿಪ್ಪುವಿನ ಕಾಲದಲ್ಲಿ ತನ್ನ ಸಾಮ್ರಾಜ್ಯವನ್ನು ಅನೇಕ ಪ್ರಾಂತ್ಯಗಳಾಗಿ ವಿಂಗಡಿಸಿದ್ದ. ಮಂಗಳೂರು ಒಪ್ಪಂದದ ನಂತರ ಟಿಪ್ಪು ತನ್ನ ಸಾಮ್ರಾಜ್ಯವನ್ನು 9 ಪ್ರಾಂತ್ಯಗಳಾಗಿ ವಿಭಾಗಿಸಿದ್ದು, 1784 ರಲ್ಲಿ 17 ಪ್ರಾಂತ್ಯಗಳಾಗಿ, 1794 ರಲ್ಲಿ 37 ಪ್ರಾಂತ್ಯಗಳಾಗಿ ವಿಂಗಡಿಸಿದ್ದ.

ಪ್ರತಿಯೊಂದು ಪ್ರಾಂತ್ಯವು ಪ್ರತೀ ಅಸಫ್‌ದಾರ ಅಥವಾ ಫೌಜ್‌ದಾರನ ವಶದಲ್ಲಿದ್ದು, ಅವನು ಆ ಪ್ರಾಂತ್ಯದ ಶಾಂತಿ, ಸುವ್ಯವಸ್ಥೆ ಕಾಪಾಡಿ, ಅಲ್ಲಿಯ ಕಂದಾಯವನ್ನು ವಸೂಲಿ ಮಾಡುತ್ತಿದ್ದ ಒಬ್ಬ ಅಸಫ್‌ದಾರ ಇನ್ನೊಬ್ಬನ ಆಡಳಿತ ವ್ಯವಹಾರದಲ್ಲಿ ಪ್ರವೇಶಿಸುತ್ತಿರಲಿಲ್ಲ. ಕೆಲವು ಪ್ರಾಂತ್ಯಗಳಲ್ಲಿ ಮಾತ್ರ ಇಬ್ಬರು ಅಸಫ್‌ದಾರರಿರುತ್ತಿದ್ದರು. ಅಸಫ್‌ದಾರರಿಗೆ ಶಿರಸ್ತೇದಾರ, ಗುಮಾಸ್ತರು, ಜವಾನರು ಸಹಾಯಕರಾಗಿದ್ದರು. ವರ್ಷಕ್ಕೊಮ್ಮೆ ಈದ್-ಉಲ್-ಫಿತರ್‌ನ ದಿವಸ ಅಸಫ್‌ದಾರರು ತಮ್ಮ ಸಹಾಯಕರೊಡನೆ ಶ್ರೀರಂಗಪಟ್ಟಣಕ್ಕೆ ಹೋಗಬೇಕಿತ್ತು ಹಾಗೂ ತಮ್ಮ ಲೆಖ್ಖವನ್ನು ಸುಲ್ತಾನರಿಗೆ ಒಪ್ಪಿಸಬೇಕಾಗಿತ್ತು.

ಪ್ರಾಂತ್ಯಗಳನ್ನು ಅನೇಕ ಜಿಲ್ಲೆಗಳಾಗಿ ವಿಭಾಗಿಸಿದ್ದು ಜಿಲ್ಲೆಗಳನ್ನು ಅಮಲ್ದಾರಿ ತುಕ್ರಿ ಎಂದು ಕರೆಯಲಾಗುತ್ತಿತ್ತು. ಸಾಧಾರಣವಾಗಿ ಒಂದು ಪ್ರಾಂತ್ಯದಲ್ಲಿ 20 ರಿಂದ 25 ಜಿಲ್ಲೆಗಳಿರುತ್ತಿದ್ದವು. ಪ್ರತೀ ಜಿಲ್ಲೆಯಲ್ಲಿ 30 ರಿಂದ 40 ಹಳ್ಳಿಗಳಿರುತ್ತಿದ್ದವು. ಜಿಲ್ಲೆಯಲ್ಲಿ ಅಮಿಲ್ ಅಥವಾ ಅಮುಲ್ದಾರ್ ಮುಖ್ಯಸ್ಥನಾಗಿದ್ದು ಅವನು ರೈತರ ಹಿತರಕ್ಷಿಸಿ, ವ್ಯವಸಾಯ ಅಭಿವೃದ್ಧಿಪಡಿಸಿ ಜಿಲ್ಲೆಯ ಶಾಂತಿ ಸುವ್ಯವಸ್ಥೆ ಕಾಪಾಡುತ್ತಿದ್ದ. ಈ ಅಮುಲ್ದಾರ್‌ನ ಸಹಾಯಕ್ಕೆ ಅನೇಕ ಶಿರಸ್ತೇದಾರರು, ಗುಮಾಸ್ತರು, ಜವಾನರು ಇರುತ್ತಿದ್ದರು.

**ಗ್ರಾಮಾಡಳಿತ**

ಗ್ರಾಮಾಡಳಿತವನ್ನು ಪಟೇಲ ಅಥವಾ ಗೌಡ, ಶ್ಯಾನುಭೋಗ ತಳವಾರ ಮುಂತಾದವರು ನೋಡಿಕೊಳ್ಳುತ್ತಿದ್ದರು. ಪಟೇಲ, ಶ್ಯಾನುಭೋಗನನ್ನು ಜಿಲ್ಲೆಯ ಮುಖ್ಯಸ್ಥನಾದ ಅಮುಲ್ದಾರ್ ನೇಮಿಸುತ್ತಿದ್ದು, ಕಂದಾಯ ನಿಗಧಿ, ವಸೂಲಿ, ಭೂಮಾಪನ, ಸುಂಕವಸೂಲಿ, ಗ್ರಾಮದ ರಕ್ಷಣೆ ಮತ್ತು ಕಾನೂನು ಪಾಲನೆ, ರಸ್ತೆಗಳ ಅಭಿವೃದ್ಧಿ, ರಸ್ತೆಯ ಎರಡೂ ಬದಿಯಲ್ಲಿ ಮರ ನೆಡಿಸುವುದು, ಹಳ್ಳಿಯ ವ್ಯಾಜ್ಯಗಳನ್ನು ತೀರ್ಮಾನಿಸುತ್ತಿದ್ದ. ಭೂಮಿಯ ದಾಖಲೆ, ಕಂದಾಯ

ವಿವರವನ್ನು ಶ್ಯಾನುಭೋಗ ಇರುತ್ತಿದ್ದು ಇವನಿಗೆ ಸಹಾಯಕನಾಗಿ ತಳವಾರನಿದ್ದ. ಅಂಚೆ ವಿತರರಣೆ ಡಂಗೂರ ಮೂಲಕ ಸುದ್ಧಿ ಹರಡುವುದು ತಳವಾರನ ಕೆಲಸವಾಗಿತ್ತು. ಇವರಿಗೆ ವೇತನದ ಬದಲು ಜಮೀನು ನೀಡಲಾಗಿತ್ತು. ಪಟೇಲ ಮತ್ತು ಶ್ಯಾನುಭೋಗ ತಮ್ಮ ಕೆಲಸದಲ್ಲಿ ವಿಫಲವಾದರೆ ದಂಡ, ದೈಹಿಕ ಶಿಕ್ಷೆ ವಿಧಿಸಲಾಗುತ್ತಿತ್ತು. ಇವರಿಗೆ ಶಿಕ್ಷೆ ಕೊಡುವ ಅಧಿಕಾರ ಅಮಲ್ದಾರ್‌ನಿಗಿತ್ತು.

ಟಿಪ್ಪು ಆಡಳಿತವನ್ನು ಪಾರ್ಸಿ, ಕನ್ನಡ, ಮರಾಠಿ, ಭಾಷೆಯಲ್ಲಿ ನಡೆಸುತ್ತಿದ್ದ ಟಿಪ್ಪು ತನ್ನ ಅಧಿಕಾರಿಗಳಿಂದ ಹೆಚ್ಚಿನ ಮಟ್ಟದ ಪ್ರಾಮಾಣಿಕತೆಯನ್ನು ಅಪೇಕ್ಷಿಸುತ್ತಿದ್ದ. ಓಪ್ಪು ಅಧಿಕಾರಿಗಳನ್ನು ಶ್ರೀರಂಗಪಟ್ಟಣಕ್ಕೆ ಕರೆಸಿ ತಾವು ಲಂಚ ಸ್ವೀಕರಿಸುವುದಿಲ್ಲದೆಂತಲೂ, ತಮ್ಮ ಕೆಲಸವನ್ನು ಪ್ರಾಮಾಣಿಕತೆಯಿಂದ ಮಾಡುವುದಾಗಿ ಪ್ರಮಾಣ ಮಾಡುವಂತೆ ಹೇಳುತ್ತಿದ್ದ. ಹೀಗೆ ಭಾರತದ ಇತರೆ ರಾಜರುಗಳಗಿಂತ ಭಿನ್ನ ಮತ್ತು ವಿಶಿಷ್ಟ ಆಡಳಿತ ಸುಧಾರಣೆಗಳನ್ನು ಜಾರಿಗೆ ತಂದ ಟಿಪ್ಪು ಸುಲ್ತಾನ್ ಸಮರ್ಥ ಹಾಗೂ ದಕ್ಷ ಆಡಳಿತಗಾರನಾಗಿ ಮೈಸೂರು ರಾಜ್ಯಕ್ಕೆ ಕೀರ್ತಿ ತಂದ.

**ಕಂದಾಯ ಆಡಳಿತ**

ಟಿಪ್ಪು ಕಾಲದಲ್ಲಿ ಮೈಸೂರು ರಾಜ್ಯ ಉತ್ತರದಲ್ಲಿ ಧಾರವಾಡ, ಕಿತ್ತೂರು, ದಕ್ಷಿಣದಲ್ಲಿ– ಈರೋಡ್, ದಿಂಡಿಗಲ್, ಪಶ್ಚಿಮದಲ್ಲಿ – ಕಾರವಾರ, ಮಂಗಳೂರು, ಪೂರ್ವದಲ್ಲಿ– ಸಮುದ್ರದವರೆಗೆ ಹಬ್ಬಿತ್ತು. ಟಿಪ್ಪು ಮೈಸೂರಿನ ಸುಲ್ತಾನನಾಗುವ ಮುಂಚೆಯೇ ಮಳವಳ್ಳಿ, ಕೊಣನೂರು, ಧರ್ಮಪುರಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದಾಗಲೇ ಕಂದಾಯದ ವಿಷಯವಾಗಿ ತಿಳಿದಿದ್ದ. ಇದು ಅವನು ರಾಜನಾದ ಮೇಲೆ ತುಂಬಾ ಅನುಕೂಲವಾಯ್ತು. ಟಿಪ್ಪು ಕಂದಾಯದ ಮೂಲ ಕೃಷಿ ಭೂಮಿ ಎಂದು ತಿಳಿದಿದ್ದು, ಭೂಮಿಯನ್ನು ಬೆಜ್ಜಲು ಭೂಮಿ, ಗದ್ದೆ, ಪಾಳುಭೂಮಿ, ಬಂಜರುಭೂಮಿ, ಬೆಟ್ಟತಿಟ್ಟು ಎಂದು ವಿಭಾಗಿಸಿದ್ದು, ಭೂಮಿಯನ್ನು ಅಳತೆ ಮಾಡಿಸಿ, ಅಲ್ಲಿಯ ಬೆಳೆಯುವ ಫಸಲಿನ ಆಧಾರದ ಮೇಲೆ ಕಂದಾಯ ನಿಗದಿಪಡಿಸಿದ್ದ.

ಕಂದಾಯ ಕ್ಷೇತ್ರದಲ್ಲಿ ಟಿಪ್ಪು ಹೆಚ್ಚು ದಕ್ಷತೆ ತಂದು, ರೈತ ತಾನು ಬೇಸಾಯ ಮಾಡುವವರೆಗೂ ಕಂದಾಯ ಕೊಡಬೇಕಿತ್ತು. ರೈಅ ತಾನು ಬೇಸಾಯ ಮಾಡುವುದನ್ನು ಬಿಟ್ಟಾಗ ಆ ಭೂಮಿಯನ್ನು ಸರ್ಕಾರ ಬೇರೆಯವರಿಗೆ ವಹಿಸಿಕೊಡುತ್ತಿತ್ತು. ಟಿಪ್ಪುವಿನ ರಾಜ್ಯದಲ್ಲಿ ೩೦,೦೦೦ ಚದರ ಮೈಲಿ ಕೃಷಿ ಪ್ರದೇಶವಿದ್ದು, ಹತ್ತಿ, ಕಾಫಿ, ಅಡಿಕೆ, ಜೋಳ ಮುಂತಾದ ಬೆಳೆ ಬೆಳೆಯಲಾಗುತ್ತಿತ್ತು. ಸಾಮಾನ್ಯವಾಗಿ ರಾಗಿ, ಕಬ್ಬು, ಭತ್ತ, ರೇಷ್ಮೆ, ಎಣ್ಣೆಕಾಳುಗಳು, ಕಡಲೆಕಾಯಿ, ದ್ವಿದಳ ಧಾನ್ಯ ಮುಂತಾದವುಗಳನ್ನು ಬೆಳೆಯುತ್ತಿದ್ದು, ರೈತರಿಗೆ ಹೆಚ್ಚು–ಹೆಚ್ಚು

ಸವಲತ್ತನ್ನು ಟಿಪ್ಪು ನೀಡುತ್ತಿದ್ದು, ಭೂಮಿ ಮತ್ತು ಬೆಳೆಗೆ ಅನುಗುಣವಾಗಿ 1/6 ಭಾಗ ಕಂದಾಯವನ್ನು ವಸೂಲಿ ಮಾಡುತ್ತಿದ್ದು, ಅಮುಲ್ದಾರ್ ಕಂದಾಯ ನಿಗದಿಪಡಿಸುತ್ತಿದ್ದ. ಕಂದಾಯ ಇಲಾಖೆಯಲ್ಲಿ ಲಂಚ ನಿರ್ಮೂಲನ ಮಾಡಿದ್ದು, ಅಧಿಕಾರಿಗಳಿಗೆ ಆಕರ್ಷಕ ಸಂಬಳ ನಿಗಧಿಯಾಗಿತ್ತು. ಅಲ್ಲದೆ ಸಾಮ್ರಾಜ್ಯದಲ್ಲಿನ ಪಾಳು ಜಮೀನು, ಅನಧಿಕೃತವಾದ ಇನಾಂ ಜಮೀನು, ಜಮೀನ್ದಾರರು ಅನುವಂಶಿಕವಾಗಿ ಹೊಂದಿದ್ದ ಜಮೀನನ್ನು ಸ್ವಾಧೀನಪಡಿಸಿಕೊಂಡು ಜಮೀನುರಹಿತ ರೈತರು ಹಾಗೂ ಬಡರೈತರಿಗೆ ಹಂಚಿದ. ಇದರಿಂದ ಕಂದಾಯ ಹೆಚ್ಚಾಗಿ 1792 ರಲ್ಲಿ ಕಂದಾಯ ಸಂಗ್ರಹ 2 ಕೋಟಿಯಾಗಿತ್ತು.

**ಹಣಕಾಸು ಆಡಳಿತ**

ಕಂದಾಯ ಆಡಳಿತದಂತೆಯೇ ಟಿಪ್ಪು ಹಣಕಾಸು ಆಡಳಿತ ಬಹಳ ದಕ್ಷವಾಗಿತ್ತು. ಟಿಪ್ಪು ಹಣಕಾಸು ವ್ಯವಹಾರದ ಬಗ್ಗೆ ವೈಯಕ್ತಿಕವಾಗಿ ಆಸಕ್ತಿ ಹೊಂದಿದ್ದ. ರಾಜ್ಯದ ಹಣಕಾಸು ಸ್ಥಿತಿ ಸುಧಾರಿಸಲೆಂದು ಹೊಸ ಕಂದಾಯ ನೀತಿ ಜಾರಿಗೊಳಿಸಿ, ಹೊಸ ನಾಣ್ಯಪದ್ಧತಿ ಜಾರಿಗೊಳಿಸಿ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯವನ್ನು ರಕ್ಷಿಸುತ್ತಿದ್ದರು.

ಶ್ರೀರಂಗಪಟ್ಟಣ, ಬಿದನೂರು, ಗುತ್ತಿ, ಚಿತ್ರದುರ್ಗ, ಕಲ್ಲಿಕೋಟೆ, ಸತ್ಯಮಂಗಲ, ದಿಂಡಿಗಲ್ಲು, ಗುರ್ರಮಕೊಂಡ, ಧಾರವಾಡ, ಮೈಸೂರುಗಳಲ್ಲಿ ಟಂಕಶಾಲೆಗಳಿದ್ದವು. ಚಿನ್ನದ ನಾಣ್ಯಗಳ ಮೇಲೆ ತನ್ನ ತಂದೆಯ ಹೆಸರು  ಅಕ್ಷರವಿದೆ. ಟಿಪ್ಪು 2, 1, 1/2 , 1/4 ರೂಪಾಯಿ ಬೆಳ್ಳಿ ನಾಣ್ಯಗಳನ್ನು ಚಲಾವಣೆಗೆ ತಂದ 2, 1, 1/2 , 1/4 ಪೈಸೆಯ ತಾಮ್ರದ ನಾಣ್ಯಗಳ ಚಲಾವಣೆಗೆ ತಂದ.

**ನ್ಯಾಯಾಡಳಿತ**

ಟಿಪ್ಪು ನ್ಯಾಯಾಂಗದ ಮುಖ್ಯಸ್ಥನಾಗಿದ್ದು, ರಾಜ್ಯದ ಎಲ್ಲರಿಗೂ ಒಂದೇ ರೀತಿಯ ನ್ಯಾಯ ದೊರಕಿಸಿಕೊಡುತ್ತಿದ್ದ. ಎಲ್ಲಾ ಅಧಿಕಾರಿಗಳು, ಪ್ರಜೆಗಳೂ ನ್ಯಾಯಯುತವಾಗಿ ಬದುಕಬೇಕೆಂಬುದು ಟಿಪ್ಪುವಿನ ಅಭಿಲಾಷೆಯಾಗಿತ್ತು. ಚಿಕ್ಕವರಿರಲಿ, ದೊಡ್ಡವರಿರಲಿ, ಎಲ್ಲರೂ ಸತ್ಯ ಮತ್ತು ನ್ಯಾಯದಿಂದಿರಬೇಕೆಂದು ಟಿಪ್ಪು ಬಯಸುತ್ತಿದ್ದ.

ಅವನ ನ್ಯಾಯಾಂಗ ವ್ಯವಸ್ಥೆ ನಗರ ಮತ್ತು ಗ್ರಾಮಗಳಲ್ಲಿ ಜಾರಿಯಲ್ಲಿತ್ತು. ನಗರಗಳಲ್ಲಿ ಅಸಫ್‌ದಾರ, ಅಮುಲ್ದಾರ, ಖಾಜಿ, ಪಂಡಿತ ಇದ್ದು, ಹಿಂದೂ-ಮುಸಲ್ಮಾನರ ಧರ್ಮಕ್ಕನುಣವಾಗಿ ವಿವಾದ ಬಗೆಹರಿಸುತ್ತಿದ್ದರು. ಈ ನ್ಯಾಯಾಲಯಗಳಲ್ಲಿ ಅತೃಪ್ತಿಯುಂಟಾದವರು

ಶ್ರೀರಂಗಪಟ್ಟಣದಲ್ಲಿದ್ದ ಮುಖ್ಯ ನ್ಯಾಯಾಲಯಕ್ಕೆ ಮನವಿ ಸಲ್ಲಿಸಬಹುದಾಗಿತ್ತು. ಉಚ್ಚನ್ಯಾಯಾಲಯವೆಂದರೆ ಸುಲ್ತಾನನೇ ಆಗಿದ್ದ.

ಅಂತಿಮ ತೀರ್ಪು ನೀಡಿದ ನಂತರ ಯಾವುದೇ ರೀತಿ ದಯೆ ತೋರಿಸಬಾರದೆಂಬುದು ಟಿಪ್ಪುವಿನ ಅಭಿಮತವಾಗಿತ್ತು. ಕಾನೂನನ್ನು ಗೌರವಿಸಬೇಕು. ಕಾನೂನು ಪ್ರಕಾರವಲ್ಲದೆ, ಬೇರೆ ಯಾವುದೇ ರೀತಿ ಯಾವುದೇ ವ್ಯಕ್ತಿಯನ್ನು ಶಿಕ್ಷಿಸಕೂಡದು ಎಂಬುದು ಟಿಪ್ಪುವಿನ ಅಭಿಮತವಾಗಿತ್ತು. ಅಂದು ಕೊಡುತ್ತಿದ್ದ ಶಿಕ್ಷೆಗಳೆಂದರೆ ಕೊಲೆಗಾರನಿಗೆ ನೇಣು ಹಾಕಲಾಗುತ್ತಿತ್ತು. ತಪ್ಪು ಮಾಡಿದವರಿಗೆ ಆನೆ ಕಾಲಿಗೆ ಕಟ್ಟಿ ಎಳೆಸುವುದು, ಕಿವಿ, ಮೂಗು, ಕೈ, ಕಾಲು ಕತ್ತರಿಸುವುದು, ಚಾವಟಿಯಿಂದ ಹೊಡೆಯುವುದು ಮುಂತಾದವು.

**ಸೇನಾಡಳಿತ**

ಟಿಪ್ಪು ಸೈನ್ಯವನ್ನು ಆಧುನಿಕಗೊಳಿಸುವಲ್ಲಿ ಬಹಳ ಆಸಕ್ತಿಯುಳ್ಳವನಾಗಿದ್ದು, ಇವನ ಸೈನ್ಯ ಷೇಕ್ಸ್, ಸೈಯದ್ಸ್, ಮತ್ತು ಪಠಾಣರು ಎಂಬ ಮೂರು ವಿಭಾಗಗಳನ್ನು ಹೊಂದಿತ್ತು. ಯುರೋಪಿಯನ್ ಮಾದರಿಯನ್ನು ಸೈನ್ಯದಲ್ಲಿ ಅಳವಡಿಸಿಕೊಳ್ಳಲು ಫ್ರೆಂಚ್ ಇಂಜಿನಿಯರ್‌ಗಳನ್ನು ಬರಮಾಡಿಕೊಂಡಿದ್ದ. ಟಿಪ್ಪು ಶಸ್ತ್ರಾಸ್ತ್ರಗಳ ಕಾರ್ಖಾನೆಗಳನ್ನು ಚಿತ್ರದುರ್ಗ, ಮಧುಗಿರಿ, ಬಿದನೂರು, ಮಂಗಳೂರು, ಕನಕಪುರ, ಶ್ರೀರಂಗಪಟ್ಟಣಗಳನ್ನು ಸ್ಥಾಪಿಸಿದನು. ಅಲ್ಲಿ ವಿವಿಧ ವಿನ್ಯಾಸ ಹಾಗೂ ಗಾತ್ರಗಳ ಖಡ್ಗ, ಕೋವಿ, ಶಿರಸ್ತ್ರಾಣ, ಗುರಾಣಿ, ಕವಚ, ಚಾಕು, ಈಟಿ, ಪಿಸ್ತೂಲ್, ಸಿಡಿಮದ್ದು, ಫಿರಂಗಿ ತಯಾರಿಸಲಾಗುತ್ತಿತ್ತು. ಯುದ್ಧ ತಂತ್ರದಲ್ಲಿ ಕ್ಷಿಪಣಿ (ದೂರಕ್ಕೆ ಹಾರುವ ಬೆಂಕಿ ಬಾಣ) ಗಳನ್ನು ಭಾರತದಲ್ಲಿ ಮೊದಲಬಾರಿಗೆ ಹಾರಿಸಿದವನು ಟಿಪ್ಪು. ಬ್ರಿಟಿಷ್ ಅಧಿಕಾರಿ ಫ್ರಾನ್ಸಿಸ್ ಬುಕೆನಾನ್ ಹೇಳುವಂತೆ ಶಸ್ತ್ರಾಸ್ತ್ರ ತಯಾರಿಕೆಯಲ್ಲಿ ಮೈಸೂರು ಎರಡನೇ ಯುರೋಪ್ ಆಗಿತ್ತು. ಟಿಪ್ಪುವಿನಲ್ಲಿ 30,000 ಕಾಲ್ದಳ, 7000 ಅಶ್ವದಳ, 2000 ಫಿರಂಗಿದಳವಿತ್ತು.

ಹೈದರ್ ಆಲಿ ಕಾಲದಲ್ಲಿ ಆರಂಭವಾದ ನೌಕಾ ನಿರ್ಮಾಣ ಕಾರ್ಯ ಕಾಲದಲ್ಲಿ ಹೆಚ್ಚು ಪ್ರಗತಿ ಕಂಡಿತು. ಟಿಪ್ಪು ತನ್ನ ಆಳ್ವಿಕೆಯ ಕೊನೆಯ ದಿನ ನೌಕಾಪಡೆಯತ್ತ ಗಮನ ನೀಡಿದ. ಅವನು ಮೀರ್ ಆಮ್ ನೇತೃತ್ವದಲ್ಲಿ ನೌಕಾಪಡೆ ಏರ್ಪಡಿಸಿದ್ದ. ಮಂಗಳೂರು, ಭಟ್ಕಳ, ಕಾರವಾರ, ಗೋವಾಗಳಲ್ಲಿ ಹಡಗುಗಳ ನಿರ್ಮಾಣ ಕಾರ್ಯ ಆರಂಭವಾಯ್ತು. ಟಿಪ್ಪುವಿನ ಕಾಲದಲ್ಲಿ ಮಧ್ಯಮ ಪ್ರಮಾಣದ 40 ಯುದ್ಧ ನೌಕೆಗಳಿದ್ದವು. ಆದರೆ ನೌಕಾ ಕದನಗಳು ಸಂಭವಿಸಲೇ ಇಲ್ಲ. ಈ ನೌಕಾಪಡೆ ನಿರ್ವಹಣೆಯಲ್ಲಿ 100 ನಾವಿಕರು ಕಾರ್ಯನಿರತರಾಗಿದ್ದರು.

ಹೀಗೆ ಟಿಪ್ಪು ತನ್ನ ಸೈನ್ಯವನ್ನು ಸುಸಜ್ಜಿತಗೊಳಿಸಿಕೊಂಡಿದ್ದನು. ಅವನ ವೈಯಕ್ತಿಕ ಪರಾಕ್ರಮ ಧೈರ್ಯ ಅವನ ಸೈನ್ಯ ಪಡೆಗಳನ್ನು ವಿಶ್ವಾಸ ಮತ್ತು ಉತ್ಸಾಹಗಳಿಂದ ತುಂಬುತ್ತಿದ್ದವು. ಟಿಪ್ಪು ಸೈನ್ಯದ ಬಗ್ಗೆ ಕಳಕಳಿ ಹೊಮ್ಮಿದ್ದು, ಗಾಯಾಳುಗಳನ್ನು ನೋಡಿಕೊಳ್ಳುವ ವ್ಯವಸ್ಥೆ ಮಾಡಿದ್ದ. ಬಹುದೂರ ಪ್ರಯಾಣ ಮಾಡುತ್ತಿದ್ದ ಯೋಧರಿಗೆ ವಿಶ್ರಾಮ್ತಿ ನೀಡುತ್ತಿದ್ದ. ಯುದ್ಧದಲ್ಲಿ ಸತ್ತವರಿಗೆ ಪರಿಹಾರ ನೀಡುತ್ತಿದ್ದ. ಒಟ್ಟಾರೆ ಟಿಪ್ಪು ತನ್ನ ಸೈನಿಕರಿಗೆ ತುಂಬಾ ಜನಪ್ರಿಯನಾಗಿದ್ದನು.

**ವ್ಯಾಪಾರ ಮತ್ತು ವಾಣಿಜ್ಯ ಸುಧಾರಣೆ**

ಬ್ರಿಟಿಷ್ ಅಧಿಕಾರಿ ಮತ್ತು ಪ್ರವಾಸಿ ಬುಕೆನಾನ್ ಪ್ರವಾಸ ಕಥನದಲ್ಲಿ ಟಿಪ್ಪು ಮತ್ತು ಹೈದರ್ ಕಾಲದ ವ್ಯಾಪಾರ ಚಟುವಟಿಕೆ ಮತ್ತು ಉತ್ಪನ್ನಗಳ ಮಾಹಿತಿ ಇದೆ. 18ನೇ ಶತಮಾನದ ಅಂತ್ಯದ ವೇಳೆಗೆ ವ್ಯಾಪಾರ ಎಲ್ಲಾ ದಿಕ್ಕಿಗೂ ಗಣನೀಯ ಪ್ರಮಾಣದಲ್ಲಿ ಹರಡಿತ್ತು. ಅಂದು ಹೈದರಬಾದ್ ಮತ್ತು ಗುಜರಾತ್ ವ್ಯಾಪಾರಿಗಳು ಶಲುಗಳು, ಕೇಸರಿ, ಮುತ್ತುಗಳನ್ನು ತರುತ್ತಿದ್ದರು. ಕಲ್ಲಿಕೋಟೆ, ಮಹಾರಾಷ್ಟ್ರಗಳಿಂದ ಹತ್ತಿಯ ಸರಕುಗಳು, ರೇಷ್ಮೆ, ಮಸ್ಲಿನ್ ಬಟ್ಟೆ ಬರುತ್ತಿದ್ದವು. ಮೆಣಸು, ತಂಬಾಕು, ಅರಿಶಿಣ, ಧಾನ್ಯಗಳು ಮೈಸೂರಿನ ವ್ಯಾಪಾರದಲ್ಲಿ ಮುಖ್ಯವಾಗಿದ್ದವು.

ಟಿಪ್ಪು ಗಂಧದ ಮರ, ಅಡಿಕೆ, ಮೆಣಸು, ಏಲಕ್ಕಿ ಮುಂತಾದ ವಸ್ತುಗಳನ್ನು ಏಕಸ್ವಾಮ್ಯಕ್ಕೊಳಪಡಿಸಿದ್ದ. ಇವು ಹೆಚ್ಚಿನ ಆದಾಯ ಕೊಡುತ್ತಿದ್ದರಿಂದ ಇವುಗಳ ಮೇಲೆ ಟಿಪ್ಪು ಕಟ್ಟುನಿಟ್ಟಿನ ನೀತಿ ನಿಯಮ ಹೇರಿದ್ದ. ವಿದೇಶಿ ವ್ಯಾಪಾರದ ಅಭಿವೃದ್ಧಿಗೆ ವಾಣಿಜ್ಯ ಮಂಡಳಿ ಇದ್ದು, ಖಾಸಗಿ ವರ್ತಕರಿಗೆ ಬಾರಿ ರಿಯಾಯಿತಿ ಇದ್ದು, ಮೈಸೂರಿನ ಬಂದರುಗಳು ಅವರಿಗೆ ಮುಕ್ತವಾಗಿದ್ದವು. ಮಸ್ಕತ್, ಕಚ್, ಚೀನಾದಿಂದ ವ್ಯಾಪಾರಿಗಳು ತಮ್ಮ ಸಾಮಾನಿನೊಂದಿಗೆ ಮೈಸೂರಿಗೆ ಬರುತ್ತಿದ್ದರು.

ಟಿಪ್ಪುವಿನ ವಾಣಿಜ್ಯ ವ್ಯಾಪಾರದ ಪ್ರಮುಖ ವಿಶೇಷವೆಂದರೆ ಅವನ ಎಲ್ಲಾ ವೈರಿಗಳೊಂದಿಗೆ ವಿಶೇಷವಾಗಿ ಬ್ರಿಟಿಷರೊಂದಿಗೆ ವ್ಯಾಪಾರ ನಿರ್ಬಂಧ ಹೇರಿದ್ದ. ಸರ್ಕಾರದ ವತಿಯಿಂದ ದಾಸ್ತಾನು ಮಳಿಗೆಗಳನ್ನು ಸ್ಥಾಪಿಸಲಾಗಿತ್ತು. ಇವು ಮೈಸೂರಲ್ಲದೆ ಮಲಬಾರ್, ಕೊಯಮತ್ತೂರ್‌ಗಳಲ್ಲಿ ಇದ್ದವು. ಈ ಮಳಿಗೆಗಳಲ್ಲಿ ಅಡಿಕೆ, ಏಲಕ್ಕಿ, ಮೆಣಸುಗಳನ್ನು ಶೇಖರಿಸಲಾಗುತ್ತಿತ್ತು. ಟಿಪ್ಪು ಸ್ವತಃ ಮೈಸೂರಿನಲ್ಲಿ ತಯಾರಾದ ವಸ್ತುಗಳನ್ನು ಉಪಯೋಗಿಸುತ್ತಿದ್ದ ಹಾಗೂ ತನ್ನ ಅಧಿಕಾರಿಗಳಿಗೆ ಇದನ್ನೇ ಅನುಸರಿಸಲು ಹೇಳುತ್ತಿದ್ದ.

**ಕೈಗಾರಿಕೆಗಳು**

ಟಿಪ್ಪುವಿನ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೈಗಾರಿಕೆಗಳು ಸ್ಥಾಪನೆಯಾದವು. ಅಂದು ಮೈಸೂರು ಜವಳಿ ಉದ್ಯಮದ ಕೇಂದ್ರವಾಗಿತ್ತು. ಗುಬ್ಬಿ ಸೀರೆಗೆ ಪ್ರಖ್ಯಾತವಾಗಿತ್ತು. ಸತ್ಯ ಮಂಗಲದಲ್ಲಿ ೮೦೦ ಮಗ್ಗಗಳಿದ್ದವು. ಹರಿಹರ, ವೆಲ್ಲೂರು, ಕೊಯಮತ್ತೂರು ಪ್ರಮುಖ ಜವಳಿ ಕೇಂದ್ರಗಳಾಗಿದ್ದವು. ರೇಷ್ಮೆಗೆ ಮೈಸೂರು ಪ್ರಖ್ಯಾತವಾಗಿದ್ದು, ರಾಜ್ಯದಲ್ಲಿ21 ರೇಷ್ಮೆ ಕೇಂದ್ರಗಳಿದ್ದು, ಚನ್ನಪಟ್ಟಣ ರೇಷ್ಮೆಗೆ ಪ್ರಸಿದ್ಧವಾಗಿತ್ತು. ಚನ್ನಪಟ್ಟಣದಲ್ಲಿ ಗಾಜಿನ ಕಾರ್ಖಾನೆ ಇತ್ತು. ಮಧುಗಿರಿ, ದೇವರಾಯನ ದುರ್ಗ, ತುಮಕೂರುಗಳ್ಲಲಿ ಕಬ್ಬಿಣ ತಯಾರಿಸಲಾಗುತ್ತಿತ್ತು. ಶ್ರೀರಂಗಪಟ್ಟಣದಲ್ಲಿ ಬಂದೂಕು, ತುಪಾಕಿ, ಚಾಕು, ಕತ್ತರಿಗಳು, ಗೃಹಬಳಕೆಯ ಉಪಕರಣಗಳು ಗಡಿಯಾರಗಳನ್ನು ತಯಾರಿಸುತ್ತಿದ್ದರು. ಶ್ರೀರಂಗಪಟ್ಟಣದಲ್ಲಿ ಬಂದೂಕು, ತುಪಾಕಿ, ಚಾಕು, ಕತ್ತರಿಗಳು, ಗೃಹಬಳಕೆಯ ಉಪಕರಣಗಳು ಗಡಿಯಾರಗಳನ್ನು ತಯಾರಿಸುತ್ತಿದ್ದರು. ಶ್ರೀರಂಗಪಟ್ಟಣದಲ್ಲಿ ಸಕ್ಕರೆ, ಬೆಲ್ಲದ ಕೈಗಾರಿಕೆಗಳಿದ್ದವು. ದೇವನಹಳ್ಳಿಯಲ್ಲಿ ಚೀನಿಯರನ್ನು ಬಳಸಿಕೊಂಡು ಉತ್ತಮ ದರ್ಜೆಯ ಸಕ್ಕರೆ ತಯಾರಿಸಲಾಗುತ್ತಿತ್ತು. ಟಿಪ್ಪುವಿಗೆ ಮುತ್ತಿನ ಕೈಗಾರಿಕೆ ಪ್ರಿಯವಾಗಿತು. ಮೈಸೂರಿನಲ್ಲಿ ಸಿಡಿಮದ್ದು ಕಾರ್ಖಾನೆ, ಎಣ್ಣೆ ಉದ್ಯಮ ಸಾಮಾನ್ಯವಾಗಿತ್ತು.

**ಸಾಮಾಜಿಕ ಸುಧಾರಣೆಗಳು**

ಟಿಪ್ಪುಸುಲ್ತಾನ್ ತನ್ನ ಜನರ ನೈತಿಕತೆ ಹಾಗೂ ಸುಸ್ಥಿತಿಗೆ ವಿಶೇಷ ಗಮನ ನೀಡಿದ. ಯುವ ಪೀಳಿಗೆಯ ಶೀಲ ಸಂವರ್ಧನೆಗೆ ಪ್ರಾಮುಖ್ಯತೆ ನೀಡಿದ. ಮೈಸೂರೇಕೆ ಇಡೀ ದಕ್ಷಿನ ಭಾರತದಲ್ಲಿ ಪಾನ ನಿಷೇಧ ಜಾರಿಗೆ ತಂದ ಮೊಟ್ಟಮೊದಲ ದೊರೆ ಟಿಪ್ಪು. ಫ್ರೆಂಚರನ್ನು ಬಿಟ್ಟು ಇನ್ಯಾರು ಮಧ್ಯಪಾನ ಮಾಡುವಂತಿರಲಿಲ್ಲ. ಈ ಕಸುಬಿನಲ್ಲಿ ನಿರತವಾದ ಜನರಿಗೆ ಬೇರೆ ಉದ್ಯೋಗ ಕಲ್ಪಿಸಿದ.

ನಾಡಿನ ಪರಂಪರೆಗಳು ಮತ್ತು ಪದ್ಧತಿಗಳನ್ನು ಪಾಲಿಸುವ ಬಗ್ಗೆ ಟಿಪ್ಪು ಉತ್ಸಾಹದಿಂದಿದ್ದ. ಜನತೆಯ ಅನಾಗರೀಕ ಅಭ್ಯಾಸಗಳನ್ನು ಕಟುವಾಗಿ ಖಂಡಿಸಿದ. ಮಲಬಾರ್‌ನ ಒಮ್ದು ಬುಡಕಟ್ಟಿನ ಜನ ತಮ್ಮ ಸ್ತನಗಳನ್ನು ಮುಚ್ಚಿಕೊಳ್ಳದೆ ಓಡಾಡುತ್ತಿದ್ದುದನ್ನು ಗಮನಿಸಿ, ಅದನ್ನು ಖಂಡಿಸಿದ. ಅವನ ಸಾಮಾಜಿಕ ಸುಧಾರಣೆಗಳು ಎಲ್ಲಾ ಜನರಿಗೂ ಲಾಭದಾಯಕವಾಗಿದ್ದವು. ಬಡವರ ಶಿಕ್ಷಣ, ವಿವಾಹ, ವಿಶ್ರಾಂತಿ ಗೃಹಗಳಿಗೆ, ಅನಾಥಾಶ್ರಮಗಳಿಗೆ ಹಲವಾರು ಕೊಡುಗೆ ನೀಡಿ ಅಶಕ್ತರಿಗೆ ಟಿಪ್ಪು ದಾರಿದೀಪವಾದ.

**ಮುಮ್ಮಡಿ ಕೃಷ್ಣರಾಜ ಒಡೆಯರ್ (ಕ್ರಿ.ಶ.1799–1831)**

ಈತನು ಸಿಂಹಾಸನವನ್ನೇರಿದಾಗ ಕೇವಲ ಐದು ವರ್ಷದ ಬಾಲಕ. ಆದ್ದುದರಿಂದ ಬ್ರಿಟಿಷರಿಂದ ನೇಮಿಸಲ್ಪಟ್ಟ ಪೂರ್ಣಯ್ಯನವರು 1811 ರ ವರೆಗೆ ದಿವಾನರಾಗಿ ಮೈಸೂರು ಸಂಸ್ಥಾನದ ಆಡಳಿತವನ್ನು ನಿರ್ವಹಿಸಿದರು. 1820 ರಲ್ಲಿ ಕಾಣಿಸಿಕೊಂಡ ಆರ್ಥಿಕ ಪರಿಸ್ಥಿತಿ ಹಾಗೂ ನಗರ ವಿಭಾಗದ, ದಂಗೆ 1831 ಆಡಳಿತವನ್ನು ನೇರವಾಗಿ ವಹಿಸಿಕೊಳ್ಳಲು ಬ್ರಿಟಿಷರನ್ನು ಪ್ರೇರೇಪಿಸಿತು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅಸಮರ್ಥರೆಂದು ಆಪಾದಿಸಲಾಯಿತು. 1831–1881 ರವರೆಗಿನ ಐವತ್ತು ವರ್ಷಗಳ ಕಾಲ ಬ್ರಿಟಿಷರು ಮೈಸೂರು ಸಂಸ್ಥಾನವನ್ನು ನೇರ ಆಳ್ವಿಕೆಗೆ ಒಳಪಡಿಸಿದರು. ಮೈಸೂರು ಇತಿಹಾಸದಲ್ಲೇ ಈ ಕಾಲವನ್ನು ಕಮಿಷನರ್‌ಗಳ ಆಳ್ವಿಕೆಯ ಕಾಲವೆಂದು ಕರೆಯಲಾಗಿದೆ. ಮುಮ್ಮಡಿ ಕ್ರುಷ್ಣರಾಜ ಒಡೆಯರಿಗೆ ವಾರ್ಷಿಕವಾಗಿ ಒಂದು ಲಕ್ಷ ವರಹಗಳನ್ನು ಮಾಶಾಸನವಾಗಿ ನೀಡಲಾಗಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಹಾಸನ ಜಿಲ್ಲೆಗೆ ಸೇರಿದಂತೆ ಅನೇಕ ಸುಧಾರಣೆಗಳನ್ನು ಜಾರಿಗೆ ತಂದಿದ್ದಾನೆ. ಹಾರನ ಹಳ್ಳಿಯ ಕಂಠೀರವ ನರಸರಾಜ ಒಡೆಯರ್ ಪ್ರಾರಂಭಿಸಿದ್ದ ಪರಮಾನಂದ ವೇದಿಕೆಯ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಿಂತು ಹೋಗಿದ್ದು, ಅದನ್ನು ಮುಂದುವರೆಸಲು ಮುಮ್ಮಡಿ ಕೃಷ್ಣರಾಜ ಒಡೆಯರ್ ಕ್ರಿ.ಶ.1817 ರಲ್ಲಿ ಎರಡು ಹಳ್ಳಿಗಳನ್ನು ದಾನ ಮಾಡಿದ್ದಾರೆ.[78] ಒಟ್ಟಿನಲ್ಲಿ ಹೇಳುವುದಾದರೆ, ಹೊಯ್ಸಳರ ಕಾಲದಲ್ಲಿ ಪ್ರಾಂತೀಯ ರಾಜಧಾನಿಯಾಗಿ ಮೆರೆದ ಹಾಸನ ಜಿಲ್ಲೆಯ ಕೆಲವು ಭಾಗಗಳು ನಂತರ ಪತನದೊಂದಿಗೆ ಇಳಿಮುಖವನ್ನು ಕಂಡವು. ಚನ್ನಪಟ್ಟಣದ ಜಗದೇವರಾಯ, ತರೀಕೆರೆ, ಚಿಕ್ಕನಾಯಕನಹಳ್ಳಿಯ ಪಾಳೇಗಾರರು, ಇಕ್ಕೇರಿಯ ಶಿವಪ್ಪನಾಯಕ, ಸೋಮಶೇಕರನಾಯಕ, ಬಿಜಾಪುರದ ಸುಲ್ತಾನರು, ಚಿತ್ರದುರ್ಗದ ಪಾಳೇಗಾರರು, ಸಿರಾದ ನವಾಬರು, ಮೈಸೂರು ಒಡೆಯರ್ ಆಳ್ವಿಕೆ ಮಾಡುತ್ತಿದ್ದ ಪ್ರಾಂತ್ಯಗಳು ಮರಾಠರ ಮೇಲಾಟದಲ್ಲಿ ಸಿಕ್ಕಿ ಸಣ್ಣಸಣ್ಣ ಪ್ರಾಂತ್ಯಗಳಾದವು. ಮರಾಠಿಗರ ದಾಳಿಗೆ ಬೆದರಿ ಕಪ್ಪತೆತ್ತು ಸಾಕಾಗಿದ್ದ ಮೈಸೂರು ಅರಸರು ಕಪ್ಪದ ಹೊರೆ ತೀರುವವರೆಗೆ ಒಟ್ಟೆ ಇಟ್ಟ ಗ್ರಾಮಗಳಲ್ಲಿ ಹಾಸನ ಜಿಲ್ಲೆಯ ಅರಸೀಕೆರೆಯು ಸಹ ಸೇರಿತ್ತು.[79]

**ಚಾಮರಾಜೇಂದ್ರ ಒಡೆಯರ್**

ಇವರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ದತ್ತುಪುತ್ರ. 1881 ರಲ್ಲಿ ಸಂಸ್ಥಾನದ ಆಳ್ವಿಕೆಯ ಅಧಿಕಾರವನ್ನು ಮರಳಿ ಪಡೆದರು. ನಂತರ ಚಾಮರಾಜ ಒಡೆಯರ್‌ರವರು 1881, 198 ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ, ಬ್ರಿಟಿಷರ ಆಡಳಿತ ಪದ್ಧತಿಯನ್ನು ಮುಂದುವರೆಸಿದರು.

ಇವರ ಸಹಾಯಕ್ಕಾಗಿ ಒಬ್ಬ ದಿವಾನ ಇಬ್ಬರು ಸದಸ್ಯರಿರುವ ಒಂದು ಸಲಹಾ ಮಂಡಳಿಯನ್ನು ನೇಮಿಸಲಾಯಿತು.

ಚಾಮರಾಜ ಒಡೆಯರ ನಂತರ ನಾಲ್ವಡಿ ಕೃಷ್ಣರಾಜ ಒಡೆಯರ್ (1895–1940) ಮೈಸೂರು ಸಂಸ್ಥಾನದ ಮಹಾರಾಜರಾಗಿ ಅಧಿಕಾರ ನಡೆಸಿದರು. ಇವರು ನಾಲ್ಕು ದಶಕಗಳ ಕಾಲ ರಾಜ್ಯ ಬಾರ ನಡೆಸಿರುತ್ತಾರೆ. ಅನೇಕ ಸುಧಾರಣೆಗಳನ್ನು ಜಾರಿಗೆ ತಂದಿದ್ದಾರೆ. ಇವರ ನಂತರ ಶ್ರೀ ಜಯಚಾಮರಾಜ ಒಡೆಯರ್ ಮೈಸೂರು ಸಂಸ್ಥಾನದ ರಾಜರಾದರು. 1940 ರಿಂದ 1947 ರವರೆಗೆ ರಾಜ್ಯವಾಳಿದ ಇವರು ವಿದ್ವಾಂಸರಾಗಿದ್ದು, ಜನನಾಯಕರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದರು. ಇವರ ಕಾಲದಲ್ಲಿ ಅನೇಕ ಕಡೆ ಒಳ್ಳೆಯ ಕೆಲಸಗಳಾಗಿವೆ. 1947 ರಲ್ಲಿ ಆಗಸ್ಟ್‌ನಲ್ಲಿ ಭಾರತ ಸ್ವಾತಂತ್ರ್ಯಗಳಿಸಿದಾಗ ಮೈಸೂರು ಸಂಸ್ಥಾನ ಭಾರತ ಒಕ್ಕೂಟದಲ್ಲಿ ಸೇರಿಸಲಾಯಿತು. ಮೈಸೂರು ಒಡೆಯರ ಆಳ್ವಿಕೆ ಕೊನೆಗೊಂಡು ರಾಜಪ್ರಭುತ್ವವಾಯಿತು.

ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆ ಮೈಸೂರು ಸಂಸ್ಥಾನದಲ್ಲಿ ಜಾರಿಗೆ ಬಂದಿತು. ಮೈಸೂರು ರಾಜ್ಯವನ್ನು ಬಿಟ್ಟು ಹೋಗಿದ್ದ ಕನ್ನಡ ಭಾಷೆಯನ್ನಾಡುವ ಎಲ್ಲಾ ಭಾಗಗಳನ್ನು 1956 ರಲ್ಲಿ ಮೈಸೂರು ರಾಜ್ಯದಲ್ಲಿ ಸೇರಿಸಲಾಯಿತು. ಹಾಸನ ಜಿಲ್ಲೆಯು ಇದರಲ್ಲಿ ಸೇರಿತ್ತು. ಇದರಿಂದ ಹಾಸನ ಜಿಲ್ಲೆಯು ಹಲವು ರಾಜವಂಶಗಳ ಪರಂಪರೆಯನ್ನು ಮೈಗೂಡಿಸಿಕೊಂಡು ಬೆಳವಣಿಗೆ ಯಾಗಿರುವುದನ್ನು ಕಾಣಬಹುದಾಗಿದೆ.[೮೦]

## ಅಡಿಟಿಪ್ಪಣಿಗಳು

1. ಹಾಸನ ಜಿಲ್ಲೆಯ ಗೆಜೆಟಿಯರ್
2. Poonacha K.P. 1990, Archeology of Malnad Region unpublished Ph.D. thesis ಪುಟ–62
3. ಅದೇ ಪುಟ 61
4. ಲಲಿತಾಂಬ ಎನ್. ಆರ್. ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು 2011– ಪುಟ.17.
5. Poonacha K.P. 1990, Archeology of Malnad Region unpublishedPh.D. thesis ಪುಟ–61
6. ಅದೇ ಪುಟ 55
7. ಅದೇ ಪುಟ 59
8. ಡಾ.ರಾಮದಾಸರೆಡ್ಡಿ–2009, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಒಂದು ಅಧ್ಯಯನ, ಪುಟ–127
9. ಟಿಬೆಟಿಯನ್ ಇತಿಹಾಸಕಾರ ತಾರನಾಥ ಮತ್ತು ತಮಿಳು ಕವಿ ಮಾಮೂಲರ್‌ರವರ ಬರಹದ ಪ್ರಕಾರ ದಕ್ಷಿಣ ಭಾರತದ ಕರ್ನಾಟಕದ ಬಿಂದುಸಾರನ ಆಡಳಿತಕ್ಕೆ ಒಳಪಟ್ಟಿದ್ದಿತೆಂದು ತಿಳಿದುಬರುತ್ತದೆ.
10. ಬಿ.ಎಲ್.ರೈಸ್ ಮತ್ತು ಎ.ಇಂ. ಸಂ.–8 ಎಫ್ ಕೀಲ್ಹಾನ್.
11. ಫ್ಲೀಟ್‌ರವರ ಗಂಗರ ಬಹುಪಾಲು ತಾಮ್ರಶಾಸನಗಳು ಐತಿಹಾಸಿಕ ಪುರಾವೆಗಳಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.
12. ಇತಿಹಾಸ ವಿದ್ವಾಂಸರುಗಳಾದ ಡಾ.ಎಸ್.ನೀಲಕಂಠಶಾಸ್ತ್ರಿ ಮತ್ತು ಡಾ.ಎಸ್.ನಾಗರಾಜು ರವರು ಅಭಿಪ್ರಾಯ ಪಡುತ್ತಾರೆ
13. ಕರ್ನಾಟಕದ ಕೈಪಿಡಿ– ಕರ್ನಾಟಕ ಗ್ಯಾಜೆಟಿಯರ್ ಇಲಾಖೆ ಬೆಂಗಳೂರು, ಪುಟ ಸಂಖ್ಯೆ–77.
14. ಅದೇ ಪುಟ 77
15. ಎ.ಕ.ಸಂ.10 (ಪರಿ) ಚೆನ್ನರಾಯಪಟ್ಟಣ ಶಾ.ಸಂ. 62 ಕಕ್ಕೀಹಳ್ಳಿ
16. ಎ.ಕ.ಸಂ.7 (ಪರಿ) ನಾಗಮಂಗಲ ಶ.ಸಂ.149, ದೇವರಹಳ್ಳಿ ಕ್ರಿ.ಶ.776–777)
17. ಎ.ಕ.ಸಂ.10– (ಪರಿ) ಅರಸೀಕರೆ, ಶಾ.ಸಂ. 203, ಗಂಡಸಿ (ಕ್ರಿ.ಶ.216–843)

18. ಗೋಪಾಲ್ ಆರ್ (ಸಂಪಾದಕರು) ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ನಿವೇಶನಾಲಯ, ಮೈಸೂರು 2010, ಪು.664.

19. ಎ.ಕ.ಸಂ. 10 (ಪರಿ) ಅರಸೀಕೆರೆ ಶಾ.ಸಂ.316, ಕ್ರಿ.ಶ. 9ನೇ ಶತಮಾನ

20. ಎ.ಕ.ಸಂ. 10 (ಪರಿ) ಚನ್ನರಾಯಪಟ್ಟಣ ಶಾಸನ ಸಂಖ್ಯೆ 128 ಮತ್ತು 102 ಕ್ರಿ.ಶ. (971-972)

21. ಅದೇ (ಅರಸೀಕೆರೆ) ಶಾಸನ 284 ನೇರ್ಲಗೆ (ಕ್ರಿ.ಶ.971-972)

22. ಲಲಿತಾಂಬ ಎನ್.ಆರ್. ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು-2011, ಪು.20

23. ಎ.ಕ.ಸಂಪುಟಗಳು, ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಶಾಸನಗಳು, ಅಧ್ಯಯನದಿಂದ ವಿಚಾರವನ್ನು ತಿಳಿಸಲಾಗಿರುತ್ತದೆ

24. ಕನ್ನಡ ವಿಶ್ವಕೋಶ, ಸಂಪುಟ ಏಳು, ಮೈಸೂರು ವಿಶ್ವವಿದ್ಯಾನಿಲಯ 1974.

25. ಅದೇ ಪು.ಸಂ. 595.

26. ಎ.ಕ.ಸಂ. 8- ಅರಕಲಗೂಡು ತಾಲ್ಲೂಕು ಶಾಸನ ಸಂಖ್ಯೆ 140.

27. MAR (1925) Page 14.

28. ಡಾ.ಎಚ್.ಎಸ್. ಗೋಪಾಲ್‌ರಾವ್ ರವರ ನಮ್ಮನಾಡು ಕರ್ನಾಟಕ, ಪು.49

29. ಅದೇ ಪುಟ-62.

30. ಎ.ಕ.ಸಂ. 9 ಬೇಲೂರು ತಾಲ್ಲೂಕಿನ ಶಾಸನಗಳಲ್ಲಿ ವಿಚಾರಗಳು ತಿಳಿದುಬರುತ್ತದೆ.

31. ಎ.ಕ.ಸಂ.9, ಬೇಲೂರು ತಾಲ್ಲೂಕಿನ ಶಾಸನ ಸಂಖ್ಯೆ 341.

32. ಎ.ಕ.ಸಂ.9, ಬೇಲೂರು ತಾಲ್ಲೂಕಿನ ಶಾಸನ ಸಂಖ್ಯೆ 191

33. ಬೇಲೂರು ತಾಲ್ಲೂಕು ಶಾಸನ ಸಂಖ್ಯೆಗಳು 190, 245, 249, 408 ನೇ ಶಾಸನಗಳೇ ಆಗಿವೆ.

34. ಬೇಲೂರು ತಾಲ್ಲೂಕು ಶಾಸನ ಸಂಖ್ಯೆಗಳು 190 ಮತ್ತು 191 ರ ಶಾಸನದಿಂದ ಪಾಠ ತಿಳಿದುಬರುತ್ತದೆ.

35. ಬೇಲೂರು ತಾಲ್ಲೂಕು ಶಾಸನ ಸಂಖ್ಯೆಗಳು 245

36. ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕಿನ ಶಾಸನ ಸಂಖ್ಯೆ 140

37. ಅರಸೀಕೆರೆ ತಾಲ್ಲೂಕು ಶಾಸನ ಸಂಖ್ಯೆ-114

38. ಅರಸೀಕೆರೆ ತಾಲ್ಲೂಕಿನ ಶಾಸನ ಸಂಖ್ಯೆ-60

39. ಅರಸೀಕೆರೆ ತಾಲ್ಲೂಕಿನ ಶಾಸನ ಸಂಖ್ಯೆ-149

40. ಚೆನ್ನರಾಯಪಟ್ಟಣ ತಾಲ್ಲೂಕಿನ ಶಾಸನ ಸಂಖ್ಯೆ–52

41. ಅರಸೀಕೆರೆ ತಾಲ್ಲೂಕಿನ ಶಾಸನ ಸಂಖ್ಯೆ–92

42. ಎ.ಕ.ಸಂ.–11, ಶಾಸನ ಸಂಖ್ಯೆ–16, ಪು.11.

43. ಎ.ಕ.ಸಂ.–11, ಶಾಸನ ಸಂಖ್ಯೆ–15, ಪು.11.

44. ವಿಲಿಯಂ ಕೋಹಿಲೋ, ಹೊಯ್ಸಳ ವಂಶ, ಪು.257.

45. ಸಕಲೇಶಪುರ ಶಾಸನ ಸಂಖ್ಯೆ 3.

46. ಚಾವುಂಡರಾಯ ಪುರಾಣ (ಸಂ. ಶ್ರೀಮತಿ ಕಮಲಾಹಂಪನಾ ಹಾಗೂ ಶ್ರೀ ಕೆ.ಆರ್.ಶೇಷಗಿರಿ) ರವರ ಗ್ರಂಥದಲ್ಲಿರುವ ವಿಚಾರವನ್ನು ತಿಳಿಸಲಾಗಿರುತ್ತದೆ.

47. ಅರಸೀಕೆರೆ ತಾಲ್ಲೂಕು ಶಾಸನಗಳ ಸಂಖ್ಯೆ –314

48. ಕೊಹೆಲೋ ವಿಲಿಯಂ 1956 Hoysala Vamsha I. H. R. I. Bombay

49. ಪಿ.ಬ. ದೇಸಾಯಿ, ಕರ್ನಾಟಕ ಇತಿಹಾಸ.

50. ಡೆರೆಟ್. 1957, The Hoysala

51. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಬೆಂಗಳೂರು, ಪು.ಸಂ.90

52. ಅದೇ

53. ಅರಸೀಕೆರೆ ಶಾಸನ ಸಂಖ್ಯೆ–194

54. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಬೆಂಗಳೂರು.

55. ಅದೇ ಪುಟ 91.

56. ಅದೇ ಪುಟ 92.

57. ಅದೇ

58. ಎ.ಕ.ಸಂ.10 ಅರಸೀಕೆರೆ ಶಾಸನ ಸಂಖ್ಯೆ 194, ಬಾಗೇವಾಳು ಕ್ರಿ.ಶ.1352.

59. ಅರಸೀಕೆರೆ ಶಾಸನ ಸಂಖ್ಯೆ–153 ಕೆಲ್ಲಂಗೆರೆ ಕ್ರಿ.ಶ.1367.

60. ಅರಸೀಕೆರೆ ಶಾಸನ ಸಂಖ್ಯೆ–1, ಕ್ರಿ.ಶ.368

61. ಅದೇ ಸಂಪುಟ 10, ಚೆನ್ನರಾಯಪಟ್ಟಣ ಶಾಸನ ಸಂಖ್ಯೆ, 131, ಹುಲಿಕೆರೆ ಕ್ರಿ.ಶ.1378.

62. ಚೆನ್ನರಾಯಪಟ್ಟಣ ಶಾಸನ ಸಂಖ್ಯೆ–59, ಮರಗೂರು ಕ್ರಿ.ಶ.1378.

63. ಚೆನ್ನರಾಯಪಟ್ಟಣ ಶಾಸನ ಸಂಖ್ಯೆ–29, ಮರಗೂರು ಕ್ರಿ.ಶ.1399

64. ಅರಸೀಕೆರೆ ಶಾಸನ ಸಂಖ್ಯೆ–198 ಗಂಡಸಿ ಕ್ರಿ.ಶ.1403

65. ಅರಸೀಕೆರೆ ಶಾಸನ ಸಂಖ್ಯೆ–287, ನೇರ್ಲಿಂಗೆ , ಕ್ರಿ.ಶ.1429

66. ಎ.ಕ.ಸಂ.–10 (ಪರಿ) ಅರಸೀಕೆರೆ ಶಾಸನ ಸಂಖ್ಯೆ: 134, ಮಾಲೇಕರ್ ತಿರುಪತಿ, ಕ್ರಿ.ಶ.1744.

67. ಕ.ವಿ.ವಿ.ಕೋ, ಗರುಡನಗಿರಿ, ಪು.575– ಚಿಕ್ಕದೇವರಾಜ ಒಡೆಯರ್, ಪು.942.

68. ಎ.ಕ.ಸಂ.10 (ಅರಸೀಕೆರೆ) ಶಾಸನ ಸಂಖ್ಯೆ–135, 136, 137, ಮಾಲೇಕಲ್ ತಿರುಪತಿ ಕ್ರಿ.ಶ.1745.

69. ಲಲಿತಾಂಬ ಎನ್.ಆರ್., –ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ ಮುದ್ದುಶ್ರೀ ಗ್ರಂಥಮಾಲೆ ಬೆಂಗಳೂರು–2011, ಪು.90.

70. ಎ.ಕ.ಸಂ.10 (ಅರಸೀಕೆರೆ) ಶಾಸನ ಸಂಖ್ಯೆ–237 ಕ.ಕೈ. ಪು.188, ಹಾರ್‍ನಹಳ್ಳಿ

71. ಕ.ವಿ.ವಿ.ಕೋ. ಟಿಪ್ಪು ಸುಲ್ತಾನ್, ಪು.757.

72. ಅರಸೀಕೆರೆ ಶಾಸನ ಸಂಖ್ಯೆ–280, ತಿಮ್ಮನಹಳ್ಳಿ ಕ್ರಿ.ಶ.1432

73. ಅರಸೀಕೆರೆ ಶಾಸನ ಸಂಖ್ಯೆ–273, ಜಾವಗಲ್ಲು ಕ್ರಿ.ಶ.1515

74. ಅರಸೀಕೆರೆ ಶಾಸನ ಸಂಖ್ಯೆ–240, ಹಾರನಹಳ್ಳಿ ಕ್ರಿ.ಶ.1535 ಮತ್ತು ಶಾಸನ ಸಂಖ್ಯೆ 206– ಗಂಡಸಿ, 1535.

75. ಅದೇ ಶಾಸನ ಸಂಖ್ಯೆ 261, ಸಿಂಹನ ಹಳ್ಳಿ ಕ್ರಿ.ಶ.1555.

76. ಅರಸೀಕೆರೆ ಶಾಸನ ಸಂಖ್ಯೆ 269. ಜಾವಗಲ್ಲು ಕ್ರಿ.ಶ.1581.

77. ಎ.ಕ.ಸಂ.9 (ಪರಿ) ಬೇಲೂರು ಶಾಸನ ಸಂಖ್ಯೆ–442 ಕ್ರಿ.ಶ.1559.

78. ಕ.ವಿ.ವಿ.ಕೋ. ಕಂಠೀರವನರಸರಾಜ ಒಡೆಯರ್, ಪು.193.

79. ಎ.ಕ.ಸಂ.10 ಅರಸೀಕೆರೆ ಶಾಸನ ಸಂಖ್ಯೆ 239, ಹಾರ್‍ನಹಳ್ಳಿ, ಕ್ರಿ.ಶ.1817.

80. ಕ.ವಿ.ವಿ. ಕೋ.ಪು.–53.

# ಅಧ್ಯಾಯ-3

## ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರಮುಖ ಧರ್ಮಗಳ ಬೆಳವಣಿಗೆ, ಶೈವ-ವೈಷ್ಣವ-ಜೈನ, ಕ್ರೈಸ್ತ-ವೀರಶೈವ-ಮುಸ್ಲಿಂ ಧರ್ಮ

ದೇಶದ ಇತರೆಡೆಯಂತೆ ಕರ್ನಾಟಕವೂ ವೈವಿಧ್ಯತೆಯ ಆಗರವಾಗಿದ್ದು, ಚೆನ್ನರಾಯಪಟ್ಟಣ ತಾಲ್ಲೂಕು ಕೂಡ ಇದಕ್ಕೆ ಹೊರತಾಗಿಲ್ಲ. ಧರ್ಮ ಮಾನವ ತನ್ನ ಮಾನಸಿಕ ಪ್ರಪಂಚದ ಬೇಡಿಕೆಗಳನ್ನು ಅತಿಮಾನವ ಶಕ್ತಿಯ ಬಲದಿಂದ ಈಡೇರಿಸಿಕೊಳ್ಳಲು ರೂಪಿಸಿಕೊಂಡ ಸಂಸ್ಥೆ, ಧರ್ಮನಾಗರಿಕ ಪ್ರಪಂಚಕ್ಕೆ ಮಾತ್ರ ಸೀಮಿತ ಎಂಬ ಅಭಿಪ್ರಾಯ ಇದೆ. ಆದರೆ ನಾಗರಿಕ ಪೂರ್ವದ ಆದಿ ಸಮಾಜದಲ್ಲೆ ಇದರೊಂದಿಗೆ ಸಂಸ್ಕೃತಿಯೊಂದಿಗೆ ಬದುಕಿತ್ತು. ಅದಕ್ಕೆ ನಾವಿಂದು ಧರ್ಮ ಎನ್ನುವರು. ಅತಿ ಮಾನವ ಶಕ್ತಿಗಳೊಂದಿಗೆ ಸಹಯೋಗ ಹಾಗೂ ಅದರೊಂದಿಗೆ ಮಾನವನ ಒಂದು ಸ್ವೀಕೃತ ಸಂಬಂಧವೇ ಧರ್ಮ ಎಂದು ಭಾವಿಸಲಾಗಿದೆ. ಅತಿ ಮಾನವನ ಕಲ್ಪನೆಗಳ ವಿಕಾಸ ಧರ್ಮದ ಸ್ವರೂಪ ಹಾಗೂ ಕ್ರಿಯಾತ್ಮಕತೆಯನ್ನು ಕುರಿತು ಅನೇಕ ಸಿದ್ಧಾಂತ ಮುಂದೆ ಬೆಳಕಿಗೆ ಬಂದವು. ಪ್ರಕೃತಿಯ ಮರ, ಗಿಡ ಕಲ್ಲುಗುಡ್ಡ, ನೀರು, ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳಲ್ಲಿ ಇಂತಹ ಚೈತನ್ಯವನ್ನು ಗುರುತಿಸಿ ಅವುಗಳನ್ನು ಆರಾಧಿಸಲು ಮಾನವ ಪ್ರಾರಂಭಿಸಿದ. ಯಾವುದೋ ಒಂದು ಪ್ರಾಣಿ ಮರ ತನ್ನ ಗುಂಪಿನದು ಎಂದು ಭಾವಿಸಿ ಆರಾಧಿಸುವರು. ಇಂಥ ಕುಲದೇವತಾ ಪ್ರಾಣಿ ಸಸ್ಯಗಳನ್ನು ಕೊಲ್ಲುವ ನಾಶ ಮಾಡುವ ತಿನ್ನದ ಕೆಲವೊಂದು ನಿಷಧ್ಧಿಗಳ ಧರ್ಮವನ್ನು ಪೋಷಿಸಿದೆ. ತಾವು ಆರಾಧಿಸುವ ಕೆಲವೊಂದು ಮರಕಲ್ಲು ಪ್ರಾಣಿಗಳನ್ನು ಮುಟ್ಟುವುದಕ್ಕೆ ಹೆದರುವ ಮೂಲಕ ಅವುಗಳಿಗೆ ಪಾವಿತ್ರ್ಯವನ್ನು ಆರೋಪಿಸಿ ಮುಟ್ಟುವದಿದ್ದರೂ ಮಡಿಯಲ್ಲಿದ್ದವನಿಗೆ ಅಥವಾ ಗುಂಪಿನ ಯಜಮಾನನಿಗೆ ಮಾತ್ರ ಅಧಿಕಾರ ಎಂಬ ನಿಷಧ್ಧತೆಯನ್ನು ಬೆಳಕಿಗೆ ತಂದರು. ಇದನ್ನು ಮೀರಿದವನಿಗೆ ಪ್ರಾಣ ಹಾನಿಯೇ ಮತ್ತೊಂದು ಆಗಬಹುದೆಂಬ ಭೀತಿಯನ್ನು ಹುಟ್ಟಿಸಿದರು. ಸಮಾಜದಲ್ಲಿ ಧರ್ಮದ ಪಾತ್ರವನ್ನು ಕುರಿತಂತೆ ಕೆಲವೊಂದು ಸಿದ್ಧಾಂತಗಳು ಬಂದಿವೆ. ಮಾನವನ ದೈನಂದಿನ ಬದುಕಿನಲ್ಲಿ ಉಂಟಾಗಬಹುದಾದ ಭಾವೋದ್ರೇಕ ಸ್ಥಿತಿಯಲ್ಲಿ ಧರ್ಮ ವಿರೇಚಕ ಸಾಧನವಾಗಿ ಕಾಣಿಸಿಕೊಂಡು ವ್ಯಕ್ತಿ ಜೀವನದಲ್ಲಿ ಶಾರೀರಿಕ ಹಾಗೂ ಮಾನಸಿಕ ಸ್ಥಿರತೆಯನ್ನು ತರುವ ಕೆಲಸ ಮಾಡುತ್ತದೆ.[1]ಕಾಲದಿಂದ ಕಾಲಕ್ಕೆ ಈ ನಾಡಿಗೆ ಬಂದ ಆರ್ಯ, ಬೌದ್ಧ, ಜೈನ, ಧರ್ಮಗಳು ಈ ನೆಲದ ಮಣ್ಣಿನ ಸಂಸ್ಕೃತಿಯನ್ನು ಪ್ರಭಾವಿಸಿದೆ. ನಾಗರೀಕತೆಯನ್ನು ಕರೆದು ನೋಡಿದರೆ ಅಲ್ಲಿ ಒಬ್ಬ ಅನಾಗರೀಕ ಕಾಣಿಸಿಕೊಳ್ಳುವನು ಎಂಬ ಅಂಶವು ಸಭ್ಯತೆಯ ತೆಳುಪದರದ ಅಡಿಯಲ್ಲಿ ಧರ್ಮ ಕಾಣಿಸುತದೆ. ಪೌರಾಣಿಕ ಲೋಕದ ಕೃಷ್ಣ, ಸೀತೆ, ರಾಮ, ಬಲೀಂದ್ರ, ಸೂರ್ಯ, ಚಂದ್ರ ಮುಂತಾದವರು ತಲೆಹಾಕಿದ್ದುಂಟು. ಆದರೆ

ಅವರು ಪುರಾಣ ಲೋಕದಿಂದಿಳಿದು ಸ್ಥಳೀಯ ನೆಲದ ಮಕ್ಕಳಾಗುವರು. ಆ ವಾಸ್ತವ್ಯ ಲೋಕದಿಂದಿಳಿದು ವರ್ತಮಾನದ ವಾಸ್ತವ್ಯಲೋಕದಲ್ಲಿ ಓಡಾಡುವರು. ಜನಪದ ದೇವತೆಯಾದ ನಾಗಶಿಷ್ಠ ಧರ್ಮದೊಳಗೆ ಪ್ರವೇಶಿಸಿ ಗುರುತು ಸಿಗದಷ್ಟು ಅವಕಾಶಕ್ಕೆ ಒಳಗಾಗಿದ್ದಾನೆ. ಅವನಿಗೆ ಸ್ಥಳೀಯವಾಗಿ ನಡೆಸುವ ಉಪಚಾರ ನಾಗಮಂಡಲವಂತೂ ಪುರೋಹಿತ, ಪೂಜಾರಿ, ವಿಧಿ ವಿಧಾನಗಳ ತಾಂತ್ರಿಕತೆ ಪರಿಕಲ್ಪನೆಗಳಲ್ಲಿ ಸಂಪೂರ್ಣವಾಗಿ ಶಿಷ್ಠ ಧರ್ಮದ ಪ್ರಭಾವಕ್ಕೆ ಒಳಗಾಗಿದೆ.[2]

ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲ್ಲೂಕು ಅನೇಕ ಧರ್ಮಗಳ ನೆಲೆಬೀಡಾಗಿದ್ದರೂ, ಬಹುಪಾಲು ಹಿಂದೂ ಧರ್ಮೀಯರಾಗಿದ್ದಾರೆ. ಹಿಂದೂ ಎಂಬ ಪದವು ಸಿಂಧೂ ಪದದ ಮೂಲದಿಂದ ಉಗಮವಾಗಿದ್ದು, ವಿಶ್ವದ ಧರ್ಮಗಳಲ್ಲಿ ಸನಾತನ ಅಥವಾ ಅತ್ಯಂತ ಪ್ರಾಚೀನ ಧರ್ಮವೆಂದು ಜನಪ್ರಿಯವಾಗಿದೆ. ಪ್ರಸಿದ್ಧ ಇತಿಹಾಸಕಾರ ವಿಲ್‌ಡ್ಯೂರಾಂಟ್ ಹಿಂದೂ ಧರ್ಮವು ವಿಶ್ವದ ಎಲ್ಲಾ ಧರ್ಮಗಳಿಗೆ ಪ್ರಮುಖವಾದದೆಂದು ತಿಳಿಸಿದ್ದಾರೆ.

ಹಿಂದೂ ಧರ್ಮವು ಕೇವಲ ಏಕೈಕ ಪ್ರವಾದಿಯಿಂದ ಪ್ರತಿಪಾದಿತವಾಗಿರದೇ ಹಲವಾರು ಋಷಿ ಮುನಿಗಳ ಆಧ್ಯಾತ್ಮಿಕ ಅನುಭವದ ಫಲವಾಗಿ ಅನಾದಿಕಾಲದಿಂದಲೂ ಆಚರಣೆಗೆ ಬಂದುದರಿಂದ ಈ ಧರ್ಮಕ್ಕೆ ಸನಾತನ ಧರ್ಮವೆಂದು ಕರೆಯಲಾಗಿದೆ. ವೇದಗಳನ್ನು ಅಪೌರುಷೇಯವೆಂದು ಪರಿಗಣಿಸಲಾಗಿದೆ. ದೇವಾನುದೇವತೆಗಳಿಂದ ಮೌಖಿಕವಾಗಿ ಬಂದಿತೆಂಬ ಅಭಿಪ್ರಾಯವೂ ಸಹ ಹಿಂದೂಗಳಲ್ಲಿದೆ. ಕೆಲವು ವಿದ್ವಾಂಸರ ಪ್ರಕಾರ ಹಿಂದೂ ಧರ್ಮವು ಕೇವಲ ಆಧ್ಯಾತ್ಮಗಳಿಂದ ಕೂಡಿದ ಧರ್ಮವಾಗಿರದೇ ಹೆಚ್ಚಾಗಿ ಮನುಕುಲದ ಉನ್ನತ ಆದರ್ಶಗಳನ್ನೊಳಗೊಂಡ ಜೀವನ ಮಾರ್ಗವಾಗಿದೆ.[3]

ಹಿಂದೂ ಧರ್ಮದ ಪ್ರಮುಖ ಪಂಥಗಳಾದ ಅದ್ವೈತ, ವಿಶಿಷ್ಠಾದ್ವೈತ, ಮತ್ತು ದ್ವೈತ ಕ್ರಿ.ಶ.೯ನೇ ಶತಮಾನದ ನಂತರ ಪ್ರತಿಪಾದನೆಗೊಂಡವು. ಕ್ರಿ.ಶ.೯ನೇ ಶತಮಾನದಲ್ಲಿ ಕೇರಳದ ಕಾಲಟಿಯಲ್ಲಿ ಜನಿಸಿ ಆದಿಶಂಕರಾಚಾರ್ಯರು ಅದ್ವೈತ ಮತವನ್ನು ಪ್ರತಿಪಾದಿಸಿದರು. ಇವರು ಪ್ರಥಮ ಬಾರಿಗೆ ಆತ್ಮನಲ್ಲೇ ಪರಮಾತ್ಮನು ಅಸ್ತಿತ್ವದಲ್ಲಿರುವುದರಿಂದ ಅಹಂ ಬ್ರಹ್ಮಾಸ್ಮಿನ್ ಹಾಗೂ ತತ್ವಮಸಿ, ತತ್ವಗಳನ್ವಯ, ಅದ್ವೈತವನ್ನು ಬೋಧಿಸಿದರು. ದೇವಾನು ದೇವತೆಗಳ ಐಕ್ಯತೆಯನ್ನು ಸಾಮಾನ್ಯರಿಗೆ ದರ್ಶನ ಮಾಡಿಸಿದರು. ಆಕಾಶದಿಂದ ಭೂಮಿಗೆ ಬಿದ್ದ ಸಹಸ್ರಾರು ಮಳೆಯ ಹನಿಗಳ ಏಕರೂಪವಾಗಿ ಹರಿದು ಸಾಗರಕ್ಕೆ ಸೇರುವ ರೀತಿಯಲ್ಲಿ ಸರ್ವಶಕ್ತನಾದ ಬ್ರಹ್ಮನೊಬ್ಬನೇ ಸತ್ಯ. ಜಗತ್ತು ಮಿಥ್ಯ ಹಾಗೂ ಪುನರ್‌ಜನ್ಮವು ಹೆಸರು ರೂಢಿಗೆ ಬಂದಿತು. ಎಲ್ಲಾ ಆತ್ಮವು ಏಕರೀತಿಯ ಮೋಕ್ಷವನ್ನು ಪಡೆಯುವರು ಎಂಬುದು ಆದಿಶಂಕರಾಚಾರ್ಯರ ದೃಢವಾದ

ಅಭಿಪ್ರಾಯವಾಗಿತ್ತು. ಕ್ರಿ.ಶ.11ನೇ ಶತಮಾನದಲ್ಲಿ ತಮಿಳುನಾಡಿನ ಶ್ರೀ ಪೆರಂಬದೂರಿನಲ್ಲಿ ಜನ್ಮ ತಾಳಿದ ರಾಮಾನುಜಾಚಾರ್ಯರು ಬ್ರಹ್ಮನ್ ಚಿತ್– ಮತ್ತು ಸಚಿತ್ ಎಂಬ ವಿಶೇಷವಾದ ಗುಣಗಳನ್ನು ಹೊಂದಿರುವುದರಿಂದ ಆತನ ಸಾಕ್ಷಾತ್ಕಾರವು ಸಾಧ್ಯವೇ ಹೊರತು ಆತನೊಂದಿಗೆ ಮಿಲನ ಸಾಧ್ಯವಿಲ್ಲವೆಂದು ಪ್ರತಿಪಾದಿಸಿದ್ದಾನೆ.[4] ಈ ಪಂಥಕ್ಕೆ ವಿಶಿಷ್ಠಾದ್ವೈತವೆಂದು ಕರೆದು ಅದರ ಹಿಂಬಾಲಕರನ್ನು ಶ್ರೀ ವೈಷ್ಣವರೆಂದೂ ಪರಿಗಣಿಸಲಾಯಿತು.

ಶ್ರೀ ವೈಷ್ಣವರಲ್ಲಿ ಆತ್ಮನು ಸ್ವಯಂ ಸಾಧನೆಯಿಂದ ಬ್ರಹ್ಮಜ್ಞಾನವನ್ನು ಪಡೆಯುವುದರ ಮೂಲಕ ಮೋಕ್ಷವನ್ನು ಗಳಿಸಬಹುದೆಂದು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದಾರೆ. ಕರ್ನಾಟಕದ ಉಡುಪಿಯ ಬಳಿಯ ಪಾಜಕ ಅಥವಾ ಬೆಳ್ಳೆಯಲ್ಲಿ ಜನ್ಮ ತಾಳಿದ ಮಧ್ವಾಚಾರ್ಯರು ಆತ್ಮ ಮತ್ತು ಪರಮಾತ್ಮನ ನಡುವೆ ಇರುವ ಪಂಚಭೇದ ತಾರತಮ್ಯವನ್ನು ಪ್ರತಿಪಾದಿಸಿದರು. ಈ ಕಾರಣದಿಂದಾಗಿ ಈ ಪಂಥಕ್ಕೆ ದ್ವೈತ ಮತವೆಂದು ಕರೆಯಲಾಯಿತು. ಈ ಪಂಥದ ಪ್ರಕಾರ ಆತ್ಮ–ಪರಮಾತ್ಮನ ಸಂಬಂಧಗಳು ಸಂಪೂರ್ಣವಾಗಿ ದಾಸತ್ವದ ಸಂಕೇತವಾಗಿದ್ದು, ಸರ್ವಶಕ್ತನಾದ ವಿಷ್ಣುವಿನ ಹರಿ ಸರ್ವೋತ್ತಮತ್ವವನ್ನು ಮಧ್ವಾಚಾರ್ಯರು ಬೋಧಿಸಿದರು. ಅದರ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯೂ ಅವನ ಮಟ್ಟಿಗೆ ಜ್ಞಾನ ಪರಿಪೂರ್ಣತೆಯನ್ನು ಹೊಂದಿರುತ್ತಾರೆ. ಯಾವುದೇ ಕಾರಣಕ್ಕೂ ಸರ್ವಗುಣ ಪರಿಪೂರ್ಣವಾದ ಬ್ರಹ್ಮನು (ಭಗವಂತನು) ಆತ್ಮನಿಗೆ ಸಮಾನನಾಗುವುದಿಲ್ಲ. ಆತ್ಮನು ಇಹ ಮತ್ತು ಪರಲೋಕಗಳಲ್ಲಿ ಪರಮಾತ್ಮನ ಅಧೀನನಾಗಿರುತ್ತಾನೆಂಬ ದಾಸತ್ವಭಾವವನ್ನು ಪ್ರಥಮ ಬಾರಿಗೆ ಪ್ರತಿಪಾದಿಸಿದರು. ಅಲ್ಲದೆ ಆಯಾಯ ವ್ಯಕ್ತಿಯ ಸಾಧನೆಯ ಮೇರೆಗೆ ಯೋಗ್ಯತಾನುಸಾರ ಮೋಕ್ಷವು ಲಭಿಸುತ್ತದೆಂದೂ ಬೋಧಿಸಿದರು. ದ್ವೈತ ಧರ್ಮವು ದೃಢವಾಗಿ ಹೊಂದಿದ್ದ ದಾಸತ್ವಮನೋಭಾವದ ಫಲವಾಗಿ ಹರಿದಾಸ ಸಾಹಿತ್ಯವು ವಿಫುಲವಾಗಿ ಕರ್ನಾಟಕದಲ್ಲಿ ಬೆಳೆದು ಬರಲು ಸಾಧ್ಯವಾಯಿತು. ಈ ಮೂರು (ಅದ್ವೈತ, ವಿಶಿಷ್ಠಾದ್ವೈತ, ಮತ್ತು ದ್ವೈತ) ಪಂಥಗಳು ಸಂಪೂರ್ಣವಾಗಿ ಪ್ರಾಚೀನ ಧಾರ್ಮಿಕ ಗ್ರಂಥಗಳಾದ ವೇದ, ಉಪನಿಷತ್ತು, ಅರಣ್ಯಕ, ಬ್ರಾಹ್ಮಣ, ರಾಮಾಯಣ, ಮಹಾಭಾರತ (ಭಗವದ್ಗೀತೆ) ಮುಂತಾದವುಗಳ ಆಧ್ಯಾತ್ಮಿಕ ಬೆಳವಣಿಗೆಗೆ ಅಧ್ಯಯನದ ಪ್ರತಿರೂಪಗಳೇ ಆಗಿ ಪ್ರತಿಪಾದಿತವಾಗಿದ್ದು, ಹಿಂದೂ ಧರ್ಮದ ಆಧ್ಯಾತ್ಮಿಕ ದಾರಿದೀಪಗಳಾಗಿವೆ. ಕರ್ನಾಟಕದಲ್ಲಿ ಕ್ರಿ.ಶ.12ನೇ ಶತಮಾನದಲ್ಲಿ ಜಗಜ್ಯೋತಿ ಬಸವಣ್ಣನವರು ಪ್ರತಿಪಾದಿಸಿದ ವೀರಶೈವ (ಶಕ್ತಿ ವಿಶಿಷ್ಠಾದ್ವೈತ) ಧರ್ಮವೂ ಹಿಂದೂ ಧರ್ಮದಲ್ಲಿ ಅಡಕವಾಗಿದ್ದ ಸತ್ವಸಾರಗಳನ್ನು ಸ್ಥಳೀಯ ಹಾಗೂ ಸರಳವಾದ ಕನ್ನಡ ಭಾಷೆಯಲ್ಲಿ ಬೋಧಿಸಿದ ಕಾರಣ ಜನಪ್ರಿಯವಾಯಿತು. ವೀರಶೈವ ಧರ್ಮವು ಸಾಮಾಜಿಕ ಜೀವನಕ್ಕೆ ಅವಶ್ಯಕವಾದ ನೀತಿ ಬೋಧನೆಗಳಿಂದ ಕೂಡಿದ್ದು, ಆಧ್ಯಾತ್ಮಿಕ ವಿಚಾರಗಳು ಸಂಸ್ಕೃತ ಭಾಷೆಗೆ ಬದಲಾಗಿ ಸರಳ

ಕನ್ನಡ ಭಾಷೆಯಲ್ಲಿದ್ದು, ಕರ್ನಾಟಕದಲ್ಲಿ ಮಾತ್ರವಲ್ಲದೆ, ಭಾರತದ ಇತರ ಪ್ರದೇಶಗಳಲ್ಲಿ ಪಸರಿಸಿತು. ಈ ಧರ್ಮದಲ್ಲಿ ಬೆಳೆದು ಬಂದ ವಚನ ಸಾಹಿತ್ಯವು ಕನ್ನಡ ಭಾಷೆ ಮತ್ತು ಸಾಹಿತ್ಯದ ಅಭಿವೃದ್ಧಿಗೆ ಕಾರಣವಾಯಿತೆಂಬುದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ.[5]

**ಶೈವಧರ್ಮ**

ಪ್ರಾಚೀನ ಕಾಲದಿಂದಲೂ ಆಯಾ ಧರ್ಮದ ಬೆಳವಣಿಗೆಯನ್ನು ಕಾಣುತ್ತೇವೆ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೆಳೆದು ಬಂದ ಹಾಗೂ ಆಯಾ ಧರ್ಮಕ್ಕೆ ಸಂಬಂಧಿಸಿದ ಪ್ರತಿಮೆಗಳಲ್ಲಿ ಮೂರ್ತಿ ಶಿಲ್ಪಗಳನ್ನು ದೇವಾಲಯಗಳನ್ನು ಅವುಗಳ ಲಕ್ಷಣಗಳ ಮೂಲಕ ಗುರುತಿಸಬಹುದು ಹಾಗೂ ಪ್ರತಿಮಾ ಶಾಸ್ತ್ರದ ಹಿನ್ನೆಲೆಯಲ್ಲಿ ಸ್ಥೂಲವಾಗಿ ಸಮೀಕ್ಷಿಸುವುದು ಈ ಅಧ್ಯಯನದ ಆಶಯವಾಗಿದೆ. ಸರ್ವಧರ್ಮ ಸಮನ್ವಯವಾದ ಈ ನಮ್ಮನಾಡಿನಲ್ಲಿ ಹಲವಾರು ಧರ್ಮಗಳಗನುಗುಣವಾಗಿ ಹಲವಾರು ದೇವತೆಗಳನ್ನು ನಾನಾ ರೀತಿಯ ರೂಪದಲ್ಲಿ ಶಿಲ್ಪಗಳ ಹಲವಾರು ಭಾವಭಂಗಿಯಲ್ಲಿ ಶಿಲ್ಪಿಸಿದ್ದು, ಇವುಗಳ ಆಧಾರದ ಮೇಲೆ ಹಲವಾರು ಲೀಲೆಗಳನ್ನು ಧರ್ಮಗಳನ್ನು ಗುರುತಿಸಬಹುದು. ಪ್ರಾಚೀನ ಧರ್ಮಗಳಲ್ಲಿ, ಶೈವ ಧರ್ಮವು ಒಂದು ವೇದ ಪೂರ್ವ ಕಾಲದ ಸಿಂಧು ಬಯಲಿನ ನಾಗರೀಕತೆ, ಹರಪ್ಪ ನಾಗರೀಕತೆ, ಮೊಹೆಂಜೋದಾರೋಗಳ ಕಾಲದಿಂದಲೂ ಅವ್ಯಾಹತವಾಗಿ ಬೆಳೆದು ಬಂದಿರುವ ಶಿವ ಪೂಜೆ ಈ ಅವಧಿಯಲ್ಲಿಯೂ ವಿವಿಧ ಬಗೆಗಳಲ್ಲಿ ಬೆಳೆದುಬಂದಿರುವುದನ್ನು ಕಾಣಬಹುದು. ಭಾರತೀಯ ಶೈವ ಧರ್ಮದ ಸಂಸ್ಕೃತಿಗಳು ಧರ್ಮವನ್ನು ಬಿಂಬಿಸಿವೆ. ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನ ಧರ್ಮವೆಂದು ಹಲವಾರು ವಿದ್ವಾಂಸರುಗಳು ಕರೆದಿದ್ದಾರೆ. ಶೈವ ಧರ್ಮಕ್ಕೆ ಪಾಶುಪತ ಧರ್ಮವೆಂದೂ ಸಹ ಕರೆಯುತ್ತಾರೆ. ಇದರ ಉಲ್ಲೇಖ ಮಹಾಭಾರತದಷ್ಟು ಪ್ರಾಚೀನ ಎಂದು ಹೇಳಬಹುದಾಗಿದೆ.[6]

ಋಗ್ವೇದದಲ್ಲಿ ಕಾಣಿಸಿಕೊಳ್ಳುವ ರುದ್ರಕ್ರಮೇಣ ಶಿವನಾಗಿ ಶೈವಧರ್ಮೀಯರಿಗೆ ಆರಾಧ್ಯ ದೈವವಾಗಿ ಬೆಳೆದ, ಶಿವನನ್ನು ಲಿಂಗರೂಪವಾಗಿಯೂ ಸಾಕಾರ ಮತ್ತು ನಿರಾಕಾರವಾಗಿಯೂ ಆರಾಧಿಸುವ ಪರಿಪಾಠ, ರೂಢಿಸಂಪ್ರದಾಯಗಳು ಬೆಳೆದು ಬಂದಿದೆ. ಶಿವೋಪಾಸನೆಗಳಿಗೆ ಆಧಾರಗಳಾದ ಶಿವಾಗಮನಗಳನ್ನು ಶಿವನೇ ಪಾರ್ವತಿಗೆ ಉಪದೇಶಿಸಿದನೆಂಬ ನಂಬಿಕೆ ಇದೆ. ಅವುಗಳ ಸಂಖ್ಯೆ ಇಪ್ಪತ್ತೆಂದು ಕರೆಯಲಾಗಿದೆ. ಕಾಲದ ಪ್ರವಾಹದಲ್ಲಿ ವೇದಗಳ ಆಗಮಗಳ ಅಭಿಪ್ರಾಯಗಳು ಒಂದರೊಡನೊಂದು ಬೆರೆತು ಶಿವೋಪಾಸನೆಯಲ್ಲಿ ವಿಶಿಷ್ಠ ಸಂಕೀರ್ಣತೆಯನ್ನು ಹೊಂದಿದೆ.

ಶಿವನ ಆರಾಧನೆಯು ಮಾರ್ಗದ ಇನ್ನೊಂದು ಹೆಸರು ಪಾಶುಧರ್ಮ, ಅದು ಮಹಾಭಾರತದ ಶಾಂತಿ ಪರ್ವದಲ್ಲಿ ಉಕ್ತವಾಗಿದೆ.[7] ಈ ಧರ್ಮದ ಸಂಸ್ಥಾಪಕ ಶಿವನೆಂದೂ, ಶ್ರೀಕಂಠನೆಂದೂ ಭಿನ್ನಾಭಿಪ್ರಾಯಗಳಿವೆ. ಬಹಳಷ್ಟು ಜನರು ಶ್ರೀಕಂಠನೇ ಸ್ಥಾಪಕನೆಂದು ಕರೆದಿರುತ್ತಾರೆ.[8] ಲಕುಲೀಶನು ಅದನ್ನು ವ್ಯವಸ್ಥಿತವಾಗಿ ಪ್ರತಿಪಾದಿಸಿದನೆಂದು ಕರೆಯಲಾಗಿದೆ. ಇನ್ನೂ ಕೆಲವರು ಪಾಶುಪತ ಧರ್ಮದ ಸ್ಥಾಪಕ ಲಕುವೀಶನೆಂದೂ ಕರೆಯಲಾಗಿದೆ.[9] ಶೈವ ಧರ್ಮಕ್ಕೆ ಲಾಕುಲಿಶ ಎಂಬ ಹೆಸರು ಬಹುಶಃ ಪ್ರಾಚೀನವಾದದ್ದು. ಇದು ಲಕುಲಿಶ ಎಂಬ ಒಬ್ಬ ವ್ಯಕ್ತಿಯನ್ನು ಸೂಚಿಸಿರುವುದರಿಂದ ಇದರ ಸ್ಥಾನದಲ್ಲಿ ಪಶುಪತ ಎಂಬ ಭಗವಂತನ ಹೆಸರನಿಟ್ಟು ಪಾಶುಪತ ಎಂದು ನಂತರದ ಕಾಲದವರು ಮಾಡಿಕೊಂಡಿರಬೇಕೆಂದು ಹೇಳಿದ್ದಾನೆ.[10]

ತದನಂತರ ಲಾಕುಳ ಅಥವಾ ಪಾಶುಪತರಿಗೆ ಕಾಳಮುಖರೆಂದು ಹೆಸರಿದ್ದು, ಕಾಳಮುಖರದು ಮತ್ತು ಕಾಪಾಲಿಕರು ಒಂದೇ ಎಂದು ಅಭಿಪ್ರಾಯಪಟ್ಟಿದ್ದಾನೆ.[11]ಶೈವ ದೇವಾಲಯಗಳಲ್ಲಿ ಶಿವನನ್ನು ಅತ್ಯಂತ ಶ್ರೇಷ್ಠದೇವರೆಂದು ಒಪ್ಪಿರುತ್ತಾರೆ. ಶಿವನು ಹಲವು ನಾಮಾಂಕಿತಗಳಿಂದ ಗುರುತಿಸಲ್ಪಟ್ಟಿದ್ದಾನೆ. ಅಮರಕೋಶವು ಶಿವನ 48 ಹೆಸರುಗಳನ್ನು ಹೇಳಿದರೆ ವಾಜಸೇನೆಯ ಸಂಹತವು ಸಹ ಶಿವನನ್ನು ಅಗ್ನಿ, ಅವನಿ, ಪಶುಪತಿ, ಭವ, ಪರ್ವ, ಈಶಾನ್ಯ, ಮಹಾದೇವ, ಉಗ್ರದೇವ, ಅರ್ಕೇಶ್ವರ, ದೇಸೇಶ್ವರ, ಮಲ್ಲಿಕಾರ್ಜುನ, ನೀಲಕಂಠ, ಸೋಮೆಶ್ವರ, ಗಂಗಾಧರ, ಕಾವಿಬಸವೇಶ್ವರ, ಅಂಕಾಶೇಶ್ವರ ಇನ್ನೂ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.[12]

ಪ್ರಾಚೀನ ಶೈವಧರ್ಮದ ಶಾಖೆಗಳನ್ನು ಗುರುತಿಸುವಾಗ ಅಷ್ಟಾಗಿ ಏಕರೂಪತೆ ಕಂಡುಬರುವುದಿಲ್ಲ. ಅದಕ್ಕೆ ಕಾರಣ ಕೆಲವು ಶೈವಶಾಖೆಗಳಲ್ಲಿ ಆಚರಣೆಯ ಸಾಮ್ಯಾಂಕಗಳು ಮೇಲುನೋಟಕ್ಕೆ ಒಂದೇ ಆಗಿ ಕಂಡುಬಂದಿರಬೇಕು ಮತ್ತು ಭಿನ್ನ ಧರ್ಮೀಯರಿಗೆ ಒಂದೊಂದು ಶಾಖೆಯ ಸೂಕ್ಷ್ಮ ಪ್ರಭೇದಗಲನ್ನು ಗುರುತಿಸಲು ಸಾಧ್ಯವಾಗದೇ ಇರಬಹುದು.

ಭಾಮತಿಯಲ್ಲಿ ಶೈವ ಶಾಖೆಗಳನ್ನು ಹೇಳುತ್ತಾ ಶೈವ, ಪಶುಪತ, ಕಾಪಾಲಿಕ ಮತ್ತು ಕಾರುಣಿಕ, ಭಾಸ್ಕರ ತನ್ನ ಬ್ರಹ್ಮಸೂತ್ರ ಭಾಷ್ಯದಲ್ಲಿ ಅದೇ ವಿಭಾಗಗಳನ್ನು ಹೇಳಿ ಕೊನೆಯದನ್ನು ಕಾಥಕ ಸಿದ್ಧಾಂತಿ ಎಂದು ಕರೆಯಲಾಗಿದೆ. ಹನ್ನೊಂದನೆಯ ಶತಮಾನದಲ್ಲಿ ಯಮುನಾಚಾರ್ಯನು ಶೈವ, ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖರೆಂದು ಗುರುತಿಸಿರುತ್ತಾರೆ.[13] ಶಂಕರಾಚಾರ್ಯರ ಭಾಷ್ಯಕ್ಕೆ ವ್ಯಾಖ್ಯಾನಗಳನ್ನು ಬರೆದ ವ್ಯಾಖ್ಯಾನಕಾರರು ಶೈವ, ಪಾಶುಪತ, ಕಾರುಣಿಕ ಸಿದ್ಧಾಂತಿ ಮತ್ತು ಕಾಪಾಲಿಕ ಎಂದು ತಿಳಿಸಿರುತ್ತಾರೆ.[14] ಹದಿನಾಲ್ಕನೆಯ ಶತಮಾನದಲ್ಲಿ ಮಾಧವರು ಸರ್ವದರ್ಶನ ಸಂಗ್ರಹದಲ್ಲಿ ನಕುಲೀಶ ಪಾಶುಪತ,

ಶೈವ ಮತ್ತು ಪ್ರತ್ಯಭಿಜ್ಞ ಎಂದು ತಿಳಿಸಿರುತ್ತಾರೆ.[15] ವಚನಕಾರರು ಶೈವ ಪ್ರಭೇದಗಳನ್ನು ಹೆಸರಿಸುವಾಗ ಬೇರೊಂದು ಬಗೆಯನ್ನು ಹಿಡಿದಿದ್ದಾನೆ. ಅವರಲ್ಲಿಯೂ ಏಕರೂಪತೆ ಇಲ್ಲ.[16] ಬ್ರಹ್ಮ ಶಿವನು ಶೈವರಲ್ಲಿ ಕಾಳಾಮುಖ ಕಪಾಳ, ಪಾಶುಪತಿ ಮತ್ತು ಶೈವರೆಂಬ ನಾಲ್ಕು ಬಗೆಗಳನ್ನು ತಿಳಿಸಿದ್ದಾರೆ.[17] ದಾಸಗುಪ್ತರವರು ಭಾವಿಸುವಂತೆ ಲಕುಲೀಶ ಮತ್ತು ಪಾಶುಪತರಲ್ಲಿ ಅಷ್ಟು ವ್ಯತ್ಯಾಸವೇ ಕಂಡುಬರುವುದಿಲ್ಲ.[18] ಸಾಮಾನ್ಯವಾಗಿ ಶೈವ ಯತಿಗಳ ಹೆಸರುಗಳು ರಾಸಿ, ಪಂಡಿತ, ಶಕ್ತಿ ಮತ್ತು ಜೀಯಗಳಿಂದ ಕೊನೆಯಾಗುತದೆ. ಕಾಳಾಮುಖರಿಗಿಂತಲೂ ಶ್ರೀಶೈಲ ಪವಿತ್ರವಾಗಿತ್ತು. ಅನೇಕ ಯತಿಗಳು ಶ್ರೀ ಶೈಲ ಯಾತ್ರೆಗಳನ್ನು ಕೈಗೊಳ್ಳುತ್ತಿದ್ದರು. ಅದೇ ರೀತಿ ಚೆನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಶೈವ ಪರಂಪರೆಯ ಕ್ಷೇತ್ರಗಳಾಗಿವೆ.[19]

ಬಸವಪೂರ್ವ ಯುಗದ ಲಕುಲೀಶ ಪಾಶುಪತ ಧರ್ಮವನ್ನು ಕ್ರಮೇಣ ವೀರಶೈವ ಧರ್ಮ ತನ್ನಲ್ಲಿ ಅಳವಡಿಸಿಕೊಂಡಂತೆ ಕಾಣುತ್ತದೆ. ವೀರಶೈವ ಧರ್ಮ ಪ್ರಬಲವಾಗಿ ಬೆಳೆದಂತೆಲ್ಲಾ ಕ್ರಮ-ಕ್ರಮವಾಗಿ ಕಾಳಮುಖ ಶೈವ ಅಧೀನದಲ್ಲಿದ್ದ ದೇವಾಲಯಗಳು, ಮಠಗಳು, ವೀರಶೈವದ ಕಕ್ಷೆಗೆ ಬಂದಂತೆ ಕಂಡುಬರುತ್ತದೆ. ಅಂದಿನ ಕಾಲದ ಅನೇಕ ಶೈವ ಧರ್ಮಾನುಯಾಯಿ ಆಗಿದ್ದರು. ಕಾಳಾಮುಖ ಧರ್ಮ 11-12ನೆಯ ಶತಮಾನದಲ್ಲಿ ಕ್ರಮೇಣ ಇಳಿಮುಖವನ್ನು ಪಡೆದಿರುವುದನ್ನು ಕಾಣಬಹುದು.[20] ಎ.ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟಿರುವಂತೆ ಕಾಳಾಮುಖ ಗುರುಗಳ ಕೊನೆಯ ಉಲ್ಲೇಖ ಕ್ರಿ.ಶ.1410 ಶಾಸನ ಮೂರು ನಾಲ್ಕು ಶತಮಾನಗಳ ಕಾಲ ಬಹು ಶಕ್ತಿಯುತವಾಗಿ ಬೆಳೆದು ಧರ್ಮ ಕ್ರಮೇಣ ವೀರಶೈವದಲ್ಲಿ ಕರಗಿ ಹೋದ ಹಾಗೆ ಕಾಣುತ್ತದೆ.[21]ಸಾತ್ತಿಕ ಶೈವ ಪಂಥಗಳಲ್ಲಿ ಶುದ್ಧ ಶೈವವೂ ಒಂದಾಗಿದೆ. ಕೆಲವು ಶಾಸನಗಳಲ್ಲಿ ಶುದ್ಧ ಶೈವನೆಂದು ಕರೆಯಲಾದ ಗುರುಗಳ ಉಲ್ಲೇಖಗಳು ದೊರೆಯುತ್ತವೆ. ಶುದ್ಧ ಶೈವರೂ ಕೂಡ ವೀರಶೈವರಂತೆ ದೇಹದ ಮೇಲೆ ಲಿಂಗಧಾರಣೆ ಮಾಡುತ್ತಿದ್ದರು. ಆದರೆ ಅವರು ಆಗಾಗ್ಗೆ ದೇಹದ ಮೇಲಿನ ಲಿಂಗವನ್ನು ಹೊರತೆಗೆಯುತ್ತಿದ್ದುದೂ ಉಂಟು. ಇದನ್ನು ಶರಣರು ಖಂಡಿಸುತ್ತಾರೆ. ತಮಿಳುನಾಡಿನಲ್ಲಿ ಹುಟ್ಟಿ ಬೆಳೆದ ಶೈವ ಸಿದ್ಧಾಂತವೇ ಶುದ್ಧ ಶೈವ ಆಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[22]

ಶೈವಧರ್ಮದ ವಾಮಾಚಾರದ ಪ್ರಮುಖ ಶಾಖೆಗಳಲ್ಲೊಂದು ಕಾಪಾಲಿಕರರು, ಕಾಪಾಲಿಕರಿಗೆ ಮಹಾವ್ರತಿಗಳೆಂಬ ಇನ್ನೊಂದು ಹೆಸರು ಇದ್ದಂತೆ ತಿಳಿದುಬರುತ್ತದೆ. ಪ್ರಾಚೀನ ಶೈವ ಪಂತಹ್ಗಳನ್ನು ಗುರುತಿಸುವಾಗ ಸ್ವಲ್ಪಮಟ್ಟಿನ ಗೊಂದಲ ಆಗಿರುವುದನ್ನು ಈಗಾಗಲೇ ಗಮನಿಸಲಾಗಿದೆ. ರಾಮಾನುಜಾಚಾರ್ಯರು ಕಾಳಮುಖರನ್ನು ಕಾಪಾಲಿಕರನ್ನು ಒಂದೇ ಆಗಿ ಭಾವಿಸಿದಂತಿದೆ. ಕಾಪಾಲಿಕರು ಶಿವನ ಉಗ್ರರೂಪವಾದ ಭೈರವನನ್ನು ಆರಾಧಿಸುತ್ತಿದ್ದರು.

ಕರ್ನಾಟಕದಲ್ಲಿ ಭೈರವ ದೇವಾಲಯಗಳು ಇದ್ದುದಕ್ಕೆ ಶಾಸನಗಳು ಆಧಾರವನ್ನು ಒದಗಿಸುತ್ತದೆ. ಭೈರವ ದೇವಾಲಯ ತಾಂತ್ರಿಕ ವಾಮಾಚಾರದ ಪೂಜೆಗಳಿಗೆ ಬಳಕೆಯಾಗುತ್ತಿದ್ದಿತ್ತೆಂದು, ಊಹಿಸಲು ಅವಕಾಶವಿದೆ. ಭೈರವ ದೇವಾಲಯಗಳಲ್ಲಿ ಕೆಲವಾದರೂ ಕಾಪಾಲಿಕರ ಪೂಜಾ ಮಂದಿರಗಳಾಗಿದ್ದಿರಬಹುದು.[23] ಚಾಮರಾಜನಗರದಲ್ಲಿ ಶೈವ ಧರ್ಮವು ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಈ ಧರ್ಮವು ಭಾರತದ ಹಾಗೂ ಸ್ಥಳೀಯ ಚಾಮರಾಜನಗರದ ಅವಿಭಾಜ್ಯ ಅಂಗವಾಗಿದೆ. ಈ ಧರ್ಮ ಕರ್ನಾಟಕದ ಇತರ ಜಿಲ್ಲೆಗಳಲ್ಲಿ ರಾಜ್ಯದಾದ್ಯಂತ ವ್ಯಾಪಿಸಿದೆ. ಆದರೆ ಇದರ ಮೂಲ ಯಾವುದೆಂದು ನಿಖರವಾಗಿ ಹೇಳುವುದಕ್ಕೆ ಆಧಾರಗಳು ಸಾಧ್ಯವಾಗುತ್ತಿಲ್ಲ. ಇದು ವೈಧಿಕ ಪೂರ್ವ ಕಾಲದ್ದೆಂದೂ ಆರ್ಯೇತರವೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಇದಕ್ಕೆ ಸ್ಪಷ್ಟವಾದ ಆಧಾರಗಳು ಕಂಡುಬರುವುದಿಲ್ಲ.[24]ಭಾರತದ ಪ್ರಾಚೀನ ನಾಗರೀಕತೆಗಳಾದ ಹರಪ್ಪ, ಮೊಹೆಂಜೋದಾರೋಗಳಲ್ಲಿ ಪಶುಪತಿಯ ಚಿತ್ರವಿರುವ ಮುದ್ರೆಗಳು ಕಂಡುಬಂದಿವೆ. ಅವುಗಳಲ್ಲಿ ಯೋಗಪಟ್ಟದಲ್ಲಿ ಕುಳಿತ ವ್ಯಕ್ತಿಯ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಎಮ್ಮೆ, ಜಿಂಕೆಗಳನ್ನು ಕಡೆಯಲಾಗಿರುತ್ತದೆ. ಈ ರೀತಿಯ ಶಿಲ್ಪವನ್ನು ಅಥವಾ ವಿಗ್ರಹವನ್ನು ಪಶುಪತಿಯೂ ಆದ ಶಿವನ ಪ್ರಾಚೀನ ರೂಪವೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[25] ಈ ಅಂಶವನ್ನು ಗಮನಿಸಿದಾಗ ಶೈವ ಸಂಸ್ಕೃತಿಯು ಭಾರತದಲ್ಲಿ ಸಿಂಧೂಬಯಲಿನ ನಾಗರೀಕತೆಯಿಂದಲೂ ಇತ್ತೆಂದು ಹೇಳಬಹುದು. ಶೈವ ಧರ್ಮದ ತತ್ವಗಳು ವೇದ, ಆಗಮಗಳಲ್ಲಿಯೂ ಉಲ್ಲೇಖವಿದೆ. ಶೈವ, ಆಗಮ, ಶೈವ ಉಪನಿಷತ್, ಲಿಂಗಪುರಾಣ, ಶಿವಪುರಾಣ, ಸ್ಕಂದಪುರಾಣ, ಮತ್ಸ್ಯಪುರಾಣ, ಕೂರ್ಮ ಪುರಾಣ ಮುಂತಾದವುಗಳಲ್ಲಿ ಉಲ್ಲೇಖವಿದೆ.[26]

ಇವುಗಳಲ್ಲಿ ಶಿವನನ್ನು ರುದ್ರನಿಗೆ ಅನ್ವಯಿಸಲಾಗಿದೆ.[27] ರುದ್ರ ಎಂದರೆ ಗರ್ಜಿಸುವವನು ಎಂದರ್ಥ. ಇದರ ವಾಸಸ್ಥಾನವು ಪರ್ವತಗಳಲ್ಲಿ, ಈತನು ಜಡೆಯನ್ನು ಎತ್ತಿ ಕಟ್ಟಿ ಚರ್ಮವನ್ನು ಧರಿಸಿದ್ದಾನೆ. ಸ್ವಭಾವತಃ ಭಯಂಕರನಾದ ಇವನನ್ನು ಶೈವ ಧರ್ಮದವರು ಶಿವ ಎಂದು ಪೂಜಿಸುತ್ತಾರೆ.[28] ಭಾರತವು ಹಲವಾರು ಧರ್ಮ, ಜಾತಿ, ಭಾಷೆ ಹಾಗೂ ಸೀಮೆಗಳ ಆಗರವಾಗಿದೆ. ಹೀಗಿದ್ದರೂ ಸಹ ನಮ್ಮ ಈ ದೇಶವು ವೈವಿಧ್ಯತೆಯಲ್ಲಿ ಏಕತೆಯನ್ನು ಕಂಡುಕೊಂಡು ತನ್ನದೇ ಆದ ವೈಶಿಷ್ಟ್ಯತೆ ಸಂಸ್ಕೃತಿಯನ್ನು ಜಗತ್ತಿಗೆ ನೀಡಿದೆ. ಪ್ರಾಚೀನ ಕಾಲದಿಂದಲೂ ಅನೇಕ ರಾಜವಂಶಗಳ ಈ ದೇಶದಲ್ಲಿ ಆಳ್ವಿಕೆ ನಡೆಸಿ ತಮ್ಮದೇ ಆದ ಸಂಸ್ಕೃತಿಯನ್ನು ಕೊಡುಗೆಯಾಗಿ ನೀಡಿರುವುದರಿಂದಲೇ ಏನೋ ಧಾರ್ಮಿಕ ಅಥವಾ ಜಾತಿಯ ವೈಷಮ್ಯಕ್ಕೆ ಪ್ರಚೋದನೆ ನೀಡದೆ ಸರ್ವ ಧರ್ಮವನ್ನು ಸಮನಾಗಿ ನೋಡಿಕೊಂಡು ಅವುಗಳನ್ನು ಪೋಷಿಸಿಕೊಂಡು ಬಂದಿರುವುದಕ್ಕೆ ಸಾಕಷ್ಟು ಆಧಾರಗಳಿವೆ. ಶೈವ ಸಂಪ್ರದಾಯಕ್ಕೆ ಸೇರಿದವರು

ಶಿವನನ್ನು ಲಿಂಗದ ರೂಪದಲ್ಲಿರುವ ಶಿಲ್ಪಕ್ಕೆ ಪೂಜೆಗಳನ್ನು ಮಾಡುವ ಸಂಪ್ರದಾಯವನ್ನು ಪ್ರಾರಂಭಿಸಿದರು. ಲಿಂಗಪೂಜೆಯ ಆರಂಭ ಕಾಲದಿಂದ ಇತ್ತೀಚಿನ ಕಾಲದ್ದು ಎನ್ನಬಹುದಾದರೂ ಇದರ ವ್ಯಾಪ್ತಿ ಬಹುವಿಸ್ತಾರವಾಗಿದೆ ಹಾಗೂ ಗಮನಾರ್ಹವಾದ ಅಂಶವಾಗಿದೆ.[29] ಈ ಲಿಂಗವು ಶಿವನ ಸಂಕೇತವಾಗಿ ಬೆಳೆದು ಬಂದು ಅನಂತರದಲ್ಲಿ ಶಿವನ ವಿವಿಧ ನಿರೂಪಣಾ ಶಿಲ್ಪಗಳು ಬಳಕೆಗೆ ಬಂದವು. ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಶೈವ ದೇವಾಲಯಗಳಲ್ಲೊಂದು ಬಾದಾಮಿ ಹತ್ತಿರ ಇರುವ ಮಹಾಕೂಟೇಶ್ವರ (ಮಕುಟೇಶ್ವರ) ದೇವಾಲಯ. ಕ್ರಿ.ಶ.602 ರ ಮಂಗಳೇಶನ ಶಾಸನದಲ್ಲಿ ಕಂಡುಬರುತ್ತದೆ.

ಅಲ್ಲದೆ ದುರ್ಲಭದೇವಿ ಎಂಬುವವಳು ಮಕುಟೇಶ್ವರನಿಗೆ ದಾನ ದತ್ತಿಗಳನ್ನು ನೀಡಿದ ಉಲ್ಲೇಖವಿದೆ.[30] ವೀರಶೈವ ಧರ್ಮವು ಶಿವನಲ್ಲದೆ ಅನ್ಯ ದೇವರುಗಳನ್ನು ಪೂಜಿಸಬಾರದು ಎನ್ನುತ್ತಾರೆ. ಆದರೆ ಇಂದಿನ ಆಧುನಿಕ ಕಾಲದಲ್ಲಿ ವೀರಶೈವರು ಶಿವನ ಪೂಜೆ ವಿಷ್ಣು, ಎಲ್ಲಮ್ಮ, ಬನಶಂಕರಿ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ.[31] ಚಾಮರಾಜನಗರ ಜಿಲ್ಲೆಯಲ್ಲಿ ಹಲವು ವೀರಶೈವ ಕುಟುಂಬಗಳು ಶಿವನಲ್ಲದೆ, ವಿಷ್ಣು, ಎಲ್ಲಮ್ಮ, ಭೈರವ, ಕಾಳ, ದುರ್ಗಿ, ಸಿದ್ಧೇಶ್ವರ, ಬನಶಂಕರಿ, ಮೈಲಾರ, ಮೊದಲಾದ ದೇವತೆಗಳಿಗೆ ಪೂಜೆ ಸಲ್ಲಿಸುವುದಲ್ಲದೆ ದರ್ಗಾಗಳಲ್ಲಿ ನಡೆಯುವ ಉರ್ಸುಗಳಲ್ಲೂ ಬಾಗವಹಿಸುತ್ತಾರೆ. ಆಗಮಗಳಲ್ಲಿ ಶೈವ, ವೈಷ್ಣವ, ಶಾಕ್ತ ಇತ್ಯಾದಿ ಪ್ರಭೇದಗಳು ಇದ್ದು, ಇದನ್ನು ಅನುಸರಿಸಿ ಆಯಾ ಭಕ್ತರು ಅನುಯಾಯಿಗಳು ಆಲಯ ಮೂರ್ತಿಗಳನ್ನು ನಿರ್ಮಾಣ ಮಾಡಿಸಿ ಪೂಜಾ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.[32]

ಚಾಮರಾಜನಗರದಲ್ಲಿ ಇತಿಹಾಸ ಪೂರ್ವಕಾಲದಿಂದಲೂ ಶೈವಧರ್ಮ ಪ್ರಚಾರದಲ್ಲಿತ್ತೆಂದು ಸಂಪ್ರದಾಯ ಪರಂಪರೆ ತಿಳಿಸುತ್ತದೆ.[32] ದಕ್ಷಿಣ ಭಾರತದಲ್ಲಿ ಇತಿಹಾಸ ಪೂರ್ವಕಾಲದಿಂದಲೂ ಶೈವ ಮತ ಪ್ರಚಾರದಲ್ಲಿತ್ತೆಂದು ಸಂಪ್ರದಾಯ ಹೇಳುತ್ತದೆ. ದಕ್ಷಿಣ ಭಾರತ ಹಾಗೂ ಚಾಮರಾಜನಗರ ಜಿಲ್ಲೆಯಲ್ಲಿ ನಟರಾಜಮೂರ್ತಿ ಶಿಲ್ಪವನ್ನು ಕೆತ್ತಿ ಹೆಚ್ಚಾಗಿ ಪ್ರಚಾರಪಡಿಸಿದರು ಎಂದು ಸಹ ತಿಳಿದುಬರುತ್ತದೆ. ನಟರಾಜ ಶಿಲ್ಪವಲ್ಲದೆ, ಹರಿಹರ, ಅರ್ಧನಾರೀಶ್ವರ, ಮಹಿಷಮರ್ಧಿನಿ ಮುಂತಾದ ಶಿಲ್ಪಗಳು ಕಂಡುಬರುತ್ತದೆ. ಬಾದಾಮಿ ಚಾಲುಕ್ಯರು ಹಾಗೂ ನಂತರ ಬಂದ ರಾಜರುಗಳ ಸ್ಫೂರ್ತಿ ನಡೆದು ಪಲ್ಲವನು ರಾಷ್ಟ್ರಕೂಟರು, ಚೋಳರು, ಪಾಂಡ್ಯರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರ್ ಇನ್ನೂ ಮೊದಲಾದವರು ಶಿವನ ಮೂರ್ತಿಯ ಶಿಲ್ಪಗಳಿಗೆ ಹೆಚ್ಚಿನ ಪ್ರೇರಣೆ ನೀಡಿದರು.[32]

ಹೀಗೆ ಶಿವನ ಪೂಜೆಯು ಲಿಂಗರೂಪದಲ್ಲಿ ಮತ್ತು ಮೂರ್ತಿ ರೂಪದಲ್ಲಿ ಪ್ರಚಲಿತಗೊಂಡು ಶಿವನ ಜೊತೆಯಲ್ಲಿ ಅವನ ಶಕ್ತಿದೇವತೆಯಾದ ಪಾರ್ವತಿ, ಸ್ಕಂದ, ವೈಷ್ಣವ, ಗಣಪತಿ ಇವರಿಗೂ ಪೂಜೆ ಸಲ್ಲಿಸುವ ಪದ್ಧತಿ ರೂಢಿಗೆ ಬಂದಿತು. ಅನಂತರದಲ್ಲಿ ಲಕುಮೀಶ ಮತ್ತು ಪಾಶುಪತರೆಂಬ ಎರಡು ಪಂತಗ್ಗಳು ಹುಟ್ಟಿಕೊಂಡವು. ಪಾಶುಪತರಿಗೆ ಕಾಳಾಮುಖರೆಂದು ಸಹ ಕರೆಯುತ್ತಾರೆ. ಲಾಕುಲ ಎಂಬ ಪಂಥದಲ್ಲಿ ದಂಡವನ್ನು ಹಿಡಿದು ಕುಳಿತ ಲಕುಲೀಶ ಎಂಬ ವ್ಯಕ್ತಿಯನ್ನು ಸೂಚಿಸುವುದಾಗಿರುತ್ತದೆ.[34] ಲಕುವೀಶನ ಮೂರ್ತಿಗಳನ್ನು ಕ್ರಿ.ಶ.708ನೇ ಶತಮಾನದಲ್ಲಿ ನಿರ್ಮಾಣವಾದ ಪಟ್ಟದಕಲ್ಲು ಪ್ರದೇಶದ ಮಲ್ಲಿಕಾರ್ಜುನನ ದೇವಾಲಯಗಳ ಗೋಡೆಗಳ ಮೇಲೆ ಕೆತ್ತಲಾಗಿದೆ.[35] ಕಾಳಾಮುಖರು ಒಬ್ಬ ಯತಿಯೆಂದು (ಸನ್ಯಾಸಿ) ಎಂದು ಪೂಜಿಸುತ್ತಾರೆ.[36] ಈ ರೀತಿಯ ಶಿಲ್ಪಗಳನ್ನು ಹೊಯ್ಸಳ ಕಾಲದ ದೇವಾಲಯಗಳ ಭಿತ್ತಿ ಶಿಲ್ಪಗಳಲ್ಲಿ ಕಾಣಬಹುದು. ಹೀಗೆ ಹತ್ತು, ಹಲವಾರು ವಿಷಯಗಳಲ್ಲಿ ಹೊಂದಿಕೊಂಡು ಹುಟ್ಟಿದ ಶೈವ ಧರ್ಮದ ದೇವಾಲಯಗಳು ಚಾಮರಾಜನಗರದಲ್ಲಿ ಕಂಡುಬರುತ್ತದೆ. ತಲಕಾಡಿನ ಗಂಗರ ಕಾಲದಿಂದ ವಿಜಯನಗರದ ಅರಸರು ಅಲ್ಲದೆ ಮೈಸೂರು ಒಡೆಯರ ಕಾಲದವರೆವಿಗೂ ಶೈವ ದೇವಾಲಯಗಳು ಕಂಡುಬರುತ್ತವೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಮಧ್ಯಕಾಲೀನ ಭಾರತದ ಕಲೆ ಮತ್ತು ವಾಸ್ತುವಿನ ಇತಿಹಾಸವನ್ನು ರಾಜರುಗಳ ಕಾಲವನ್ನು ಶೈವ ಸಂಸ್ಕೃತಿಯ ಒಂದು ಸುವರ್ಣ ಯುಗವೆಂದು ಕರೆಯಬಹುದು. ಕ್ರಿ.ಶ.850 ರಿಂದ 1275 ರ ವರೆಗಿನ ನಾನೂರಕ್ಕೂ ಹೆಚ್ಚು ವರ್ಷಗಳ ದೀರ್ಘಕಾಲದ ಆಳ್ವಿಕೆ ನಡೆಸಿದ ತಮಿಳುನಾಡಿನ ಚೋಳರು ನಿರ್ಮಿಸಿರುವ ಶಿವ ದೇವಾಲಯಗಳು ನೂರಾರು ಸಂಖ್ಯೆಯಲ್ಲಿ ಇಂದಿಗೂ ಉಳಿದು ಬಂದಿದೆ. ಶಿವ ಶಿಲ್ಪ ಹಾಗೂ ಶಿವ ದೇವಾಲಯಗಳನ್ನು ಪಲ್ಲವರ ಕಾಲದಲ್ಲಿಯೇ ಅಂದಿನ ಅರಸರು ನಿರ್ಮಿಸಿದರು. ಆದರೂ ಸಹ ಚೋಳರು ಶೈವ ದೇವಾಲಯಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿರುತ್ತಾರೆ. ಕ್ರಿ.ಶ.9–10ನೇ ಶತಮಾನಗಳಲ್ಲಿ ಕರ್ನಾಟಕದ ನೆಲದಲ್ಲಿ ನಡೆಸಿದ ತಮ್ಮ ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ನೂರಾರು ದೇವಾಲಯಗಳು ಇಂದಿಗೂ ಉಳಿದು ಬಂದಿದ್ದು, ಕರ್ನಾಟಕದ ನೆಲದಲ್ಲಿನ ಚೋಳರ ಶಿವದೇವಾಲಯಗಳನ್ನು ಮುಂದಿನ ಪರಿಚ್ಛೇದದಲ್ಲಿ ಪ್ರತ್ಯೇಕವಾಗಿ ಕಾಣಬಹುದು.

ಚೋಳವಂಶದ ಪ್ರಾರಂಭಿಕ ಅರಸನಾದ ವಿಜಯಾಲಯ ಮತ್ತು ಆದಿತ್ಯರ ಕಾಲದಲ್ಲಿಯೇ ನಾವು ಶಿವ ದೇವಾಲಯಗಳ ಹೊಸ ಪರಂಪರೆಯನ್ನು ಕಾಣಬಹುದು. ಈ ಹಿನ್ನೆಲೆಯನ್ನು ಗಮನಿಸಿದರೆ. ಚಾಮರಾಜನಗರದಲ್ಲೂ ಸಹ ಕಾಣಬಹುದಾಗಿದೆ.[37] ಚೋಳರು ಕರ್ನಾಟಕದಲ್ಲಿ ನೆಲೆಸಿದ್ದ ಕಾಲದಲ್ಲಿ ತಮ್ಮ ಆಗಮನಕ್ಕೆ ಮುಂಚಿನ ಗಂಗರ ಕಾಲದ ಅನೇಕ

ಅನೇಕ ಶಿವ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸುವುದೇ ಅಲ್ಲದೆ ಅನೇಕ ದೇವಾಲಯಗಳಿಗೆ ಸುಭದ್ರವಾದ ಕಲ್ಲಿನ ವಾಸ್ತುಗಳನ್ನು ರಚಿಸಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಚೋಳ ಸಂಸ್ಕೃತಿಯ ಪ್ರಭಾವವು ಮೊದಲಿಗೆ ಮೊದಲನೆಯ ರಾಜರಾಜನ ಕಾಲದಿಂದ ಪ್ರಾರಂಭವಾಗುವುದೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಒಟ್ಟಾರೆ ಚೋಳರ ಕಾಲದ ಕರ್ನಾಟಕದಲ್ಲಿನ ಶೈವ ಸಂಸ್ಕೃತಿಗೆ ದ್ರಾವಿಡ ವಾಸ್ತುವಿನ ಹೊಸದೊಂದು ಆಯಾಮವು ದೊರೆತು ಅನೇಕ ಶಿವ ದೇವಾಲಯಗಳು ನಿರ್ಮಿತವಾಗಿದೆ. ಚೋಳರ ಕಾಲದಲ್ಲಿ ಅನೇಕ ಶಿವ ಶಿಲ್ಪಗಳು ಸಹ ಕಂಡುಬಂದು ಕರ್ನಾಟಕದ ಶೈವ ಸಂಸ್ಕೃತಿಯು ಶ್ರೀಮಂತಗೊಂಡಿರುವುದು ಸ್ಪಷ್ಟವಾಗುತ್ತದೆ. ಚೆನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳ ಕಾಲದಲ್ಲಿ ಶೈವ ಸಂಸ್ಕೃತಿಯು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಅಂಶವನ್ನು ಆ ಕಾಲದ ಅನೇಕ ದೇವಾಲಯಗಳು ಮತ್ತು ವಾಸ್ತುಶಿಲ್ಪಗಳು ಸ್ಪಷ್ಟಪಡಿಸುತ್ತದೆ. ಶೈವ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿರುವುದು ವ್ಯಕ್ತವಾಗುವುದರಲ್ಲದೆ ಇದರ ಬಹುಪಾಲು ದೇವಾಲಯಗಳು ಕೇವಲ ಶಿವನದೇ ಆಗಿದೆ ಎಂಬುದು ಗಮನೀಯ ಸಂಗತಿ. ಅಲ್ಲದೆ ಇಂತಹ ದೇವಾಲಯಗಳು ಮೂಲಸ್ಥಾನದಲ್ಲಿ ಕೇವಲ ಶಿವನ ಲಿಂಗವನ್ನು ಮಾತ್ರ ಹೊಂದಿರುತ್ತದೆ.

ಶಿವ ದೇವಾಲಯಗಳಲ್ಲಿ ಕಂಡುಬರುವ ಇತರ ಕೆಲ ಜನಪ್ರಿಯ ಶಿಲ್ಪಗಳಾದ ಉಮಾಮಹೇಶ್ವರ ಕಲ್ಯಾಣಸುಂದರ, ರಾಮನಾನುಗ್ರಹ, ಚಂದ್ರಶೇಖರ, ಹರಿಹರ, ಅರ್ಧನಾರೀಶ್ವರ, ಮುಂತಾದ ಸೌಮ್ಯ ಶಿವರೂಪಗಳು ಮಾತ್ರವಲ್ಲದೆ ವೀರಭದ್ರ, ಕಾಲಭೈರವ, ಕಾಲಾರಿ, ಗಜಾರಿ, ತ್ರಿಪುರಾಂತಕ ಮುಂತಾದ ರೌದ್ರ (ಉಗ್ರ) ರೂಪದ ಶಿಲ್ಪಗಳು ಕಂಡುಬರುತದೆ. ಇವುಗಳ ಹಿನ್ನೆಲೆಯಲ್ಲಿ ತತ್ವ ಸಿದ್ಧಾಂತ ಮತ್ತು ಸಾಮಾಜಿಕ ಆಶಯಗಳೊಂದಿಗೆ ಆಯಾ ಕಾಲದ ಕಲಾವಂತಿಕೆ ಬೆಳವಣಿಗೆಯು ಶಿಲ್ಪಗಳ ಮೂಲಕ ಅಭಿವ್ಯಕ್ತವಾಗಿದೆ. ಒಟ್ಟಿನಲ್ಲಿ ಹರಪ್ಪ ಮತ್ತು ವೈದಿಕ ಸಂಸ್ಕೃತಿಗಳ ಮಿಲನದಿಂದ ಉದಯಿಸಿದ ಹಿಂದೂ ಎನ್ನಬಹುದಾದ ಧಾರ್ಮಿಕ ಪರಂಪರೆಯಲ್ಲಿ ಶಿವನು ಲಿಂಗರೂಪದಿಂದ ಹಿಡಿದು ಮಾನುಷ ಶಿಲ್ಪಗಳವರೆಗೆ ವಿಕಾಸವಾಗಿರುವುದರ ಜೊತೆಗೆ ಇಷ್ಟಲಿಂಗ ರೂಪದಲ್ಲಿಯೂ ಕಾಣಿಸಿಕೊಂಡು ಶೈವ ಸಂಸ್ಕೃತಿಯು ಚೆನ್ನರಾಯಪಟ್ಟಣ ಪ್ರದೇಶದ ಪ್ರಾಂತ್ಯದಲ್ಲೂ ಬೆಳೆದು ಮೈಗೂಡಿಸಿಕೊಂಡೇ ಮುಂದುವರೆದಿರುವುದೂ ಪ್ರಸ್ತುತ ಶಿಲ್ಪಗಳ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಕಾಣಬರುತ್ತದೆ. ಚಾಮರಾಜನಗರ ಪಟ್ಟಣದಲ್ಲಿಯೇ ಹಲವಾರು ಶೈವ ದೇವಾಲಯಗಳಿವೆ. ಅವುಗಳಲ್ಲಿ ಮುಖ್ಯವಾದವುಗಳು, ಚಾಮರಾಜೇಶ್ವರ, ವೀರಭದ್ರೇಶ್ವರ, ಭುಜಭದ್ರೇಶ್ವರ, ಭುಜಲಿಂಗೇಶ್ವರ, ಸಿದ್ದೇಶ್ವರ ಇನ್ನೂ ಮೊದಲಾದವು ಪ್ರಮುಖವಾಗಿ ಶಿಲ್ಪಗಳಿವೆ. ಶೈವ ಪರಂಪರೆಗೆ ಪೂರಕವಾಗಿ ಚೆನ್ನರಾಯಪಟ್ಟಣ ಪ್ರದೇಶದಲ್ಲಿ ಪ್ರಾಚೀನ ಕಾಲದ ಶೈವ ಮಠಗಳು ಸಹ ಕಂಡುಬರುತ್ತವೆ.

ಇಲ್ಲಿಯ ಪವಿತ್ರ ಕ್ಷೇತ್ರದಲ್ಲಿ ಶ್ರೀ ಮಾದೇಶ್ವರನು ಲಿಂಗ ರೂಪದಲ್ಲಿದ್ದು, ಸರ್ವಜನರ ದುಃಖ ನಿವಾರಕನಾಗಿದ್ದಾನೆ. ಶ್ರೀಕ್ಷೇತ್ರಕ್ಕೆ ಬಹಳ ಹಿಂದಿನ ಕಾಲದಿಂದಲೂ ರಾಜಮಹಾರಾಜರೂ ತಪಸ್ವಿಗಳು, ಜಂಗಮರು ಪಾಮರರು, ಗುರುಲಿಂಗ ಜಂಗಮದ ದರ್ಶನವು ಪಾವಿತ್ರ್ಯತೆಯನ್ನು ಹೆಚ್ಚಿಸಿರುವುದು ಕಂಡುಬರುತ್ತದೆ. ಈ ಕ್ಷೇತ್ರದಲ್ಲಿರುವ ಶ್ರೀ ಮಾದೇಶ್ವರ ಲಿಂಗ ದರ್ಶನ ಮಾಡಿದವರಿಗೆ ದ್ವಾದಶ ಲಿಂಗಗಳ ದರ್ಶನದಷ್ಟೇ ಪಾವಿತ್ರ್ಯತೆ ದೊರೆಯುತ್ತದೆ ಎಂಬ ನಂಬಿಕೆ ಇದೆ.

ಒಟ್ಟಾರೆಯಾಗಿ ಹೇಳುವುದಾದರೆ ಶೈವ ಪರಂಪರೆಯ ಸಂಸ್ಕೃತಿಯು ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿ ಕಂಡುಬರುತ್ತದೆ. ಅಲ್ಲದೆ ಶೈವ ಪರಂಪರೆ ಪೂರಕವಾದ ಶಿಲ್ಪಗಳು ಸಹ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತದೆ.

**ವೈಷ್ಣವ ಧರ್ಮ**

ಹಿಂದೂ ಧರ್ಮದಲ್ಲಿ ವೈಷ್ಣವ ಧರ್ಮವು ಪ್ರಾಚೀನ ಭಾರತದ ಧರ್ಮಪಂಗಡಗಳಲ್ಲಿ ಇದು ಸಹ ಒಂದು ವೈಷ್ಣವ ಧರ್ಮದ ಮೂಲ ಪುರುಷ ವಿಷ್ಣುವಾಗಿದ್ದು, ಇವನು ದೇವಕಾಲದ ದೇವತೆಯೆಂದು ಒಪ್ಪಿಕೊಳ್ಳಲಾಗಿದೆ. ವಿಷ್ಣು ಎನ್ನುವ ಮಾತಿಗೆ ಹರಡಿಕೊಳ್ಳುವುದು, ಆವರಿಸಿಕೊಳ್ಳುವುದೇ ವಿಷ್ಣುವಿನ ವೈಶಿಷ್ಟ್ಯ ವಿಷ್ಣುವು ತನ್ನ ಮೂರು ಹೆಜ್ಜೆಗಳಿಂದ ಮೂರುಲೋಕಗಳನ್ನು ಆವರಿಸಿಕೊಂಡ ಎಂಬ ವಿಷಯಕ್ಕೆ ಋಗ್ವೇದದಲ್ಲಿ ಕಂಡುಬರುತ್ತದೆ. ಋಗ್ವೇದದಲ್ಲಿ ವಿಷ್ಣುವಿನ ಉಲ್ಲೇಖ ಸ್ಪಷ್ಟವಾಗಿ ಸಿಗುತ್ತದೆ. ಆಗಲೇ ವಿಷ್ಣು ಒಬ್ಬ ದೇವನೆಂದು ಒಪ್ಪಿಕೊಂಡಿರುವುದು ಸ್ಪಷ್ಟವಾಗುತ್ತದೆ.[38] ಹಾಸನ ಜಿಲ್ಲೆಯ ಹಲ್ಮಿಡಿ ಎಂಬ ಗ್ರಾಮದಲ್ಲಿ ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಹಲ್ಮಿಡಿ ಶಾಸನವು ಕ್ರಿ.ಶ.450ರ ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಜಯತಿ ಶ್ರೀ ಪರಿಷ್ವಜ ಶ್ಯಾರ್ಜ್ಗ (ಮಾನ್ಯತೆ) ರಚ್ಚುತಃ ದಾನವಾಕೋಯುಗಾನ್ನಾಗ್ನೀ (ಶಿಷ್ಯಾನಾಸ್ತು) ಸುದರ್ಶನ[39] ವೈಷ್ಣವ ಧರ್ಮವು ದಕ್ಷಿಣ ಭಾರತವನ್ನು ಕ್ರಿ.ಶ.ಪೂರ್ವದಲ್ಲಿಯೇ ಪ್ರವೇಶಿಸಿತು ಎಂದು ನಾನ್‌ಘಾಟ್ ಶಾಸನದಿಂದ ತಿಳಿದುಬರುತ್ತದೆ. ಶಿವನಿಗೆ ಒಂದು ಪೌರಾಣಿಕತೆ ಇರುವಂತೆ ಹಿಂದೂ ಧರ್ಮದಲ್ಲಿ ವಿಷ್ಣುವಿಗೂ ಒಂದು ಪೌರಾಣಿಕ ಇತಿಹಾಸವುಂಟು. ವಿಷ್ಣುವಿನಲ್ಲಿರುವ ಅಚಲವಾದ ಭಕ್ತಿಯೇ ಭವಸಾಗರದಿಂದ ಭಕ್ತನನ್ನು ಮುಕ್ತ ಮಾಡುತ್ತದೆ ಎಂದು ವೈಷ್ಣವ ಧರ್ಮ ಹೇಳುತ್ತದೆ. ಈ ಧರ್ಮದಲ್ಲಿ ಯಜ್ಞಕ್ಕೆ ಅಗ್ರಸ್ಥಾನವಿದ್ದು, ಏಕದೇವೋಪಾಸನ ಮತ್ತು ಅಚಲವಾದ ಭಕ್ತಿ ಇವೆರಡೂ ಈ ಧರ್ಮದ ವೈಶಿಷ್ಟಗಳು. ಈ ಧರ್ಮವು ಅಭಿವೃದ್ಧಿ ಹೊಂದುತ್ತಾ ನಾರಾಯಣ ಎಂಬ ಕಲ್ಪನೆಯನ್ನು ಮೈಗೂಡಿಸಿಕೊಂಡಿದೆ.[40] ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಅನೇಕ ರಾಜ–

ಮಹಾರಾಜರುಗಳ ಮನೆತನಗಳು ವೈಷ್ಣವ ಧರ್ಮಾವಲಂಬಿಗಳಾಗಿದ್ದು, ಬಾದಾಮಿ ಚಾಲುಕ್ಯರ ದೊರೆ ಮಂಗಳೇಶನು ಬಾದಾಮಿಯಲ್ಲಿ ಸುಪ್ರಸಿದ್ಧವಾದ ಗುಹಾಂತರ ದೇವಾಲಯಗಳನ್ನು ಕೊರೆಸಿದನೆಂದು ಕ್ರಿ.ಶ.578 ರ ಶಾಸನದಿಂದ ತಿಳಿದುಬರುತ್ತದೆ.[41] ಕರ್ನಾಟಕದ ನಾನಾ ಭಾಗಗಳಲ್ಲಿ ರಾಮಾನುಜಾಚಾರ್ಯರ ಕಾಲದಲ್ಲಿ ನೂರಾರು ವೈಷ್ಣವ ದೇವಾಲಯಗಳು ನಿರ್ಮಾಣಗೊಂಡವು. ಕರ್ನಾಟಕದಲ್ಲಿ ಸುಮಾರು ಕ್ರಿ.ಶಕದ ಆರಂಭದಲ್ಲಿಯೇ ವೈಷ್ಣವ ಮತದ ಪ್ರಚಾರವಾಗಿದ್ದಿರಬೇಕು ಕೆಲವೊಂದು ಶಾಸನಗಳಲ್ಲಿ ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ.[42] ವಿಷ್ಣುವಿನ ಅವತಾರಗಳಲ್ಲಿ, ಬಹುಜನಪ್ರಿಯ ದೇವನಾದ ಶ್ರೀರಾಮನ ದೇವಾಲಯಗಳು ಕಂಡುಬರುತ್ತವೆ. ಇವುಗಳನ್ನು ಸಹ ಶಾಸನಗಳು ತಿಳಿಸುತ್ತವೆ.[43] ಶ್ರೀರಾಮಾನುಜಾಚಾರ್ಯರು ಕರ್ನಾಟಕದ ಮಣ್ಣಿನ ಮೇಲೆ ಕಾಲವಾಗುವುದಕ್ಕೆ ಮೊದಲೇ ತಮಿಳುನಾಡಿನ ಆಳ್ವಾರುಗಳ ಶ್ರೀ ವೈಷ್ಣವ ಧರ್ಮದ ಪ್ರಭಾವವಾಹಿನಿಯು ಇಲ್ಲಿಗೆ ಹರಿದು ಬಂದಿದ್ದಿತು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ. ರಾಮಾನುಜರಿಂದ ಶ್ರೀ ವೈಷ್ಣವ ಧರ್ಮವು ಒಂದು ಸ್ಪಷ್ಟವಾದ ರೂಪವನ್ನು ಪಡೆಯಿತು. ಇದು ಸಾರಾವಾಯುತ ಹಿನ್ನೆಲೆಯನ್ನು ಹೊಂದಿದೆ. ಇದು ಸಂಪೂರ್ಣವಾಗಿ ಭಗವಂತನಾದ ವಿಷ್ಣುವಿಗೆ ಶರಣಾಗುವ ತತ್ತ್ವವನ್ನು ಆಧಾರವಾಗಿ ಹೊಂದಿದೆ. ರಾಮಾನುಜರಿಗಿಂತ ಹಿಂದಿನ ವೈಷ್ಣವ ಮತ ಶ್ರದ್ಧೆಯಿಂದ ಈ ಪರಿಕಲ್ಪನೆಯು ಬೆಳವಣಿಗೆಗೆ ಬಂದಿತ್ತು.

ಕರ್ನಾಟಕಕ್ಕೆ ಆಚಾರ್ಯ ರಾಮಾನುಜಾಚಾರ್ಯರ ಹಾಗೂ ಶ್ರೀ ವೈಷ್ಣವ ಮತದ ಪ್ರವೇಶವು ಹೊಯ್ಸಳರ ಕಾಲದಲ್ಲಿ ಹೆಚ್ಚು ಹೆಚ್ಚು ಆರಂಭವಾಯಿತು. ರಾಜಮನೆತನದವರು ಆಶ್ರಯ ಪಾಲನೆಗಳನ್ನು ಪಡೆದುದು ಮಾತ್ರವಲ್ಲದೆ, ಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದರು. ಆಚಾರ್ಯ ರಾಮಾನುಜರು ಪ್ರತಿಪಾದಿಸಿದ ದರ್ಶನಕ್ಕೆ ವಿಶಿಷ್ಟಾದ್ವೈತವೆಂದೂ ಅವರು ಸ್ಥಾಪಿಸಿದ ಮತ ಸಂಪ್ರದಾಯಕ್ಕೆ ಶ್ರೀ ವೈಷ್ಣವಮತವೆಂದೂ ಕರೆಯಲಾಗಿದೆ. ಅವರ ಮತವನ್ನು ಶ್ರೀವೈಷ್ಣವ ಮತ ಎಂದು ಕರೆಯಲು ಎರಡು ಕಾರಣಗಳುಂಟು. ಮಹಾವಿಷ್ಣು ಆ ಮತದವರ ಮುಖ್ಯ ಆರಾಧ್ಯ ದೇವತೆ ಎಂಬುದು ಮೊದಲನೆಯ ಕಾರಣ. ಪರ್ವಕಾಲದಲ್ಲಿಯೂ ವಿಷ್ಣುವು ತನ್ನ ಕಾಂತೆಯಾದ ಶ್ರೀ ಅಥವಾ ಲಕ್ಷ್ಮಿಯೊಡನೆ ಕೂಡಿರುತ್ತಾನೆ ಎಂಬುದು ಎರಡನೆಯ ಕಾರಣ. ಶ್ರೀ ವೈಷ್ಣವ ಧರ್ಮದಲ್ಲಿ ಲಕ್ಷ್ಮಿಗೆ ಅತ್ಯಂತ ಗಣ್ಯ ಸ್ಥಾನವುಂಟು. ಗುರುಪರಂಪರೆಯಲ್ಲಿ ಅವಳು ಮೊದಲನೆಯವಳು ಪ್ರಾಚೀನ ಇತಿಹಾಸವುಳ್ಳ ಪಂಥವೆಂದರೆ ವೈಷ್ಣವ ಪಂಥ. ಕರ್ನಾಟಕದಲ್ಲಿ ಹರಿಹರನನ್ನು ಒಂದೇ ಮೂರ್ತಿಯಲ್ಲಿ ಏಕೀಕರಿಸುವ ಶಿಲ್ಪ ನಿರ್ಮಾಣಗಳ ಮುಖಾಂತರ ಶೈವ ಹಾಗೂ ವೈಷ್ಣವ ಪಂಥಗಳ ನಡುವೆ ಸಾಮರಸ್ಯವನ್ನು ಸಾಧಿಸಲಾಗಿತ್ತು. ಜನಪ್ರಿಯ ದೇವನಾದ ಕೃಷ್ಣನನ್ನು ವಿಷ್ಣುವಿನೊಂದಿಗೆ ಸಮೀಕರಿಸುವುದರಿಂದ ವೈಷ್ಣವ ಪಂಥ ಭಾರತದಲ್ಲಿ

ಬೆಳೆಯತೊಡಗಿತು. ಕ್ರಿ.ಶ.2ನೆಯ ಶತಮಾನದ ವೇಳೆ ಪ್ರಚಲಿತಗೊಂಡಿತು. ಸಮುದ್ರಗುಪ್ತನ ಮಗ ಎರಡನೆಯ ಚಂದ್ರಗುಪ್ತನು (376–414)ರ ಕಾಲಮಾನದಲ್ಲಿ ಗುಪ್ತಚಕ್ರವರ್ತಿಗಳು ವೈಷ್ಣವ ಪಂಥದ ಪ್ರತಿಪಾದಕರಾಗಿದ್ದರು. ಇದನ್ನು ಹಿಂದೂಸ್ಥಾನ ದಕ್ಷಿಣಾಪಥ ಮತ್ತು ದಕ್ಷಿಣ ಭಾರತದ ಅನೇಕ ರಾಜಮನೆತನದವರು ಅನುಸರಿಸಿದರು. ಗುಪ್ತಯುಗದಲ್ಲಿ ವೈಷ್ಣವ ಧರ್ಮ ವಿಷ್ಣುವಿನ ಅವತಾರಗಳ ಪೂಜೆಯಿಂದಾಗಿ ಹೆಚ್ಚು ಜನಪ್ರಿಯತೆ ಪಡೆಯಿತು. ಮಧ್ಯಕಾಲೀನ ಯುಗದಿಂದ ಸಾರ್ವತ್ರಿಕವಾಗಿ ಮತ್ಸ್ಯ, ಕೂರ್ಮ, ವರಾಹ, ವಾಮನ, ನರಸಿಂಹ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಇದನ್ನು ಮುಖ್ಯವಾಗಿ ಪರಿಗಣಿಸಲಾಗಿದೆ.

ಕ್ರಿ.ಶ. 6–7ನೇ ಶತಮಾನದಲ್ಲಿ ತಮಿಳುನಾಡಿನ ಆಳ್ವಾರರು ವೈಷ್ಣವ ಧರ್ಮವನ್ನು ಹೆಚ್ಚು ಪ್ರಚಾರಕ್ಕೆ ತಂದರು. ಆಳ್ವಾರರು ಬರೆದ ಪ್ರಬಂಧಗಳಿಗೆ ತಮಿಳಿನ ವೇದಗಳೆಂಬ ಹೆಸರಿದೆ. ಪೊಯ್ಗ, ಪೊದಮ್, ಪೆಯ್, ತಿರುವಳಿಶೈ, ನಮ್ಮಾಳ್ವಾರ್, ಕುಲಶೇಖರ, ಪರಿಯಾಳ್ವರ್, ಗೋದ (ಅಂಡಾಳ್) ತೊಂಡಂಡಿಪ್ಪೊತಿ, ತಿರುಮಂಗೈ, ಆಳ್ವಾರರುಗಳು ಪ್ರಮುಖರು.

ಕ್ರಿ.ಶ.14ನೇ ಶತಮಾನದ ಕೊನೆಗೆ ಶ್ರೀವೈಷ್ಣವ ಮತ ಹೊಡೆದು ವಡಗಲೆ ಮತ್ತು ತೆಂಗಲೆಯಾಗಿ ವಿಭಾಗವಾದವು, ಧಾರ್ಮಿಕ ವಿಧಿವಿಧಾನಗಳಲ್ಲಿ ಹಾಗೂ ಪೂಜಾ ವಿಧಾನದಲ್ಲಿ ಭಿನ್ನಾಭಿಪ್ರಾಯ ಮಾಡಿದುದೇ ಇದರ ಇಬ್ಭಾಗಕ್ಕೆ ಕಾರಣವಾಯಿತು. 13ನೆಯ ಶತಮಾನದ ಕೊನೆಯಲ್ಲಿ ಕರ್ನಾಟಕದಲ್ಲಿ ದಾಸಪಂಥ ಪ್ರಾರಂಭವಾಯಿತು. ಕೃಷ್ಣನನ್ನು ಆರಾಧ್ಯ ದೈವನನ್ನಾಗಿ ಮಾಡಿಕೊಂಡ ಈ ಪಂಥ ಕೀರ್ತನೆಗಳ ಮೂಲಕ ಧರ್ಮ ಪ್ರಚಾರ ಕಾರ್ಯವನ್ನು ಕೈಗೊಂಡಿತು. ಇದರಲ್ಲಿ ಪುರಂದರದಾಸ, ಕನಕದಾಸ, ಗೋಪಾಲದಾಸ, ವಿಜಯದಾಸ ಪ್ರಮುಖರು ಗುರುಗಳ ಮೂಲಕ ದೀಕ್ಷೆಯನ್ನು ಪಡೆದು ಹರಿನಾಮ ಕೀರ್ತನೆಯನ್ನು ಮಾಡುವುದು ಇವರ ಮುಖ್ಯ ಉರಿಯಾಗಿತ್ತು. ಕ್ರಿ.ಶ.18ನೆಯ ಶತಮಾನದವರೆಗೆ ಈ ಪಂಥ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಮಧ್ಯಕಾಲೀನ ಸಮಯದಲ್ಲಿ ವಿವಿಧ ಪ್ರದೇಶಗಳ ಜನಸಾಮಾನ್ಯರೂ ವಿಷ್ಣುವಿನ ಭಕ್ತರಾಗುವಂತೆ ಪ್ರಚೋದನೆ ನಡೆದವು.

ಕರ್ನಾಟಕದಲ್ಲಿ ಕ್ರಿ.ಶ. ಕಾಲದ ಆದಿಶತಕಗಳಿಂದಲೇ ವೈಷ್ಣವ ಧರ್ಮವು ಪ್ರಚಲಿತವಿತ್ತು ಎಂಬ ಸಂಗತಿ ಕ್ರಿ.ಶ.1117 ರಲ್ಲಿ ರಾಮಾನುಜಾಚಾರ್ಯರ ಬೋದನೆಗಳಿಂದ ಪ್ರೇರೇಪಿಸಲ್ಪಟ್ಟ ಸಪ್ತ ಮುದ್ರಾಂಕಿತವಾಗಿ ಬಿಟ್ಟದೇವನು ಶ್ರೀವೈಷ್ಣವ ಮತಾವಲಂಬಿಯಾದನು. ತನ್ನ ಹೆಸರನ್ನು ವಿಷ್ಣುವರ್ಧನನೆಂದು ಬದಲಾಯಿಸಿಕೊಂಡನು. ತಮಿಳುನಾಡಿನಲ್ಲಿ ಹರಡಿದ ಭಕ್ತಿಪಂಥದ ಪ್ರವಾಹದ ಅಂಶವೇ ಅದು. ಉತ್ತರ ಕದಂಬರ ಕ್ರಿ.ಶ.1095ರಲ್ಲಿ ದೇವದೇವ ಮಹಾರಾಜ ಕದಂಬರ ಅರಸುಗಳೇ ಬೇಲೂರು ಶಾಶನದ ಪ್ರಕಾರ ದಯಸಿಂಹನೃಪ ಹಾಗೂ ಆತನ ತಾಯಿ

ಅರಸಿಮೇಜಲದೇವಿ ಇವರು ಹಾರುವ ಬೇಲುಹೂರಲ್ಲಿ ವಾಸುದೇವನಿಗೆ ದೇವಾಲಯವನ್ನು ಕಟ್ಟಿಸಿ ಅಲ್ಲಿಗೆ ಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವಾಲಯದಲ್ಲಿ ಶ್ರೀ ಕಾರ್ಯಕ್ಕೆಂದು ದತ್ತಿಬಿಟ್ಟರು.[44]

ಕ್ರಿ.ಶ.1181ರ ಚೆನ್ನರಾಯಪಟ್ಟಣ ಶಾಸನದಲ್ಲಿ ಹೊಯ್ಸಳ ಮಂತ್ರಿ ಮಾಚಿರಾಜನು ಶಾಂತಲದೇವಿ ಶಾಂತಲೇಶ್ವರ ದೇವರ ಪ್ರತಿಷ್ಠೆ ಮಾಡಿಸಿ ರೇಚಶಕ್ತಿ ಮಗ ಶಾಂತಿಶಕ್ತಿಗೆ ಭೂಮಿದಾನ ಮಾಡಿದ ವಿಚಾರ ತಿಳಿದುಬರುತ್ತದೆ. ಇವರ ಶಿಷ್ಯ ಕಲ್ಯಾಣ ಶಕ್ತಿ ಕಲಿದೇವ ದೇವಸ್ಥಾನದ ಆಚಾರ್ಯ ಎಲ್ಲಾ ಗೌಡ ಪ್ರಜೆಗಳು ದೇವರ ಸೇವೆಗೋಸ್ಕರ ಎಣ್ಣೆಗಾಣ ದೀಪಸ್ತಂಭ ದಾನ ನೀಡಿದ್ದಾರೆ. 1191 ರ ತಳಲೂರು ಶಾಸನದಲ್ಲಿ ಸಂಕಣ್ಣನು ಚನ್ನಕೇಶವ ದೇವಾಲಯವನ್ನು ಕಟಿಸಿ ಅದರ ಪ್ರತಿಷ್ಠಾಪನೆಯನ್ನು ಮಾಡಿಸಿದನು. ಮಹಾಪ್ರಧಾನ ಚಂದ್ರಮೌಳಿಯಣ್ಣನು 9 ಗದ್ಯಾಣಗಳನ್ನು ದೇವಾಲಯಕ್ಕೆ ದಾನವಿತ್ತನು. ಒಂದು ಮರ ಪಂಡಿತನಹಳ್ಳಿ ಶಾಸನದಲ್ಲಿ ಮೊದಲದೇವಿ ಲಕ್ಷ್ಮೀನಾರಾಯಣ ದೇವಾಲಯ ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ.

1252 ರಲ್ಲಿ ಅಗ್ರಹಾರ ಬೆಳಗುಲಿ ಶಾಸನದ ಪ್ರಕಾರ ಕೇಶವ ದೇವರ ಸೇವೆಗೋಸ್ಕರ ತಗಡೂರು ಗ್ರಾಮಗಳನ್ನು ಪಡೆದುಕೊಂಡ ವಾರ್ಷಿಕವಾಗಿ 40 ಗದ್ಯಾಣಗಳನ್ನು ಕೊಟ್ಟ ಬಗ್ಗೆ ತಿಳಿಸುತ್ತದೆ. ಕ್ರಿ.ಶ.139ರ ಆನೆಕೆರೆ ಶಾಸನದಲ್ಲಿ ಲಬಣ್ಣವುಡೆಯರ ನಿರೂಪದ ಮೇರೆಗೆ ರಾಯಿಪೆಟ್ಟಿಯು ಚನ್ನಕೇಶವ ದೇವರ ಎಣ್ಣೆ ದೀಪಕ್ಕೋಸ್ಕರ ಧನ ದಾನವನ್ನು ನೀಡಿದನು. 1435 ರ ಎರಡನೇ ದೇವರಾಯನ ಕಾಲದ ನುಗ್ಗೇಹಳ್ಳಿ ಶಾಸನದಲ್ಲಿ ನರಸಿಂಹ ದೇವಾಲಯದಲ್ಲಿ ಕೆಲವು ವಿಗ್ರಹಗಳಿಗೆ ಸಂಪ್ರೋಕ್ಷಣೆಯನ್ನು ಮಾಡಿದ ವಿಷಯವಿದೆ.

ಮೂರನೇ ವಿರೂಪಾಕ್ಷ ಕ್ರಿ.ಶ.1472 ರಲ್ಲಿ ಅನುಗವಳ್ಳಿ ಶಾಸನದಲ್ಲಿ ತಿರುಮಲ ದೇವರ ಅಮೃತಪಡಿಗೆ 10 ಗದ್ಯಾಣಗಳನ್ನು ಎಳೆಯ ಪೆರುಮಾಳದಾಸರು ಅಶೇಷ ಮಹಾಜನಗಳು ದಾನ ನೀಡಿದ ವಿವರವಿದೆ. ಕ್ರಿ.ಶ.1478ರ ಚನ್ನರಾಯಪಟ್ಟಣ ಶಾಸನದಲ್ಲಿ ಮಲೆಯನಾಯಕನ ಮಗ ಬೊಮ್ಮೆಯನಾಯಕನು ಕೊಳತೂರು ಅಲಿಯಾಸ್ ಅಮೃತಪುರದ ಪ್ರಸನ್ನ ಕೇಶವ ದೇವರ ಸೇವೆಗೋಸ್ಕರ ನಿಗದಿಪಡಿಸಿದ ಭೂಮಿಯನ್ನು ಕೊಂಡು ದಾನ ನೀಡಿದ ವಿಚಾರವಿದೆ. ಚೆನ್ನರಾಯ ಪಟ್ಟಣ ತಾಲ್ಲೂಕಿನ ಅಗ್ರಹಾರ ಬೆಳಗುಲಿ ಗ್ರಾಮದ ಶಾಸನದ ಪ್ರಕಾರವಾಗಿ ವೀರಬಲ್ಲಾಳ ದೇವನ ಮಹಾ ಪ್ರಧಾನಿಯೂ ಬಾಹತ್ತರ ನಿಯೋಗಾಧಿಪತಿಯು ಆದ ಕೇಶಿರಾಜನು ನಿರ್ಗುಂದ ನಾಡಿನ ಪಂಜಾಡಿಯ ಬೆಳ್ಗಲಿಯನ್ನು ಕೇಶವಪುರವೆಂಬ ಹೆಸರಿನ ಅಗ್ರಹಾರವನ್ನು ಮಾಡಿದನೆಂದು ಶಾಸನ ತಿಳಿಸುತ್ತದೆ.

**ಜೈನಧರ್ಮ**

ಪ್ರಾಚೀನ ಪ್ರಮುಖ ಧರ್ಮಗಳಲ್ಲಿ ಒಂದಾದ ಜೈನಧರ್ಮಕ್ಕೆ ಕರ್ನಾಟಕದಲ್ಲಿ ತಲಕಾಡಿನ ಗಂಗರ ದೊರೆಗಳಿಂದ ರಾಜಾಶ್ರಯ ದೊರೆತಿರುವುದರಿಂದ ಅವರ ಕಾಲದಲ್ಲಿ ಚೆನ್ನರಾಯಪಟ್ಟಣ ತಾಲ್ಲೂಕಿನ ಜೈನ ಬಸದಿಗಳು ನಿರ್ಮಿಸಲ್ಪಟ್ಟಿವೆ.

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮವು ಒಂದು ಪ್ರಬಲ ಧರ್ಮವಾಗಿತ್ತು.[45] ಜೈನಧರ್ಮವು ಕ್ರಿಸ್ತಪೂರ್ವದಲ್ಲಿಯೇ ಉತ್ತರ ಭಾರತದಿಂದ ಕರ್ನಾಟಕಕ್ಕೆ ಬಂದು ಒಂದು ಹೊಸ ಪಂಥವನ್ನು ಸ್ಥಾಪಿಸಿತು. ಅಲ್ಲದೆ ಒಂದು ಸಾವಿರ ವರ್ಷಗಳವರೆಗೆ ಒಂದು ಪ್ರಬಲ ಪಂಥವಾಗಿ ಬೆಳೆಯಿತು. [46] ತದನಂತರ ಜೈನರಲ್ಲಿ ಪ್ರಮುಖವಾಗಿ ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪಂಥಗಳು ಹುಟ್ಟಿಕೊಂಡವು. ದಿಗಂಬರ ಸಂಪ್ರದಾಯವನ್ನು ಒಪ್ಪಿಕೊಂಡಿದ್ದಂತಹ ಜೈನರು ಮಗಧದಲ್ಲಿ ಉಂಟಾದ ಮಹಾಕ್ಷಾಮದ ಪರಿಣಾಮವಾಗಿ ದಕ್ಷಿಣದಲ್ಲಿ ಆಶ್ರಯ ಪಡೆಯಲು ಭದ್ರಬಾಹು ಮತ್ತು ತನ್ನ ರಾಜಶಿಷ್ಯ ಚಂದ್ರಗುಪ್ತ ಮೌರ್ಯ ಮತ್ತಿತರ ಅಪಾರ ಶಿಷ್ಯವರ್ಗದೊಂದಿಗೆ ವಲಸೆ ಹೊರಟು ಬಂದರು. ಇದರ ಫಲವಾಗಿ ದಿಗಂಬರ ಸಮುದಾಯವು ಮೈಸೂರು (ಮಹಿಷಮಂಡಲ) ಪ್ರಾಂತ್ಯದಲ್ಲಿ ಬೇರೂರಿ ಶ್ರವಣಬೆಳಗೋಳವನ್ನು ಒಂದು ಪ್ರಮುಖ ಜೈನ ಕೇಂದ್ರವನ್ನಾಗಿ ಮಾಡಿಕೊಂಡರು. [47] ಕರ್ನಾಟಕಕ್ಕೆ ಕ್ರಿಸ್ತಪೂರ್ವದಲ್ಲಿಯೇ ಜೈನರು ವಲಸೆ ಬಂದವರೆಂದು ಪ್ರತೀತಿ ಇದ್ದರೂ ಇದರ ವಾಸ್ತುಶಿಲ್ಪಗಳು ದೊರೆಯುವುದು. ಕ್ರಿ.ಶ.6–7ನೇ ಶತಮಾನದಿಂದೀಚೆಗೆ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರ ಕಾಲದಲ್ಲಿಯೇ ಜೈನ ಗುಹೆಗಳನ್ನು ಖಂಡರಿಸಲಾಗಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೂ ಜೈನ ವಾಸ್ತುವು ಇದ್ದಿತು.[48] ಸೂಪ್ತಗಳಿಗಿಂತ ಹೆಚ್ಚಾಗಿ ಜೈನರು ಗುಹಾ ವಾಸ್ತುಗಳನ್ನು ವ್ಯಾಪಕವಾಗಿ ಬಳಸಿದ್ದಾರೆ. ಕ್ರಿ.ಪೂ.2ನೆಯ ಶತಮಾನದಿಂದ ಕ್ರಿ.ಶ.10ನೆಯ ಶತಮಾನದವರೆಗೂ ದೇಶದ ನಾನಾ ಭಾಗಗಳಲ್ಲಿ ಜೈನಯತಿಗಳ ವಾಸಕ್ಕಾಗಿಯೇ ಜಿನಮಂದಿರಗಳಗಾಗಿಯೋ ಗುಹೆಗಳನ್ನು ಕೊರೆದಿರುವುದು ಸ್ವಾಭಾವಿಕ ಗುಹೆಗಳನ್ನು ಮಾರ್ಪಡಿಸಿರುವುದು ಕಂಡುಬರುತ್ತದೆ. [49]

ಕರ್ನಾಟಕದಲ್ಲಿ ಅನೇಕ ರಾಜಮನೆತನಗಳು ಕೊಟ್ಟ ಪ್ರೋತ್ಸಾಹದಿಂದ ಜೈನ ವಾಸ್ತುಶಿಲ್ಪ ವಿಸ್ತಾರವಾಗಿಯೂ ವೈವಿಧ್ಯಮಯವಾಗಿಯೂ ಬೆಳೆಯಲು ಅವಕಾಶವಾಯಿತು. ಗಂಗರ ಕಾಲದಲ್ಲಿ ಜೈನ ವಾಸ್ತುಶಿಲ್ಪ ವಿಫುಲವಾಗಿತ್ತು. ಶ್ರವಣ ಬೆಳಗೊಳದ ದೊಡ್ಡಬೆಟ್ಟದಲ್ಲಿ (ಇಂದ್ರಗಿರಿ)ಯಲ್ಲಿ ಜೈನ ಮೂರ್ತಿಶಿಲ್ಪದ ಪರಾಕಾಷ್ಠೆಯಾದ ಗೊಮ್ಮಟೇಶ್ವರನ ಶಿಲ್ಪ ಚಾವುಂಡರಾಯನಿಂದ ನಿರ್ಮಾಣವಾಯಿತು. [50] ಚೆನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಹಲವಾರು

ಕಡೆ ಜೈನಬಸದಿಗಳು ಕಂಡುಬರುತ್ತವೆ. ಅವುಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿರುತ್ತದೆ.

ಜೈನರ ವಾಸ್ತುಶಿಲ್ಪವನ್ನು ಕುರಿತಂತೆ ಪ್ರಮುಖವಾಗಿ ನಾಲ್ಕು ಗುಂಪುಗಳಲ್ಲಿ ಕಾಣಬಹುದು. ಸುಂದರತರ ವೈರಾಗ್ಯಪರ ಜನರ ನಗ್ನ ಮೂರ್ತಿಗಳು, ಕಾಯೋತ್ಸರ್ಗ (ಖಡ್ಗಾಸನ) ದಲ್ಲಿರುವ ಗೊಮ್ಮಟ ಶಿಲ್ಪ, ಬೃಹದಾಕಾರದ ಮಾನಸ್ತಂಭಗಳು, ಕುಸುರಿ ಕೆಲಸದಿಂದ ಕಂಗೊಳಿಸಿರುವ ಯಕ್ಷ-ಯಕ್ಷಿಯರ ಮೂರ್ತಿ ಶಿಲ್ಪಗಳು[51] ಜೈನ ವಾಸ್ತುವಿನಲ್ಲಿ ಕೆಲವು ಜೈನ ಧರ್ಮದ ಕಥಾನಿರೂಪಣಾ ಶಿಲ್ಪಗಳನ್ನು ಬಿಟ್ಟರೆ ಉಳಿದಂತೆ ವಾಸ್ತು ರೀತಿಯಲ್ಲಾಗಲಿ ಯಕ್ಷ ಯಕ್ಷಿಯರು ಅಲಂಕರಣ ಶಿಲ್ಪಗಳು ಪ್ರಾಣಿ, ಪಕ್ಷಿ, ಪ್ರಕೃತಿ ಮತ್ತು ಮಾನವರ ಶಿಲ್ಪಗಳು ಮುಂತಾದವನ್ನು ತೋರಿಸುವಲ್ಲಿ ಜೈನ, ಬೌದ್ಧ, ವೈದಿಕ, ಸಂಪ್ರದಾಯದ ಭಾರತೀಯ ವಾಸ್ತುಶೈಲಿಯನ್ನು ನೋಡಬಹುದು. ಹೊಯ್ಸಳ ದೊರೆಗಳಲ್ಲಿ ಬಹುಮಂದಿ ಜೈನಧರ್ಮೀಯರಾಗಿದ್ದರು ಮತ್ತು ಅವರು ಜೈನ ದೇವಾಲಯಗಳ ಮತ್ತು ಜೈನ ಸಂಘಸಂಸ್ಥೆಗಳ ಆಶ್ರಯದಾತರಾಗಿದ್ದು, ಅವುಗಳ ಉಚ್ಛ್ರಾಯ ಸ್ಥಿತಿಗೆ ಬೇಕಾದ ಸಹಾಯ ಸಂಪತ್ತುಗಳನ್ನು ಉದಾರವಾಗಿ ಒದಗಿಸುತ್ತಿದ್ದರು. ದಕ್ಷಿಣ ಭಾರತದಲ್ಲಿ ಸರ್ವತ್ರ ಕಂಡುಬರುವ ಜೈನ ಬಸದಿಗಳು ತೀರ್ಥಂಕರರ ಪ್ರತಿಮೆಗಳು ಗುರುಗಳ ಸಮಾಧಿ ಸ್ಥಾನಗಳಾದ ನಿಸಧಿಗಳು ಮತ್ತು ಶಾಸನಗಳು ಹೊಯ್ಸಳರ ಕಾಲದ್ದಲಿ ಹೆಚ್ಚು ಜನಪ್ರಿಯವಾಗಿದ್ದವು. ಅನಂತರದಲ್ಲಿ ವಿಜಯನಗರದ ಅರಸರು ಮೈಸೂರಿನ ಒಡೆಯರ್ ಸಹ ಪ್ರಮುಖರಾಗಿರುತ್ತಾರೆ.

ಜೈನಬಸದಿಗಳ ನಿರ್ಮಾಣ ಗಂಗರ ಕಾಲದಲ್ಲಿ ಜನಪ್ರಿಯವಾಗಿತ್ತೆಂಬುದು ತಿಳಿದ ವಿಚಾರವಾಗಿದೆ. ಶ್ರವಣಬೆಳಗೊಳದಲ್ಲಿ ಗಂಗರ ಮಂತ್ರಿ ಚಾವುಂಡರಾಯ ನಿರ್ಮಿಸಿದ ಪಾರ್ಶ್ವನಾಥ ಬಸದಿ ಅಥವಾ ಚಾವುಂಡರಾಯ ಬಸದಿ ಒಂದು ಉತ್ತಮ ಉದಾಹರಣೆಯಾಗಿದೆ.[52] ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿ ಅನೇಕ ಬದದಿಗಳು ನಿರ್ಮಾಣಗೊಂಡವು. ಬಸದಿಗಳ ವಾಸ್ತುಶಿಲ್ಪವನ್ನು ಬೇರೆ ಅಧ್ಯಾಯದಲ್ಲಿ ಬಗೆ ಬಗೆಯಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಬಸದಿಗಳು, ಏಕಶಿಲಾಮೂರ್ತಿಗಳು, ಮಾನಸ್ತಂಭಗಳು ಸಹ ಸೇರಿರುತ್ತವೆ.

**ಕ್ರೈಸ್ತಧರ್ಮ**

ಭಾರತ ದೇಶದಲ್ಲಿ ಯೇಸುಕ್ರಿಸ್ತನ ಹನ್ನೆರಡು ಮಂದಿ ಶಿಷ್ಯರುಗಳಲ್ಲಿ ಒಬ್ಬನಾದ ಸಂತತೋಮಾ ಕ್ರಿ.ಶ. ಸುಮಾರು 42 ರ ಅವಧಿಯಲ್ಲಿ ದಕ್ಷಿಣ ಭಾರತಕ್ಕೆ ಬಂದು ಈ ಭಾಗದಲ್ಲಿ ಕ್ರೈಸ್ತ ಧರ್ಮ ಪ್ರಚಾರ ಮಾಡಿದ. ಅಲ್ಲಿನ ಮಲಬಾರ್ ಮತ್ತು ಮದ್ರಾಸ್ ಪ್ರಾಂತ್ಯದಲ್ಲಿ ಅನೇಕ

ಸಭೆಗಳನ್ನು ಸ್ಥಾಪಿಸಿದ್ದ ಈತ ಮದ್ರಾಸಿನಲ್ಲಿ ಕೊಲ್ಲಲ್ಪಡುವ ಮೊದಲೆ ಕರ್ನಾಟಕಕ್ಕೆ ಬಂದಿದ್ದನೆಂದು ಕೆಲವು ಕ್ರೈಸ್ತ ಧಾರ್ಮಿಕರು ಹೇಳುತ್ತಾರೆ[53] ವಿದೇಶಗಳಿಂದ ಬಂದ ಫ್ರಾನ್ಸಿಸ್ಕಾನ್ ಹಾಗೂ ಡೊಮೆನಿಕನ್ ಸಭೆಯ ಕ್ರೈಸ್ತ ಗುರುಗಳು ಕ್ರಿ.ಶ.1325 ರಿಂದ ಈಚೆಗೆ ಭಾರತಕ್ಕೆ ಬಂದು ಕ್ರೈಸ್ತ ಧರ್ಮದ ಪ್ರಚಾರ ಕಾರ್ಯವನ್ನು ಕೈಗೊಂಡಿರುತ್ತಾರೆ.

ಕರ್ನಾಟಕದಲ್ಲಿ 1498 ರಲ್ಲಿ ವಾಸ್ಕೋಡಗಾಮ ಕೇರಳದ ಕಲ್ಲಿಕೋಟೆಗೆ ಬಂದು ಸಮುದ್ರ ಮಾರ್ಗ ಕಂಡುಹಿಡಿದ ಮೇಲೆ ಪೋರ್ಚುಗೀಸರು ಹೆಚ್ಚಿನ ಸಂಖ್ಯೆಯಲ್ಲಿ ಭಾರತಕ್ಕೆ ಬಂದ್ರು. ಇವರು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ನೆಲೆನಿಂತು ವ್ಯಾಪಾರ ಪ್ರಾರಂಭಿಸಿದರು. ತದನಂತರ ಕರ್ನಾಟಕದಲ್ಲಿ ಕ್ರೈಸ್ತ ಧರ್ಮದ ಸ್ಪಷ್ಟ ಗುರುತುಗಳನ್ನು ಕಾಣಬಹುದು. [54] ನಾಲ್ಕನೆ ಶತಮಾನದಲ್ಲಿ ಮಲಬಾರಿನಲ್ಲಿ ಕ್ರೈಸ್ತ ಧರ್ಮ ಪ್ರಚಾರದಲ್ಲಿತ್ತೆಂದೂ ಕ್ರಿ.ಶ.345 ರಲ್ಲಿ ಶ್ರೀಮಂತ ಕ್ರೈಸ್ತನೊಬ್ಬನು ಬಂದಿದ್ದರ ಬಗ್ಗೆಯೂ 520 ರಲ್ಲಿ ಇಲ್ಲಿಯ ಚರ್ಚುಗಳ ಬಗ್ಗೆಯೂ ಉಲ್ಲೇಖವಿದ್ದು, ಕ್ರಿ.ಶ.1324 ರಲ್ಲಿ ಐದು ಮಂದಿ ಡೊಮನಿಕ್ ಪಾದ್ರಿಗಳು ಕರ್ನಾಟಕದಲ್ಲಿ ಪ್ರಚಾರ ಕೈಗೊಂಡಿದ್ದ, ಆಗ ಹತ್ತು ಸಾವಿರ ಕ್ರೈಸ್ತರಿದ್ದರು ಎಂದು ಬೆಂಗಳೂರು ಜಿಲ್ಲೆಯ ಅನೇಕಲ್ಲಿನಲ್ಲಿ 1400 ಕ್ರಿಅಸ್ತ ಧರ್ಮಿಯನೊಬ್ಬನ ಸಮಾಧಿ ಶಿಲೆಯಿರುವುದಾಗಿಯೂ ತಿಳಿದುಬರುತ್ತದೆ[55] ವಾಸ್ಕೋಡಿಗಾಮ 1498 ರಲ್ಲಿ ಕಲ್ಲಿಕೋಟೆಗೆ ಬಂದಾಗ ಅಲ್ಲಿಯ ದೇವಾಲಯವೊಂದನ್ನು ತೋರಿಸಿ ಅದು ಮೇರಿಯದೆಂದೂ ಭಿತ್ತಿಚಿತ್ರಗಳು ಕ್ರೈಸ್ತ ಸಾಧು ಸಂತರದೆಂದೂ ನಂಬಿಸಲಾಗಿದೆ. ಕೇರಳದ ಚೇಪರ್ಡ್‌ನಲ್ಲಿರುವ ಆಸ್ತಿಕ ಪಂಗಡದ ಸಿರಿಯನ್ನರ ಚರ್ಚ್‌ಗಳಲ್ಲಿ 16ನೇ ಶತಮಾನದ ಕೆಲವು ಭಿತ್ತಿ ಚಿತ್ರಗಳಿವೆ. ಆದರೆ ಚಿತ್ರ ಮತ್ತು ವಿವರಣೆಗಳಲ್ಲಿ ಹೊಂದಾಣಿಕೆ ಇಲ್ಲ.

ಪೋರ್ಚುಗೀಸರು 1510 ರಲ್ಲಿ ಗೋವ ವಶಪಡಿಸಿಕೊಂಡು ಕಟ್ಟಡಗಳ ರಚನೆ ಮಾಡಿದರು. 1560 ರಲ್ಲಿ ಗಾಮೆಯಲ್ಲಿ ಆಸ್ತಿಕರಲ್ಲದ ಪಂಗಡದವರನ್ನು ಶಿಕ್ಷಿಸಲು ಇನ್‌ಕ್ವಿಜಿಸನ್ ಆರಂಭವಗಿ 1812 ರವರೆಗೆ ಇದ್ದು ಅಪರಾಧಿಗಳನ್ನು ಮೆರವಣಿಗೆಯಲ್ಲಿ ತರುವಾಗ ಬಟ್ಟೆಯ ಮೇಲೆ ಚಿತ್ರ ವಿಚಿತ್ರವಾಗಿ ಚಿತ್ರಗಳು ಬರೆಯುತ್ತಿದ್ದರಲ್ಲದೆ, ಮರಣ ದಂಡನೆಯ ನಂತರ ಅವರ ಚಿತ್ರ ಬರೆಯಿಸಿ ಡೊಮೆನಿಕ್ ಚರ್ಚ್‌ನಲ್ಲಿ ತೂಗು ಹಾಕುತ್ತಿದ್ದರು. ಇದೊಂದು ಕ್ರೂರ ಆಚರಣೆಯಾದರೂ ಸಾವಿರಾರು ಕೈದಿಗಳ ಭಾವಚಿತ್ರ ರಚನೆಗೆ ಕಾರಣವಾಯಿತು. ಈಗ ಈ ಚಿತ್ರಗಳು ಉಳಿದುಬಂದಂತೆ ತೋರುವುದಿಲ್ಲ. ಆದರೆ ಗೋವೆಯನ್ನು ಆಳಿದ ವೈಸರಾಯ್‌ಗಳ ಭಾವಚಿತ್ರ ಸೆಕ್ಯಾಡ ಡ್ರಿಲ್‌ನಲ್ಲಿ ಇಂದಿಗೂ ಉಳಿದುಬಂದಿದೆ. ಯುರೋಪಿನಲ್ಲಿರುವಂತೆ

ಗೋಡೆಯ ಹಲವು ಚರ್ಚ್‌ಗಳಲ್ಲೂ ಕ್ರೈಸ್ತ ಸಾಧುಸಂತರ ಭಿತ್ತಿ ಚಿತ್ರ ರಚಿಸಿದ್ದು 1601 ರಲ್ಲಿಯೇ ದಾಖಲೆಯಾಗಿದೆ.

ದಕ್ಷಿಣಭಾರತದಲ್ಲಿ ವಿಜಯನಗರ 15-17ನೇ ಶತಮಾನದಲ್ಲಿ ವಿದೇಶಿ ಪ್ರವಾಸಿಗರನ್ನು ಆಕರ್ಷಿಸಿತು. ದೊಮಿಂಗೋಪಾಯೆಸ್, ಅಬ್ದುಲ್ ರಜಾಕ್ ಮುಂತಾದವರು ವಿಜಯನಗರ ವೈಭವದೊಂದಿಗೆ ಚಿತ್ರಕಲೆಯ ಬಗ್ಗೆ ಸಾಕಷ್ಟು ಸಂಗತಿಯನ್ನು ಹೇಳಿದ್ದಾರೆ. [56] ಲಿನ್‌ಸ್ಕೊತೆನ್ ಬಂದಿದ್ದಾಗ 1583 ವಿಜಯನಗರ ಅಂತಿಮ ದಿನಗಳನ್ನು ಕಾಣುತ್ತಿತ್ತು. ನರಸಿಂಹನ ರಾಜ್ಯದಲ್ಲಿ ಸೆಂಟ್‌ಥಾಮಸ್‌ನ ತನ್ನ ಧರ್ಮವನ್ನು ಎಷ್ಟು ಬೋಧಿಸಿದರೂ ಉಪಯೋಗವಾಗಲಿಲ್ಲ. ಬ್ರಾಹ್ಮಣರು ಅಡ್ಡಿ ಆತಂಕಗಳನ್ನು ಒಡ್ಡಿದ್ದರು. ಕೊನೆಗೆ ಸೆಂಟ್‌ಥಾಮಸ್‌ನನ್ನು ಮೋಸದಿಂದ ಕೊಂದರು. ಈ ಕೊಲೆಯ ಚಿತ್ರವನ್ನು ಇಂಡಿಯಾದ ಚರ್ಚ್‌ಗಳಲ್ಲಿ ಬರೆಯಲಾಗಿದೆ ಎಂದು ಲಿನ್‌ಸ್ಕೊತೆನ್ ಹೇಳುತ್ತಾನೆ. ಸೇಂಟ್‌ಥಾಮಸ್ ಬಂದು ಆ ವೇಳೆಗೆ ಹದಿನೈದು ಶತಮಾನಗಳೇ ಕಳೆದಿತ್ತು. ವಿಜಯನಗರ ಚೋಳಮಂಡಲದವರೆಗೂ ವ್ಯಾಪಿಸಿದ್ದಾಗ ಬುಕ್ಕರಾಯ ಸಹ ಮೈಲಾಪುರದ ಸೇಂಟ್‌ಥಾಮಸ್‌ನ ಇಗರ್ಜಿಗೆ ದತ್ತಿಬಿಟ್ಟಿದ್ದ ಆತನ ಪ್ರೋತ್ಸಾಹದಿಂದ ಚರ್ಚ್‌ಗಳಲ್ಲಿ ಥಾಮಸ್‌ನ ಕಥೆಯ ಚಿತ್ರಗಳನ್ನು ಬರೆಸಿರಬಹುದು. ಈತ ಹೇಳುವ ನರಸಿಗ ಎಂದರೆ ಸಾಳುವ ನರಸಿಂಹನೇ (1485-91) ಥಾಮಸ್ ಬಂದಾಗ ವಿಜಯನಗರ ಕಾಲದ್ಲಲಿ ದೇವಾಲಯಗಳಲ್ಲಿ ಚಿತ್ರ ಬೆರೆಸುವ ಪದ್ಧತಿ ಹೆಚ್ಚಾಗಿ ಮತ್ತೆ ಬಳಕೆಗೆ ಬಂದದ್ದು, ಅಂತೆಯೇ ಚರ್ಚ್‌ಗಳಲ್ಲಿ ಕ್ರೈಸ್ತಪರ ಚಿತ್ರಗಳ ರಚನೆಯಾಗಿರಬಹುದು. [57] ಇದಾದ ಹದಿನೇಳು ವರ್ಷಗಳಾದ ಮೇಲೆ ವಿಜಯನಗರದ ಇನ್ನೊಂದು ಶಾಕೆಯಾಗಿ ಚಂದ್ರಗಿರಿಯಲ್ಲಿ ಎರಡನೇ ವೆಂಕಟ ಕ್ರೈಸ್ತಮತೀಯರು ಚಿತ್ರಕಲೆ ಕಲಾವಿದರಿಗೆ ಅಕ್ಷರನಷ್ಟೇ ಆಸಕ್ತಿ ತೋರಿಸಿ ಪ್ರೋತ್ಸಾಹಿಸಿದ ಪೋರ್ಚುಗಲ್‌ನ ಫಾದರ್ ಡಿ.ಸ. ಹಾಗೂ ಕಾಸಿಯೋ ಎಂಬುವರು ವೆಂಕಟನ ಆಸ್ಥಾನಕ್ಕೆ ಬಂದು ಕೆಲವು ಕ್ರೈಸ್ತ ಮತೀಯರ ಭಾವಚಿತ್ರಗಳನ್ನು ಕೊಟ್ಟಾಗ ಅತ ಅವುಗಳನ್ನು ಅಚ್ಚರಿಯಿಂದ ನೋಡಿದನಲ್ಲದೆ ಸಭಾಸದಸ್ಯರಿಗೂ ತೋರಿಸಿದ. ಹೀಗೆ ದಕ್ಷಿಣ ಭಾರತದಲ್ಲಿ ಕ್ರೈಸ್ತ ಧರ್ಮ ಬೆಳೆಯಿತು. ಯುರೋಪಿನಿಂದ 1899 ರಲ್ಲಿ ಮಂಗಳೂರಿಗೆ ಬಂದ ಸಹೋದರ ಆ್ಯಂಟೋನಿ ಮೋಶ್ವಿನಿ ಅಲ್ಲಿಯ ಸೇಂಟ್ ಅಲಾಯಸಿಸ್ ಚರ್ಚ್‌ನಲ್ಲಿ 1902-1904 ರ ಅವಧಿಯಲ್ಲಿ ನೂರರು ಚಿತ್ರಗಳನ್ನು ಕ್ಯಾನ್‌ವಾಸ್ ಮೇಲೆ ರಚಿಸಿರುವುದು ಕಂಡುಬರುತ್ತದೆ. [58] 18-19ನೇ ಶತಮಾನದಲ್ಲಿ ಯುರೋಪಿನಿಂದ ಬಂದ ಅನೇಕ ಕಲಾವಿದರಲ್ಲಿ ಕೆಲವರು ಅಂದಿನ ಮೈಸೂರು ಸೀಮೆಗು ಬಂದರು. ಇಲ್ಲಿಯ ಹಲವಾರು ದೃಶ್ಯಗಳನ್ನು ಗ್ರಾಫಿಕ್ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಅದರಲ್ಲಿ ರಾಬರ್ಟ್‌ಹೋಮ್, ಎ ಅಲೆನ್, ಆರ್.ಎಚ್.ಕೋಲ್‌ಬ್ರೂಕ್, ಜೇಮ್ಸ್

ಹಂಟರ್, ಚಾರ್ಲ್ಸ್ ಗೋಲ್ಡ್ ಮುಂತಾದರ ಕೃತಿಗಳು ಕ್ರೈಸ್ತ ಧರ್ಮದ ಬಗ್ಗೆ ಮಾಹಿತಿ ನೀಡುತ್ತದೆ.

**ವೀರಶೈವ ಧರ್ಮ**

ಮೂಲತಃ ಈ ಧರ್ಮವು ಸಹ ಒಂದು ಪ್ರಾಚೀನ ಧರ್ಮವಾಗಿದೆ. ಇದು ದೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮ, ಪಂಡಿತಾರಾಧ್ಯ ಹಾಗೂ ವಿಶ್ವೇಶ್ವರರಾಧ್ಯ ಎಂಬ ಪಂಚಾಚಾರ್ಯರಿಂದ ಪ್ರಚಾರಗೊಂಡಿತು. ಅವರು ರಂಭಾಪುರಿ, ಉಜ್ಜಯಿನಿ, ಕೇದಾರ ಶ್ರೀಶೈಲ ಹಾಗೂ ಕಾಶಿಗಳಲ್ಲಿ ಮಠಗಳನ್ನು ಸ್ಥಾಪಿಸಿದರೆಂಬ ಪ್ರತೀತಿ ಇದೆ. ಬಸವಣ್ಣ ಅದಕ್ಕೆ ತಾತ್ವಿಕ ರೂಪಕೊಟ್ಟರು. ಇದರಲ್ಲಿ ಇಷ್ಟಲಿಂಗ ಪೂಜೆಗೆ ಆದ್ಯತೆ ಇದ್ದು, ಜಾತಿ, ಲಿಂಗ ಭೇದವಿಲ್ಲದೆ, ಎಲ್ಲರೂ ಇಷ್ಟಲಿಂಗ ಧರಿಸಬಹುದು. ಲಿಂಗ ದೀಕ್ಷೆ ಪಡೆದು ಲಿಂಗ ಧರಿಸುವುದರಿಂದ ಇದನ್ನು ಲಿಂಗಾಯಿತ ಧರ್ಮ ಎಂತಲೂ ಕರೆಯುತ್ತಾರೆ. ವೀರಶೈವ ಧರ್ಮದ ಪ್ರಕಾರ ಜಗತ್ತಿನಲ್ಲಿ ಎಲ್ಲವೂ ಶಿವಮಯವಾದುದರಿಂದ ಇಲ್ಲಿ ಯಾವುದು ಮಾಯೆಯಲ್ಲ. ವೀರಶೈವದಲ್ಲಿ ಲಿಂಗವೆಂದರೆ, ಶಿವ ಲಿಂಗ ಎದರೆ ಜೀವ, ಜೀವನು ಕ್ರಿಯಾಶೀಲನಾಗಿ ಆಸ್ಥೆಯಿಂದ ಶಿವನ ಲೀಲಾ ಕಾರ್ಯದಲ್ಲಿ ಭಾಗಿಯಾಗಿರಬೇಕು. ಸನ್ಯಾಸದ ಹೆಸರಿನಲ್ಲಿ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ಲಕ್ಷಿಸುವಂತಿಲ್ಲ. ಶಕ್ತಿಯಿಂದ ರೂಪಿತವಾದ ಈ ವಿಶ್ವದ ಕ್ರಿಯಾ ವಿಧಾನವನ್ನರಿತು ಕೊನೆಗೆ ಅದನ್ನು ಜಯಿಸಿ ನಿಲ್ಲಬೇಕು. ಈ ಹಿನ್ನೆಲೆಯಲ್ಲಿ ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿ ಬಹುತೇಕ ಗ್ರಾಮಗಳಲ್ಲಿ ವೀರಶೈವ ಮಠಗಳಿವೆ. ಅಲ್ಲದೆ ಶಿವಾಲಯಗಳಿದ್ದು, ಶಾಸನ ಸಾಹಿತ್ಯ, ಕೃತಿಗಳಲ್ಲಿ ವೀರಶೈವ ಧರ್ಮದ ಉಲ್ಲೇಖಗಳಿರುವುದು, ಚೆನ್ನರಾಯಪಟ್ಟಣ ಪ್ರದೇಶದಲ್ಲಿನ ವೀರಶೈವ ಅಥವಾ ಶಕ್ತಿ ವಿಶಿಷ್ಟಾದ್ವೈತ ಪಂಥ ಪ್ರಚಾರದಲ್ಲಿತ್ತೆಂಬುದನ್ನು ದೃಢಪಡಿಸುತ್ತದೆ.

ಕ್ರಿ.ಶ.12ನೇ ಶತಮಾನದಲ್ಲಿ ಬಸವಾದಿ ಶರಣ ಪರಂಪರೆ ತಮ್ಮ ತತ್ವ ಪ್ರಚಾರಕ್ಕಾಗಿ ಅನೇಕ ಶಿಷ್ಯರನ್ನೆ ನಾಡಿನಾದ್ಯಂತ ಕಳುಹಿಸಿದೆ. ಮಠಗಳು ಎಂದರೆ ಸನ್ಯಾಸಿಗಳು ವಾಸ ಮಾಡುವ ಸ್ಥಳ, ಧಾರ್ಮಿಕ, ಆಧ್ಯಾತ್ಮಿಕ, ಪ್ರಕಾರ ಕೇಂದ್ರ, ಜ್ಞಾನಕೇಂದ್ರ ಎನ್ನುವ ಅರ್ಥವಿರುವುದನ್ನು ಕಾಣಬಹುದು. ಲೌಕಿಕ ಬದುಕನ್ನು ತ್ಯಜಿಸಿ ಸಾಂಸಾರಿಕ ಜಂಜಾಟದಿಂದ ದೂರವಾಗಿ ಆಧ್ಯಾತ್ಮ ಧಾರ್ಮಿಕ ಸಿದ್ಧಿಸಾಧನೆಗಳನ್ನು ಕಂಡುಕೊಳ್ಳುವ ಪರಮಗುರುಗಳ ಮಠಗಳಲ್ಲಿನ ಸ್ವಾಮಿಗಳದ್ದು.

ಭಾರತ ದೇಶದಲ್ಲಿ ಈ ಧರ್ಮಕ್ಕೆ ಇರುವಷ್ಟು ಪ್ರಾಮುಖ್ಯತೆ ಬೇರೆ ಯಾವ ದೇಶದಲ್ಲಿಯೂ ಇರಲಿಕ್ಕಿಲ್ಲ. ಭಾರತದಲ್ಲಿ ಹಲವು ಧರ್ಮಗಳು ತಮ್ಮ ಅಸ್ತಿತ್ವನ್ನು

ಬೆಳೆಸಿಕೊಂಡಿದೆ. ಪುರಾತನ ಹಿಂದೂ ಧರ್ಮದಲ್ಲಿ ಅನೇಕ ಶಾಖೆಗಳು ಇದ್ದು, ಪ್ರತಿಯೊಂದು ಶಾಖೆಗೂ ಧರ್ಮಾಧಿಕಾರಿ ಅಥವಾ ಗುರುಗಳು ಇರುತ್ತಾರೆ. ಕರ್ನಾಟಕದಲ್ಲಿ ಒಂದು ಅಂದಜಿನ ಪ್ರಕಾರ 5706 ಮಠಗಳಲ್ಲಿ 3828 ಮಠಗಳು ಶಾಶ್ವತವಾಗಿ ನಾಶವಾಗದೇ ಉಳಿದ 1878 ಮಠಗಳನ್ನು ಗುರುತಿಸಬಹುದಾದರೂ ಅಸ್ತಿತ್ವದಲ್ಲಿರುವುವು 1089 ಮಾತ್ರ.

ಕರ್ನಾಟಕದಲ್ಲಿ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ವೀರಶೈವ ಮಠಗಳು ನೀಡಿದ ಕೊಡುಗೆ ಅಪಾರವಾಗಿದೆ. ಸಮಗ್ರ ಕರ್ನಾಟಕ ಬಹುಮುಖ ಅಭಿವೃದ್ಧಿಯ ಹಿಂದೆ ಈ ನಾಡಿನ ವೀರಶೈವ ಮಠಗಳ ಪಾತ್ರವನ್ನು ಮರೆಯುವಂತಿಲ್ಲ. ಸರ್ವಸಮನತೆಯ ನೆಲೆಗಟ್ಟಿನ ಮೇಲೆ ಮಾನವೀಯ ಮೌಲ್ಯಗಳನ್ನು ನಿಜ ಧರ್ಮದ ಬೆಳಕನ್ನು ನೀಡಿದ್ದಲ್ಲದೆ, ದಲಿತರಿಗೆ ನ್ಯಾಯ ದೊರಕಿಸಿಕೊಟ್ಟು ಅದರಲ್ಲಿ ಆತ್ಮಗೌರವ ಮೂಡುವಂತೆ ಮದುವೆಯಲ್ಲಿಯೂ ವೀರಶೈವ ಮಠಗಳು ಶ್ರಮಿಸಿವೆ.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಧಾರ್ಮಿಕ ಕ್ರಾಂತಿಯ ನಂತರ ಶರಣರು ತಮ್ಮ ತತ್ವಗಳನ್ನು ಸಾರಲು ನಾಡಿನಾದ್ಯಂತ ಪ್ರಯಾಣ ಬೆಳೆಸಿದಾಗ ಮೂರು ಸಾವಿರ ಶರಣರ ಗುಂಪು ಇತ್ತು. ಈ ಶರಣರ ಗುಂಪಿನ ನಾಯಕನಾದ ಶ್ರೀ ಗುರುಸಿದ್ಧ ಸ್ವಾಮಿಗಳು ಮಾರ್ಗ ಮಧ್ಯದ ಕಾಲ ಘಟ್ಟದಲ್ಲಿ ನೆಲೆನಿಂತಿತ್ತು ಎಂದು ಹೇಳಬಹುದು.

ಶ್ರೀ ಅಲ್ಲಮಪ್ರಭುಗಳಿಂದ ಪ್ರಾರಂಭಗೊಂಡ ಶೂನ್ಯ ಪೀಠವು ಕಲ್ಯಾಣ ಕ್ರಾಂತಿಯ ನಂತರ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಮಧ್ಯಪ್ರದೇಶ ಈ ರೀತಿ ದೇಶಾದ್ಯಂತ ಶೂನ್ಯಪೀಠದ ಪರಂಪರೆಯ ಮಠಗಳು ಸ್ಥಾಪನೆಗೊಂಡು ಹನ್ನೆರಡನೆಯ ಶತಮಾನದಲ್ಲಿ ಸ್ಥಾಪನೆಗೊಂಡ ಮೂರುಸಾವಿರ ಮಠವು ತತ್ವಗಳನ್ನು ಪ್ರಚಾರಗೊಳಿಸಿ ಈತನು ಬೆಳೆದು ವೀರಶೈವ ಧರ್ಮವನ್ನು ಅಭಿವೃದ್ಧಿ ಪಡಿಸಿರುವುದಲ್ಲದೆ, ಸಮಾಜದ ಒಂದು ಶಕ್ತಿಯಾಗಿ ರೂಪುಗೊಂಡಿದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಚೆನ್ನರಾಯ ಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿಯೂ ವೀರಶೈವ ಮಠಗಳು ಕಂಡುಬರುತ್ತವೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಮಲೆಯಾಳ ನೆಲೆಯಲ್ಲಿ ಶಾಸನ ಪ್ರಕಾರ ವೀರಶೈವ ವಂಶಾವಳಿಯ ವಂಶಾವೃಕ್ಷವಿದೆ. ಇದರಲ್ಲಿ ನಾನಾ ಜಾತಿಗಳಿಂದ ಬಂದು ವೀರಶೈವ ದೀಕ್ಷೆ ಪಡೆದಿದ್ದರು. ಈ ಭಾಗದ ಶಾಸನಗಳಲ್ಲಿ ಉಲ್ಲೇಖವಾಗಿರುವ ಜಂಗಮ, ಗುಣಕುಮಾರಿ, ವಿಭೂತಿಪಟ್ಟ ಇತ್ಯಾದಿ ವೀರಶೈವ ಪಾರಿಭಾಷಿಕ ಪದಗಳು ಇಲ್ಲಿನ ಶಾಸನದಲ್ಲಿ ಉಲ್ಲೇಖವಾಗಿರುವುದನ್ನು ಗಮನಿಸಿದರೆ, ಈ ಪ್ರದೇಶ ವೀರಶೈವಕ್ಕೆ ಆಗಲೇ ತೆರೆದುಕೊಂಡಿತ್ತು ಎನ್ನಬಹುದು. ವ್ಯಾಪಾರಿಯಾಗಿದ್ದ ಕುಂಜ ವೀರಶೈವ ಧರ್ಮದ ಆಚರಣೆಗಳಿಂದ ಆಕರ್ಷಿತನಾಗಿ ಲಿಂಗದೀಕ್ಷೆಯನ್ನು

ಮಾಡಿಸಿಕೊಂಡಿರಬಹುದು. [59] ವೀರಶೈವನಾಗಿದ್ದ ಕುಂಜ ಸೋಮನಾಥನ ಪರಮಭಕ್ತ, ಈತನ ಸಾವು ತಂದೆ ಕಂಡ ನಂಬಿಗೆ ಅಪಾರ ದುಃಖವನ್ನು ತಂದಿತು. ಅವನಿಗೆ ಕೃತಜ್ಞತೆ ಸೂಚಿಸಲೋ ಎಂಬಂತೆ ಅವನ ಹೆಸರು ಶಾಶ್ವತವಾಗಿ ಉಳಿಯಲಿ ಎಂಬ ಉದ್ದೇಶದಿಂದ ಕುಂಜನ ಹೆಸರಿನಲ್ಲಿ ಮುತ್ತನ ಹೊಸವೂರಿನಲ್ಲಿ ಶಿವಾಲಯವನ್ನು ನಿರ್ಮಿಸಿದ್ದನ್ನು ಕಾಣಬಹುದು. [60]

ಕಂಡನಂಬಿಯ ಕುಟುಂಬದಲ್ಲಿ ಏಕಮೇವ ಪುತ್ರವೀರಶೈವ ಧರ್ಮದ ಅನುಯಾಯಿ ಆಗಿದ್ದ ಕುಂಜನ ಸಾವು ಅವನ ಸಹೋದರಿ ಚಂದವ್ವೆಯ ಮೇಲೆ ತೀವ್ರ ಪ್ರಭಾವವನ್ನು ಬೀರಿತು. ಅವಳು ತನ್ನ ಸಹೋದರಿ ಅನುಸರಿಸುತ್ತಿದ್ದ ಧರ್ಮದ ಕಡೆಗೆ ಆಕರ್ಷಿತಳಾಗಿ ವೀರಶೈವಳಾದಳು. ಅವಳ ತೀರ್ಮಾನದಂತೆ ಕಂಡನಂಬಿಶೆಟ್ಟಿ ವಿರೋಧ ವ್ಯಕ್ತಪಡಿಸಲಿಲ್ಲ. ಅವಳಿಗೆ ವೀರಶೈವ ದೀಕ್ಷೆಯನ್ನು ಕೊಡಿಸಲು ವ್ಯವಸ್ಥೆ ಮಾಡಿದ್ದುದನ್ನು ಶಾಸನವು ತಿಳಿಸುತ್ತದೆ. ವೀರಶೈವ ಧರ್ಮದಲ್ಲಿ ಗುರುವು ದೀಕ್ಷಾಕಾಲದಲ್ಲಿ ತನ್ನ ಶಿಷ್ಯನಿಗೆ ಕೊಡುವ ಇಪ್ಪತ್ತೊಂದು ದೀಕ್ಷೆಗಳಲ್ಲಿ ಕಾಯಕ್ಕೆ ಸಮ್ಬಂಧಿಸಿದ ಒಂದು ದೀಕ್ಷೆ ವಿಭೂತಿಪಟ್ಟವಾಗಿದೆ.

ಅಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ಥಿಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯಿತ, ಲಿಂಗಸ್ವಾಯತ, ಈ ರೀತಿಯ ಕಾಯಕ್ಕು ಪ್ರವೇಶ ಮಾಡುವುದು. ವಿಭೂತಿಧಾರಣೆ ಮಾಡಿಸಿ ಗುರುಹಸ್ತ ಪುಸ್ತಕ ಸಂಯೋಗವನ್ನು ಮಾಡಿ ಇಷ್ಟಲಿಂಗವನ್ನು ನೀಡಿ ಶಿರದ ಮೇಲೆ ಗುರು ಹಸ್ತವನ್ನಿಟ್ಟ ಓಂ ನಮಃ ಶಿವಾಯ ಎಂಬ ಮಂತ್ರವನ್ನು ಹೇಳುವುದೇ ವಿಭೂತಿಪಟ್ಟವಾಗಿದೆ. [61] ಚಂದವ್ವೆಯ ಇಂತಹ ವೀರಶೈವ ದೀಕ್ಷಾ ಕಾರ್ಯಕ್ಕೆ ರಾಜಗುರು ರುದ್ರಶಕ್ತಿ ದೇವರು, ಸ್ಥಾನಿಕರು, ಕಂಪಣಚಾರಿ, ಮಾಠಜೀಯ, ಬೂತಜೀಯ, ಅನಂತಜೀಯ ಎಂಬ ಪ್ರಮುಖ ಕಾಳಾಮುಖ ಯತಿಗಳ ಜೊತೆಗೆ ಅಸಂಖ್ಯಾತ ಮಹಾಗನಂಗಳು ಆಗಮಿಸಿದರು. ಇದರಿಂದ ಅಂದು ಕಾಳಾಮುಖ ಯತಿಗಳೂ ವೀರಶೈವರ ಕಾರ್ಯಕ್ರಮಗಳಿಗೆ ಹಾಜರಾಗುತ್ತಿದ್ದ ಸಂಗತಿ ತಿಳಿದುಬರುತ್ತದೆ. ಇದರಿಂದ ವೀರಶೈವ ಧರ್ಮದ ಪ್ರಭಾವ ಮುತ್ತನ ಹೊಸವೂರಿನ ಪ್ರದೇಶದಲ್ಲಿ ವ್ಯಾಪಕವಾಗಿತ್ತು. ಶೆಟ್ಟಿಪಟ್ಟಣವಾಗಿದ್ದ ಆಲೂರಿನ ಕಂಡ ನಂಬಿಶೆಟ್ಟಿಯು ಕುಟುಂಬ ವೀರಶೈವ ದೀಕ್ಷೆ ಪಡೆದಿತ್ತು ಎಂದು ಸ್ಪಷ್ಟವಾಗಿ ತಿಳಿದುಬರುತದೆ. ಇಂದಿಗೂ ಈ ಗ್ರಾಮದಲ್ಲಿ ಲಿಂಗಾಯಿತ ಶೆಟ್ಟರೇ ಅಧಿಕ ಸಂಖ್ಯೆಯಲ್ಲಿದ್ದು ಕುಂಜೇಶ್ವರ ದೇವಾಲಯದ ಪೂಜಾಕಾರ್ಯ ಕ್ರಮಗಳನ್ನು ನಡೆಸಿಕೊಂಡು ಬರುತ್ತಿರುವುದು ಉಲ್ಲೇಖಾರ್ಹವಾಗಿದೆ. ಆದ್ದರಿಂದ ಹಾಸನ ಜಿಲ್ಲೆಯ ಕೆಲವೊಂದು ಪ್ರಾಂತ್ಯಗಳಲ್ಲಿ ವೀರಶೈವ ಮನೆತನಗಳಿವೆ. ಕ್ರಿ.ಶ.1132–33ರ ಶಾಸನದಲ್ಲಿ ಕುತ್ತಾರಜೀಯರು ಶಿವಾಲಯವೊಂದನ್ನು ಕಟ್ಟಿಸಿರುವ ವಿಚಾರ ತಿಳಿದುಬರುತ್ತದೆ.[62] ಬೆಳಗುಲಿಯಲ್ಲಿ ಕ್ರಿ.ಶ.1133 ರಲ್ಲಿ ಮಹಾದೇವ ಶಕ್ತಿಯು

ಶಿವಾಲಯವೊಂದನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. [63] ಕ್ರಿ.ಶ.11–6–1139 ರಲ್ಲಿ ಚಂಗಾಳ್ವರಸನು ಸಿದ್ಧಾಲಯವೊಮ್ದನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ.[64] ಕ್ರಿ.ಶ.12ನೇ ಶತಮಾನಕ್ಕೆ ಸೇರಿದ ನವಿಲೆಗ್ರಾಮದ ಶಾಸನವು ತಿಳಿಸಿರುವಂತೆ ನೀರ್ಗುಂದ ನಾಡಿನ ನಾಗರನವಿಲೆ ಎಂಬಲ್ಲಿ ಮಹದೇವ ಪಂಡಿತ ಮತ್ತು ರುದ್ರ ಸಿವಪಂಡಿತರು 60 ಹೊನ್ನಿಗೆ ದೇವಾಲಯವನ್ನೂ ಕೆರೆಯನ್ನು ಕಟ್ಟಿಸಿ ನಿತ್ಯ ನೈವೇದ್ಯ ನಡೆಯುವ ವ್ಯವಸ್ಥೆ ಮಾಡಿರುತ್ತಾರೆ. [65] ಕ್ರಿ.ಶ.12ನೇ ಶತಮಾನದ ಮಾಚನಘಟ್ಟದಲ್ಲಿನ ಶಾಸನವು ತಿಳಿಸುವಂತೆ ಬಿಲುಗಲದ ದಂಡನಾಯಕನು ಬೀಲೇಶ್ವರ ದೇವಾಲಯವನ್ನು ಕಟ್ಟಿಸಿ ಕೆಲವು ಗದ್ದೆ ಭಾಗವನ್ನು ನಂದಾದೀವಿಗೆಗೆ ಗುಣವೊಂದನ್ನು ದಾನ ನೀಡಿದ ಉಲ್ಲೇಖವಿದೆ. [66] ಚೆನ್ನರಾಯಪಟ್ಟಣದ ಕ್ರಿ.ಶ.1587ರ ಸ್ತಂಭ ಶಾಸನದಲ್ಲಿ ಫಿರಂಗಿ ಮಠ, ರಾಮೇಶ್ವರಗುಡಿ ಎರಡು ಸಿರಸಿನ ಬಸವ ಪ್ರತಿಷ್ಠೆ ಹಾಗೂ ಕೊಳ ಸಹಿತವಗಿ ಪಡುವಣ ಮಠವನ್ನು ನಿರ್ಮಿಸಿದ ಬಗ್ಗೆ ತಿಳಿದುಬರುತ್ತದೆ.

ಚೆನ್ನರಾಯಪಟ್ಟಾಣದ ದೊಡ್ಡಕೊಳದ ಮಠವನ್ನು ಕಾನ್‌ಕಾರ್‌ತನ (ಕಾಣಿಕಾರನ) ಹಳ್ಳಿಯ ಪ್ರಭು ಆಲೂರ ಭೀಮನ ಆಣತಿಯಂತೆ ಪಾತ್ಸಾಹ ಎಂಬುವನು ಕಲ್ಲಿನಕೋಟೆಯ ಜೊತೆಗೆ ಮಂಟಪ, ಕೊಳಸಹಿತವಾಗಿ ಕಟ್ಟಿಸಿರುವುದು ತಿಳಿದುಬರುತ್ತದೆ. [65] ಕ್ರಿ.ಶ.1647 ರ ಇದೇ ಕಾಣಿಕಾರನಹಳ್ಳಿಯ ಪ್ರಭು ದೊಡ್ಡಯ್ಯ ಎಂಬುವವನು ಚನ್ನರಾಯಪಟ್ಟಣದಲ್ಲಿ ಕಲ್ಲಿನಕೋಟೆ ಕಟ್ಟಿಸಿದ ಆ ಸಮಯದಲ್ಲಿ ಅವನ ಪಾರುಪತ್ಯಗಾರ ಕಲಸುಗೆರೆಯ ಸ್ಥಳದ ಕೆಂಪಣಗೌಡನು ಕಲ್ಲುಮಠ ಹಾಗೂ ಕೊಳವನ್ನು ಕಟ್ಟಿಸಿದ. [66] ಇದೇ ಕಾಲದ ಚೆನ್ನರಾಯಪಟ್ಟಣ ರಾಮೇಶ್ವರ ದೇವಾಲಯ ಶಾಸನವು ಪಾತ್ಸಾಹ ಎಂಬುವನು ಸಂಧ್ಯಾಮಠ, ಕೊಳಬಾವಿ, ಬಸವನ ಕಂಬ, ಉಯ್ಯಾಲೆ, ಕಂಬವನ್ನು ನಿರ್ಮಿಸಿದ ಸಂಗತಿ ತಿಳಿಯುತ್ತದೆ. ಬಹುಶಃ ಉಯ್ಯಾಲೆ ಕಂಬವು ಸುಗ್ಗಿ ಸ್ತಂಭ, ಸುಗ್ಗಿಕಟ್ಟೆಯನ್ನು ಸೂಚಿಸುವಂತಿದೆ. ಕ್ರಿ.ಶ.1664 ರ ಭಕ್ತರ ಹಳ್ಳಿ ಶಾಸನವು ಆಚರಣಾವಾಚಿಯಾಗಿ ವೀರಶೈವ ಮಠವಿದ್ದುದರ ವಿಚಾರ ತಿಳಿಸುತ್ತದೆ. ಭಕ್ತರ ಹಳ್ಳಿಮಠ ಎಂದು ಜನಜನಿತವಿದ್ದ ಸಂಗತಿಯನ್ನು ಸಹ ತಿಳಿಸುತ್ತದೆ.

ಚೆನ್ನರಾಯಪಟ್ಟಣ ತಾಲ್ಲೂಕಿನ ಮಠಗಳು ಅಣತಿ ಕೋಡಿಹಳ್ಳಿ ಮಠ, ಪಡುವಣ ಮಠ, ಸಂಧ್ಯಾಮಠ, ದೊಡ್ಡಕೊಳದ ಮಠ, ಚೆನ್ನರಾಯಪಟ್ಟಣ ಟೌನ್‌ಮಠ, ಕಲ್ಲುಮರ, ಫಿರಂಗಿ ಮಠ, ಭಕ್ತರ ಹಳ್ಳಿ ಮಠ ಇವೆಲ್ಲಾ ಇಂದು ಆಸ್ತಿ ಸಹಿತವಾಗಿ ಪರಾಧೀನಗೊಂಡಿವೆ. ಈ ಎಲ್ಲಾ ಆಧಾರಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆಯ ಕೆಲವೊಂದು ಪ್ರಾಂತ್ಯಗಳಲ್ಲಿ ವೀರಶೈವ ಧರ್ಮ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.

**ಮುಸ್ಲಿಂ ಧರ್ಮ (ಇಸ್ಲಾಂ ಧರ್ಮ)**

ಮಲಿಕ್‌ಖಾಫರನ ದಂಡಯಾತ್ರೆ (1310) ಹಾಗೂ ಬಹಮನಿ ಸಾಮ್ರಾಜ್ಯದ ಸ್ಥಾಪನೆಯೊಡನೆ ಈ ಧರ್ಮ ದಕ್ಷಿಣ ಭಾರತದಲ್ಲಿ ತ್ವರಿತವಾಗಿ ಹರಡಲಾರಂಭಿಸಿತು. ಮೊದಮೊದಲು ಇಲ್ಲಿ ನೆಲೆಸಿದ ಇಸ್ಲಾಮೀಯರು ಉತ್ತರ ಭಾರತದಿಂದ ಬಂದವರಾದರೂ ಅವರ ಅಧಿಕಾರ ದಕ್ಷಿಣದಲ್ಲಿ ತಲೆಯೂರಿದ ಮೇಲೆ ಉತ್ತರದವರೊಡನೆ ಅವರ ರಾಜಕೀಯ ಸಮ್ಬಂಧಗಳು ಸುಗಮವಾಗಿ ಉಳಿಯಲಿಲ್ಲ. ಬಹಮನಿ ರಾಜ್ಯ ಒಡೆದ ಮೇಲೆ ಹುಟ್ಟಿದ ಬರೀದ್‌ಶಾಹಿ, ಆದಿಲ್‌ಶಾಹಿ, ಕುತ್ಸ್‌ಶಾಹೀ, ರಾಜ್ಯಗಳ ಒಡೆತನ ಕಾಲದಲ್ಲಿ ಹಾಗೂ ಔರಂಗಜೇಬನ ಕಾಲದಲ್ಲಿ ಮುಂದೆ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಕಾಲಕ್ಕೆ ಈ ಭಾಗದಲ್ಲಿ ಇಸ್ಲಾಂ ಧರ್ಮ ವಿಶೇಷವಾಗಿ ಬೆಳೆಯಿತು.

ಕ್ರಿ.ಶ.7ನೇ ಶತಮಾನದಲ್ಲಿ ಉಗಮವಾದ ಈ ಧರ್ಮ ಮಲಿಕ್‌ಕಾಫರನ ದಂಡಯಾತ್ರೆ ಮತ್ತು ಬಹಮನೀ ಸಾಮ್ರಾಜ್ಯದ ಸ್ಥಾಪನೆಯಿಂದಾಗಿ ಬೇಗ ಪ್ರಸಾರವಾಗತೊಡಗಿತು. ಮುಂದೆ ವಿವಿಧ ಮುಸಲ್ಮಾನ ದೊರೆಗಳ ಆಶ್ರಯದಲ್ಲಿ ಅನುಯಾಯಿಗಳು ಹೆಚ್ಚಿದರು. ಇದರಲ್ಲಿ ಷಿಯಾ ಮತ್ತು ಸುನ್ನಿ ಎಂಬ ಎರಡು ಮುಖ್ಯ ಜಾತಿಗಳಿವೆ. ಪೈಗಂಬರರ ನಾಯಕತ್ವದ ಅನುಯಾಯಿಗಳು ಸುನ್ನಿಗಳು, ಅದರ ಸಂತಾನದಲ್ಲೇ ಇನ್ನೊಂದು ನಾಯಕತ್ವವನ್ನು ಅನುಸರಿಸಿದವರು ಷಿಯಾಗಳು ಹಾಸನಜಿಲ್ಲೆಯಲ್ಲಿ ಎರಡು ಮಾರ್ಗಗಳ ಅನುಯಾಯಿಗಳಿದ್ದಾರೆ.

ಮತ ಆಶ್ರಯ ಪದ್ಧತಿಗೆ ಸಂವಾದಿಯಾಗಿ ಈ ಧರ್ಮದಲ್ಲಿ ಖಾನ್‌ಖಾ ಎಂಬುದಿದೆ. ಇದರ ಮುಖಂಡರು ಖಲೀಫಾಗಳು ಇವರು ಆಧ್ಯಾತ್ಮವನ್ನು ಬೋಧಿಸುವಂತಹವರು ನಮಾಜ್‌ಗಿಮ್ತ ಅಂತರಂಗ ಶುದ್ಧಿ ಮುಖ್ಯ ಅಹಂಕಾರವನ್ನು ತೊರೆಯಬೇಕು. ತಾನೇ ಸಮಾಜ ಎಂದು ತಿಳಿದು ಜನಸೇವೆ ಮಾಡಬೇಕು ಎಂಬುದು ಇದರ ಬೋಧನೆ, ಇಂಥ ಖಾನ್‌ಖಾಗಳು ಈಗಲೂ ಮುಂಘೇರ್, ಅಜ್ಮೀರ್, ಅಲಹಾಬಾದ್, ಮುಂತಾದ ಕಡೆ ಇದ್ದಾರೆ. ಹಾಸನ ಜಿಲ್ಲೆಯಲ್ಲೂ ಹಿಂದೆ ಇಂತಹ ಖಾನ್‌ಖಾಗಳು ಇದ್ದರು.

50 ವರ್ಷಗಳ ಹಿಂದೆ ಇಲ್ಲಿಗೆ ಬಂದು ನೆಲೆಸಿದ ಗುರೂಜಿಗೆ ಕೇರಳದಿಂದ ಕಾಕಾಗಳು ಬ್ಯಾರಿಗಳು ಅಧಿಕ ಸಂಖ್ಯೆಯಲ್ಲಿ ಭಕ್ತರಿದ್ದಾರೆ. ಚೆನ್ನರಾಯಪಟ್ಟಣ ತಾಲ್ಲೂಕಿನಲ್ಲೂ ಇವರ ಕೇಂದ್ರಗಳು ಇವೆ.

## ಅಡ್ಡಿ ಟಿಪ್ಪಣಿಗಳು

1. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಸಂಪಾದಕ ಡಾ.ಚಿ.ಸಿ. ನಿಂಗಣ್ಣ– ಗುಲ್ಬರ್ಗಾ–2008.

2. ಕರ್ನಾಟಕ ಪರಂಪರೆ ಸಂಪುಟ–1

3. ಅದೇ

4. ಅದೇ

5. ಎಂ. ಚಿದಾನಂದಮೂರ್ತಿ, ಕ.ಶಾ.ಸಾ. ಅ

6. M.R.SAKHARE- History and Philosophy of Lingayat Religion- P.212.

7. V.S.PATHAR- History of Saiva cults in Northem India P.4-6.

8. ಮಹದೇಶ್ವರ ಸತ್ತ ಬ್ರಹ್ಮಚಾರಿಯ ದೇಹವನ್ನು ಹೊಕ್ಕು ಲಕುಲೀಶನಾಗಿ ಅವತರಿಸಿದನೆಂದು ಬ್ರಹ್ಮನಿಂದ ಎರಡು ಪದ್ಯಗಳಲ್ಲಿ ಟೀಕಿಸಿದ್ದಾನೆ.

9. ಆರ್.ಜಿ.ಭಂಡರ್‌ಕರ್‌ರವರು ತಿಳಿಸಿದ್ದಾರೆ.

10. ಎಂ.ಚಿದಾನಂದಮುರ್ತಿ ಕ.ಶಾ.ಸಾ. ಅ ಪು.130–131.

11. ಆರ್.ಎಸ್.ಗುಪ್ತ– ಆಯ್ ಹಿ. ಋ, ಜೈ. ಪು.16.

12. K.K. Handiv uI – A History of Indian Philosophy, P. 50.

13. ಅದೇ

14. S.N. Dasupta- A History of Indian- Philosphy P.50

15. ಪಿ.ವಿ.ನಾರಾಯಣ– ವಚನ ಸಾಹಿತ್ಯ– ಒಂದು ಸಾಂಸ್ಕೃತಿಕ ಅಧ್ಯಯನ ಪು.452–455

16. ಸ. ಪ. 14–50

17. S.N. Dasupta- A History of Indian- Philosphy P.50

18. ಎ.ಕ.ಸಂ.10 ರ ಪ್ರಾ್ಕರ ಶಾಸನ ಹಿನ್ನೆಲೆಯಲ್ಲಿ ಗುರುತಿಸಲಾಗಿದ್.ಎ

19. ಕಪಟರಾಳ ಕೃಷ್ಣರಾಯ, ಕರ್ನಾಟಕ ಲಾಕುಳ ಶೈವರ ಇತಿಹಾಸ ಪು.100.

20. ಎಂ.ಚಿದಾನಂದಮೂರ್ತಿ– ಲಿಂಗಾಯಿತ ಅಧ್ಯಯನಗಳು – ಪು.156.

21. ಪಿ.ವಿ.ನಾರಾಯಣ, ವಚನ ಸಾಹಿತ್ಯ– ಒಂದು ಸಾಂಸ್ಕೃತಿಕ ಅಧ್ಯಯನ– ಪು.158.

22. ಎಂ.ಚಿದಾನಂದಮೂರ್ತಿರವರ ಸಂಶೋಧನೆ ತರಂಗ, ಭಾಗ–2, ಪು.259.

23. ದಿವಾಕರ್ ಆರ್.ಆರ್.– ಕರ್ನಾಟಕ ಪರಂಪರೆ ಸಂ.1, ಪು.170.

24. ಸರ್‌ಜನ ಮಾರ್ಷಲ್– ಮೊಹೆಂಜೊದಾರೊ ಅಂಡ್ ದ ಇಂಡನ್ ಸಿವಿಲೈಜೇಷನ್ ಪು.52.

25. ಅವೈಹಿನ್ ಡ್ಯಾನಿಯಲ್– ಹಿಂದೂ ಪಾಲಿಥಿ ಇಜಮ್– ಪು.188–189.

26. ಎಂ.ಚಿದಾನಂದಮೂರ್ತಿ – ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂ.1– ಪು.137.

27. ಅದೇ ಪು.143.

28. ಸರ್ ಚಾರ್ಲ್ಸ್ ಎಲಿಯಟ್, ಹಿಂದೂಯಿಸಮ್ ಅಂಡ್ ಬುದ್ಧಿಯಿಸಮ್, ಸ.2, ಪು.143.

29. ಎಂ.ಚಿದಾನಂದಮುರ್ತಿ– ವೀರಶೈವ ಧರ್ಮ, ಭಾರತೀಯ ಸಂಸ್ಕೃತಿ, ಪು.278.

30. ಜ್ಞಾನಾನಂದ ಜಿ–ಶಿಲ್ಪಾದರ್ಶ, ಸಂ.1, ಪು.44.

31. ದಿವಾಕರ್ ಆರ್.ಆರ್.– ಕರ್ನಾಟಕ ಪರಂಪರೆ ಸಂಪುಟ–1, ಪು.180.

32. ರಾಜಶೇಖರ್ ಎಸ್.– ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ, ಪು.12.

33. ಭಂಡಾರ್ಕರ್ ಆರ್.–ಜಿ. ವೈಷ್ಣವಿಸಮ್, ಶೈವಿಸಮ್– ಅಂಡ್ ಮೈನರ್ ರಿಲಿಜಿಯನ್ ಸಿಸ್ಟಮ್ಸ್– ಪು.172.

34. ಅದೇ

35. ದಿವಾಕರ್ ಆರ್.ಆರ್.–ಕರ್ನಾಟಕ ಪರಂಪರೆ ಸಂಪುಟ–1, ಪು.181.

36. ಕೃಷ್ಣರಾವ್ ಕೆ. ಕರ್ನಾಟಕ ಲಕುಶ, ಶೈವರ ಇತಿಹಾಸ ಪು.107.

37. ನೀಲಕಂಠಶಾಸ್ತ್ರಿ ಕೆ.ಎ.– ದಿ ಚೊಳ ಟೆಂಪಲ್

38. ರಾಮಚಂದ್ರರಾಯ ಎಸ್.ಕೆ. – ಮೂರ್ತಿ ಶಿಲ್ಪನೆಲೆ– ಹಿನ್ನೆಲೆ ಪು.130–133

39. ಶಿಲಾಕಾಂತ ಸುತ್ತಾರ– ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪು.149.

40. ರಾಜಶೇಕರ ಎಸ್.– ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಪು.23.

41. ವಸಂತ ಕುಮಾರತಳ್ಳೆಜಿ– ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ ಪು.40–45.

42. M.A.R. (1936) P.73

43. E.C. 21

44. ಹಾಸನ ಜಿಲ್ಲೆಯ ಬೇಲೂರು ಶಾಸನದ ಪ್ರಕಾರ ರಚಿಸಲಗಿದೆ.

45. ಎಂ.ಚಿದಾನಂದಮೂರ್ತಿರವರ ಕ.ಶಾ.ಸಾ.ಅ., ಪು–73.

46. ದಿವಾಕರ್ ಆರ್.ಆರ್.– ಕರ್ನಾಟಕ ಪರಂಪರೆ ಸಂಪುಟ–1, ಪು.354.

47. ರೈಸ್ ಬಿ. ಎಲ್.– ಮೈಸೂರು ಅಂಡ್ ಕೂರ್ಗ್ ಪ್ರಯೋದ ಇನ್ಸ್‌ಕ್ರಿಪ್ಷನ್ಸ್ ಪು.23.

48. ಕನ್ನಡ ವಿಶ್ವಕೋಶ ಸಂಪುಟ–8, ಪು.357–61.

49. ಕನ್ನಡ ವಿಶ್ವಕೋಶ ಸಂಪುಟ–8, ಪು.356.

50. ಶ್ರವಣ ಬೆಳಗೊಳದ ಶಾಸನಗಳ ಹಿನ್ನೆಲೆಯಲ್ಲಿ

51. ಷೇರ್ ಅಆ ಬಿ– ಹಿಸ್ಟರಿ ಆಫ್ ದ ವೆಸ್ಟರ್ನ್ ಗಂಗಾಸ್, ಪು.331.

52. MAR-1936, p.17 & MAR 1929 P.8

53. ಹಾಸನಜಿಲ್ಲೆಯ ಕ್ರೈಸ್ತ ಪಾದ್ರಿಗಳ ಹೇಳಿಕೆಗಳು

54. Karnataka State Gazetteer,

55. ಕರ್ನಾಟಕ ಭಿತ್ತಿಚಿತ್ರ ಪರಂಪರೆ– ಪು.78–79

56. ವಿದೇಶಿ ಪ್ರವಾಸಿಗರ ಬರವಣಿಗೆಯ ಗ್ರಂಥಗಳು.

57. ಕರ್ನಾಟಕ ಭಿತ್ತಿಚಿತ್ರ ಪರಂಪರೆ ಪು.81

58. ಅದೇ

59. ಅರಸೀಕೆರೆಯ ಶಾಸನಸಂಖ್ಯೆ–317. (ಹಿರಿಯೂರು ಕ್ರಿ.ಶ.1254)

60. ಅದೇ

61. ಕವಿಕಾಡ್– ಬಸವಶಿಖಾಮಣಿ (ಸಂ) ಸಣ್ಣಯ್ಯ ಬಿ.ಎಸ್. ಸಂಧಿ 4 ಪದ್ಯ, 56–74, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು 1985.

62. ಎ.ಕ.ಸಂಪುಟ 10, ಚೆನ್ನರಾಯಪಟ್ಟಣ (ಶಾಸನ ಸಂಖ್ಯೆ– 136)

63. ಎ.ಕ.ಸಂಪುಟ 10, ಚೆನ್ನರಾಯಪಟ್ಟಣ (ಶಾಸನ ಸಂಖ್ಯೆ– 98)

64. ಎ.ಕ.ಸಂಪುಟ 10, ಚೆನ್ನರಾಯಪಟ್ಟಣ (ಶಾಸನ ಸಂಖ್ಯೆ– 78)

65. ಎ.ಕ.ಸಂಪುಟ 10, ಚೆನ್ನರಾಯಪಟ್ಟಣ (ಶಾಸನ ಸಂಖ್ಯೆ– 158) (16–17ನೇ ಶತಮಾನ)

66. ಎ.ಕ.ಸಂಪುಟ 10, ಚೆನ್ನರಾಯಪಟ್ಟಣ (ಶಾಸನ ಸಂಖ್ಯೆ– 159) (ಕ್ರಿ.ಶ.1847)

# ಅಧ್ಯಾಯ–4

## ಚನ್ನರಾಯಪಟ್ಟಣ ತಾಲೂಕಿನ ಪ್ರಮುಖ ಹಾಗೂ ಪ್ರಮುಖವಲ್ಲದ ದೇವಾಲಯಗಳು, ಬಸದಿಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳ ವಾಸ್ತು ಮತ್ತು ಶಿಲ್ಪ ಬೆಳವಣಿಗೆಗಳು (ಆಯಾ ಧರ್ಮಗಳ ಹಿನ್ನೆಲೆಯಲ್ಲಿ)

### ಚನ್ನರಾಯಪಟ್ಟಣ

ಚನ್ನರಾಯಪಟ್ಟಣ ಹಾಸನ ಜಿಲ್ಲೆಗೆ ಸೇರಿದ ಒಂದು ತಾಲೂಕು ಕೇಂದ್ರ. ಇದು ಹಾಸನದಿಂದ 32 ಕಿಲೋಮೀಟರ್ ದೂರದಲ್ಲಿದೆ. ಪ್ರಾಚೀನ ಕಾಲದಲ್ಲಿ ಈ ಊರನ್ನು ಕೊಳತ್ತೂರು ಎಂದು ಕರೆಯಲಾಗಿದೆ. ಅಲ್ಲದೆ ಇದು ಒಂದು ಅಗ್ರಹಾರವು ಸಹ ಆಗಿತ್ತು. ಈ ನಗರದಲ್ಲಿ ಒಂದು ಪ್ರಾಚೀನಕೆರೆ ಇದ್ದಿತ್ತು ಇಲ್ಲಿ ಮಾಚಲದೇವಿ ಮತ್ತು ಶಾಂತಲದೇವಿ ಎಂಬ ಇಬ್ಬರು ನೃತ್ಯ ಗಾರ್ತಿಯರು ನಿರ್ಮಿಸಿದರೆಂದು ತಿಳಿದುಬರುತ್ತದೆ. ಚನ್ನರಾಯಪಟ್ಟಣ ನಗರವನ್ನು ಹೊಳೆನರಸೀಪುರದ ದೊರೆಯಾದ ಲಕ್ಷ್ಮಪ್ಪ ನಾಯಕನು ಪುಟ್ಟಗಿರಿಜ ಎಂಬ ಹಬ್ಲಾರನಿಂದ ವಶಪಡಿಸಿಕೊಂಡು ತನ್ನ ಮಗನಾದಚನ್ನರಾಯನಿಗೆ ಜಹಗೀರಾಗಿ ಕೊಟ್ಟನು. ಇಲ್ಲಿ ಒಂದು ಚನ್ನರಾಯಸ್ವಾಮಿ ದೇವಾಲಯವಿದೆ. ಅಲ್ಲಿ ದೊಡ್ಡ ಬಸವಯ್ಯನಿಂದ ನಿರ್ಮಿತವಾಗಿ ಅನಂತರ ಹೈದರ್ ಆಲಿಯಿಂದ ಪುನರ್ ನಿರ್ಮಾಣಗೊಂಡ ಒಂದು ಹಳೆಯಕೋಟೆ ಇದೆ. [1]

### ಅಮೃತೇಶ್ವರ ದೇವಾಲಯ–ಅಗ್ರಹಾರ ಬೆಳಗುಲಿ

ಚನ್ನರಾಯಪಟಟಣ ತಾಲೂಕು ಅಗ್ರಹಾರ ಬೆಳಗುಲಿಯಲ್ಲಿ ಪಾಳು ಅಮೃತೇಶ್ವರ ದೇವಾಲಯವಿದೆ. (ಚಿತ್ರ ಸಂಖ್ಯೆ–1) ಇದೊಂದು ವಿಶೇಷವಾದ ದೇವಾಲಯವಾಗಿದೆ. ಏಕೆಂದರೆ ಒಂದೇ ದೇವಾಲಯದಲ್ಲಿ ಎರಡು ಧರ್ಮಗಳನ್ನು ಕಾಣಬಹುದಾಗಿದೆ. ಈ ದೇವಾಲಯವನ್ನು ಪೂರ್ವಾಭಿಮುಖವಾಗಿ ಹಾಗೂ ದಕ್ಷಿಣಾಭಿಮುಖವಾಗಿ ಕಟ್ಟಲಾಗಿದ್ದು (ಚಿತ್ರ ಸಂಖ್ಯೆ–2) ಕಟ್ಟಲಾಗಿದ್ದು ಪೂರ್ವಾಭಿಮುಖವಾಗಿ ಈಶ್ವರನನ್ನು, ದಕ್ಷಿಣಾಭಿಮುಖವಾಗಿ ಚನ್ನಕೇಶವನನ್ನು ಮೂಲ ಗರ್ಭಗುಡಿಯಲ್ಲಿ ಇರಿಸಲಾಗಿದೆ. ಪಾಳು ಅಮೃತೇಶ್ವರ ದೇವಾಲಯದ ಗರ್ಭಾಂಕಣದ ಬಾಗಿಲಮೇಲೆ ಶಕವರ್ಷ 1056 ಅಂದರೆ ಕ್ರಿ.ಶ. 1133ರ ಏಪ್ರಿಲ್ 9ನೇ ತಾರೀಖಿನಂದು ಶಾಸನ ಬರೆಸಲಾಗಿದೆ. ಇದು ಪರಿಯನಂಬಿಮಣನ ಪುತ್ರ ಕೆಂಚಗೇತಣ ಏಚಮಯ್ಯದಣ್ಣಾಯಕನ ತೆಂಕು ದೇವರಿಗೆ ಕೆಲವೊಂದು ಗದ್ದೆಯನ್ನು ದಾನವಾಗಿ ಧರ್ಮವನ್ನು ನೀಡಿರುವುದು ತಿಳಿದು ಬರುತ್ತದೆ.[2] ಮತ್ತೊಂದು ಶಾಸನವು ಅದೇ ದೇವಾಲಯದ ಬಳಿ ಇದ್ದು, ಇದು ಹೊಯ್ಸಳ

ವಿಷ್ಣುವರ್ಧನನ ಬಿರುದುಗಳನ್ನು ತಿಳಿಸುವ ಶಾಸನವಾಗಿದೆ. ಈ ಶಾಸನದ ಕಾಲ ಕ್ರಿ.ಶ. 1133, ಏಪ್ರಿಲ್ 9 ಭಾನುವಾರ ಬರೆಸಲಾಗಿದೆ. [3]. ಅಮೃತೇಶ್ವರ ದೇವಾಲಯದ ಮೂಲ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಮೇಲ್ಭಾಗದಲ್ಲಿ ಭುವನೇಶ್ವರಿ ಇದೆ. ಶುಕನಾಸಿಯ ಅಂಕಣದಲ್ಲಿ ನಂದಿಶಿಲ್ಪವಿದೆ. ನವರಂಗದ ಭಾಗದ ಮಧ್ಯಭಾಗದಲ್ಲಿ ನಾಲ್ಕು ಶುದ್ಧ ಹೊಯ್ಸಳ ಶೈಲಿಯ ಕಂಬಗಳಿದ್ದು, ಮೇಲ್ಭಾಗದ ಭುವನೇಶ್ವರಿಯಲ್ಲಿ ಗ್ರಹಗಳ ಉಬ್ಬು ಶಿಲ್ಪಗಳನ್ನು ಸೂಕ್ಷ್ಮವಾಗಿ ಕಡೆಯಲಾಗಿದೆ. ನವರಂಗಕ್ಕೆ ಹೊಂದಿಕೊಂಡಂತೆ ಉತ್ತರ ದಿಕ್ಕಿಗೆ ಒಂದು ಗುಡಿಯಿದ್ದು, ಈ ಗುಡಿಯಲ್ಲಿ ಚನ್ನಕೇಶವ ಮೂರ್ತಿಶಿಲ್ಪವನ್ನು ಇಡಲಾಗಿದೆ (ಚಿತ್ರ ಸಂಖ್ಯೆ–3) ಈ ಶಿಲ್ಪವು 7 ಅಡಿ ಎತ್ತರವಿದ್ದು ಚತುರ್ಭುಜವನ್ನು ಹೊಂದಿದ್ದು ಶಂಖ, ಚಕ್ರ, ಗದಾ ಮತ್ತು ಕಮಲವನ್ನು ಹಿಡಿದಿರುತ್ತಾನೆ. ಇಕ್ಕೆಲಗಳಲ್ಲಿ ನರ್ತನ ಭಂಗಿಯ ಶ್ರೀದೇವಿ ಮತ್ತು ಭೂದೇವಿಯರನ್ನು ಕಡೆಯಲಾಗಿದೆ. ಕಲ್ಲು ಪೀಠದಲ್ಲಿ ಗರುಡನ ಉಬ್ಬು ಶಿಲ್ಪವನ್ನು ಸಹ ಕಡೆಯಲಾಗಿದೆ.

ಇದು ವಿಷ್ಣುವಿನ ವಾಹನವು ಸಹ ಆಗಿದೆ. ಈ ನವರಂಗಕ್ಕೆ ಹೊಂದಿಕೊಂಡಂತೆ ಪೂರ್ವದಿಕ್ಕಿಗೆ ಮತ್ತೊಂದು ವಿಶಾಲವಾದ ಮುಖ ಮಂಟಪವನ್ನು ಸೇರಿಸಲಾಗಿದೆ. ಇಲ್ಲಿರುವ ದ್ವಾರ ಇಕ್ಕೆಲಗಳಲ್ಲಿ ದ್ವಾರ ಪಾಲಕರ ಶಿಲ್ಪಗಳಿವೆ. ಅಮೃತೇಶ್ವರ ಹಾಗೂ ಚನ್ನಕೇಶವ ಗರ್ಭಗುಡಿಯ ಮುಂದಿನ ನವರಂಗದಲ್ಲಿ ಭೈರವಿ, ಗಣೇಶ, ಸರಸ್ವತಿ ಶಿಲ್ಪಗಳಿವೆ (ಚಿತ್ರ ಸಂಖ್ಯೆ–4, 5, 6) ಮತ್ತು ಕುಮಾರನ ಶಿಲ್ಪ (ಮುರುಗ) ಸಹ ಇದೆ. (ಚಿತ್ರ ಸಂಖ್ಯೆ–7) ಪೂರ್ವದಿಕ್ಕಿನ ಮುಖಮಂಟಪದಲ್ಲಿ ಆರು ಹೊಯ್ಸಳ ವಾಸ್ತುಶೈಲಿಯನ್ನು ಹೊಂದಿರುವ ಕಂಬಗಳಿವೆ. ಈ ಭಾಗದಲ್ಲಿ ಒಂದು ಗುಡಿಯಿದ್ದು ಈ ಗುಡಿಯಲ್ಲಿ ಯಾವುದೇ ಶಿಲ್ಪವಿಲ್ಲದೆ ಈಗ ಖಾಲಿ ಇದೆ. ಕೊನೆಯ ಭಾಗದಲ್ಲಿ ಅಮೃತೇಶ್ವರ ಗರ್ಭಗುಡಿಗೆ ಎದುರಾಗಿ ಒಂದು ಸುಂದರವಾದ ದೊಡ್ಡದಾದ ನಂದಿಯ ಶಿಲ್ಪವನ್ನು ಇಡಲಾಗಿದೆ. ಈ ದೇವಾಲಯದ ದಕ್ಷಿಣ ದಿಕ್ಕಿಗೆ ಪ್ರವೇಶದ್ವಾರವಿದ್ದು, ಎರಡು ದ್ವಾರಗಳ ಇಕ್ಕೆಲಗಳಲ್ಲಿ ಒಂದೊಂದು ಶಾಸನಗಳ ಚಪ್ಪಡಿಯನ್ನು ಇಡಲಾಗಿದೆ. ಇಲ್ಲಿಯ ವಿಶೇಷತೆ ಏನೆಂದರೆ ಈ ದೇವಾಲಯವು ಶೈವ, ವೈಷ್ಣವ ಧರ್ಮದ ಸಂಕೇತವಾಗಿ ನಿರ್ಮಿಸಿರುವುದರಿಂದ ದ್ವಾರದ ಬಲ ಭಾಗದಲ್ಲಿ ಹೊಯ್ಸಳ ಬಲ್ಲಾಳನ ಕಾಲದ ಶಾಸನವೆಂದು ಕರೆಯಲಾಗಿದ್ದು ಇದು ಸುಮಾರು 60 ಸಾಲುಗಳನ್ನು ಹೊಂದಿದೆ (ಚಿತ್ರ ಸಂಖ್ಯೆ–8) ಇದು ಶೈವ ಪರಂಪರೆ ಪೂರಕವಾದ ಶಾಸನವಾಗಿದೆ. ಅದೇ ರೀತಿ ಎಡಭಾಗದ ಶಾಸನದ ಚಪ್ಪಡಿಯಲ್ಲಿ ಹೊಯ್ಸಳ ವಿನಿಯಾದಿತ್ಯನ ಶಾಸನವಿದೆ. ಇದರ ಕಾಲ ಶಕವರ್ಷ 1131 ಅಂದರೆ ಕ್ರಿ.ಶ. 1209ರಲ್ಲಿ ರಚಿಸಲಾಗಿದೆ. ಈ ಶಾಸನವು ಸುಮಾರು 72 ಸಾಲುಗಳನ್ನು ಹೊಂದಿದೆ. ಈ ಶಾಸನದಲ್ಲಿ ವೈಷ್ಣವ ಪರಂಪರೆಗೆ ಪೂರಕವಾಗಿ ವಿಷ್ಣುವಿನ (ಚನ್ನಕೇಶವ) ಉಬ್ಬು ಶಿಲ್ಪವನ್ನು ಕಡೆಯಲಾಗಿರುವುದನ್ನು ಕಾಣಬಹುದು. (ಚಿತ್ರ ಸಂಖ್ಯೆ–9) ಈ ದೇವಾಲಯದ

ವಿಶೇಷತೆ ಏನೆಂದರೆ ನವರಂಗದ ದ್ವಾರದ ಲಲಾಟ ಬಿಂಬದಲ್ಲಿ ನಾಟ್ಯ ಶಿವ ಮತ್ತು ಸಪ್ತಮಾತೃಕೆಯರನ್ನು ಸಹ ಕಡೆಯಲಾಗಿದೆ ಹಾಗೂ ಗಜಲಕ್ಷ್ಮೀಯ ಉಬ್ಬು ಶಿಲ್ಪಗಳಿವೆ. ಈ ದೇವಾಲಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ನಕ್ಷತ್ರಾಕಾರದ ತಳವಿನ್ಯಾಸದ ಮೇಲೆ ನಿಂತಿದ್ದು ಇನ್‌ಸರಿತ ಮುನ್‌ಸರಿತದಿಂದ ಕೂಡಿದೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಮೇಲ್ಭಾಗದಲ್ಲಿ ಇತ್ತೀಚಿನ ಕಾಲದ ವಿಮಾನವಿದೆ. ಈ ದೇವಾಲಯವು ಇತ್ತೀಚಿನ ವರ್ಷಗಳ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ. ಆದಕಾರಣ ಗರ್ಭಗೃಹದ ಮೇಲ್ಭಾಗದ ವಿಮಾನವು ಸಹ ಹೊಸದಾಗಿ ನಿರ್ಮಾಣಗೊಂಡಿದೆ. ಅಂದಿನ ಕಾಲದಲ್ಲಿ ಇದು ಸುಂದರ ದೇವಾಲಯವಾಗಿದೆ ಎಂದು ಹೇಳಬಹುದು. ಅಲ್ಲದೆ ದಕ್ಷಿಣ ದಿಕ್ಕಿಗೆ ದ್ವಾರ ಮಂಟಪವನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದೆ. [4]

## ಸೋಮೇಶ್ವರ ದೇವಾಲಯ-ಅಗ್ರಹಾರ ಬೆಳಗುಲಿ

ಅಗ್ರಹಾರ ಬೆಳಗುಲಿಯಲ್ಲಿ ಮತ್ತೊಂದು ಸೋಮೇಶ್ವರ ದೇವಾಲಯವಿದೆ. ಇದು ಸಹ ಹೊಯ್ಸಳರ ಕಾಲದಲ್ಲಿ ನಿರ್ಮಿಸಲ್ಪಟ್ಟಿರುವ ದೇವಾಲಯವಾಗಿದ್ದು ಈಗ ಸಂಪೂರ್ಣ ಹೊಸದಾಗಿ ನಿರ್ಮಿಸಲ್ಪಟ್ಟಿದೆ. ಕಲ್ಯಾಣಿ ಚಾಲುಕ್ಯರ ನಂತರ ಮೊದಲನೆಯ ಹೊಯ್ಸಳ ನರಸಿಂಹನ ಕಾಲದ ಶಾಸನ ಇಲ್ಲಿದೆ. ಈ ಶಾಸನವನ್ನು ಶಕವರ್ಷ 1079 ಅಂದರೆ ಕ್ರಿ.ಶ. 1157ರಲ್ಲಿ ಡಿಸೆಂಬರ್ 24 ಮಂಗಳವಾರದಂದು ಬರೆಸಲಾಗಿದೆ. ಇದು ಸೋಮೇಶ್ವರ ದೇವರ ಪೂಜೆಗಾಗಿ ದಾನ ಬಿಟ್ಟಿರುವುದನ್ನು ತಿಳಿಸುವುದಲ್ಲದೆ 1ನೇ ನರಸಿಂಹನ ಬಿರುದುಗಳನ್ನು ತಿಳಿಸುವಂತಹ ಶಾಸನವೂ ಹೌದು [5] ಸೋಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹ, ಶುಕನಾಸ, ನವರಂಗವನ್ನು ಮಾತ್ರ ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಇಡಲಾಗಿದೆ.

ಶುಕನಾಸಿಯು ಖಾಲಿಇದ್ದು ನವರಂಗದ ಮಧ್ಯದಲ್ಲಿ ನಾಲ್ಕುಕಂಬಗಳಿವೆ. ಶುಕನಾಸಿಯ ದ್ವಾರದ ಮುಂದೆ ನವರಂಗಕ್ಕೆ ಹೊಂದಿಕೊಂಡಂತೆ ಒಂದು ನಂದಿ ಶಿಲ್ಪವನ್ನು ಇಡಲಾಗಿದೆ. ಈ ದೇವಾಲಯ ಪ್ರಾಚೀನಕಾಲದಾಗಿದ್ದರೂ ಸಹ ಈಗ ಹೊಸದಾಗಿ ನಿರ್ಮಿಸಲ್ಪಟ್ಟಿದೆ. ಈ ಸ್ಥಳವನ್ನು ನೋಡಿದರೆ ಗೊತ್ತಾಗುತ್ತದೆ ಇದೊಂದು ಪ್ರಾಚೀನ ನೆಲೆಯೆಂದು ದೇವಾಲಯದ ಮುಂದೆ ಶಿಲಾಶಾಸನಗಳ ಚಪ್ಪಡಿ ಮತ್ತು ವೀರಗಲ್ಲನ್ನು ಸಹ ಕಾಣಬಹುದಾಗಿದೆ. ಈ ವೀರಗಲ್ಲು ವೀರರು ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯವನ್ನು ನೆನಪಿಗೆ ತರುವಂತೆ ವ್ಯಕ್ತವಾಗುತ್ತದೆ. ಈ ವೀರಗಲ್ಲು ಮೂರು ಅಂತಸ್ತಿನಿಂದ ಕೂಡಿದ್ದು ಕೆಳಭಾಗದಲ್ಲಿ ವೀರಯೋಧರು ಹೋರಾಟ ನಡೆಸುತ್ತಿದ್ದು ಎರಡನೇಯ ಭಾಗದಲ್ಲಿ ಮರಣ ಹೊಂದಿದ ಯೋಧನನ್ನು ಸೇವಕರು ಸ್ವರ್ಗಕ್ಕೆ

ಕರೆದುಕೊಂಡು ಹೋಗುತ್ತಿರುವ ಮಾದರಿಯಲ್ಲಿ ಕಡೆಯಲಾಗಿದೆ. ಮೇಲ್ಭಾಗದಲ್ಲಿ ಶಿವನ ಸನ್ನಿಧಿಗೆ ಸಲ್ಲಿಸಿ ಶಿವಪೂಜೆಯಲ್ಲಿ ತೊಡಗಿರುವ ದೃಶ್ಯವ್ಯಕ್ತವಾಗುತ್ತದೆ. ಇದನ್ನು ಸೂರ್ಯಚಂದ್ರ ಸಾಕ್ಷಿಯಾಗಿ ದೇವರಿಗೆ ಸಲ್ಲಿಸುತ್ತಿರುವುದು ಸಹ ಶಿಲ್ಪಕಲೆಯಿಂದ ವ್ಯಕ್ತವಾಗುತ್ತದೆ (ಚಿತ್ರ ಸಂಖ್ಯೆ-10) ಈ ದೇವಾಲಯದಿಂದ ಕೇಶವ ದೇವಾಲಯಕ್ಕೆ ಸುರಂಗ ಮಾರ್ಗವಿದೆ ಎಂದು ಸ್ಥಳೀಯ ಹೇಳಿಕೆಗಳಿವೆ.

ಒಟ್ಟಾರೆ ಅಗ್ರಹಾರ ಬೆಳಗುಲಿಯ ಇತಿಹಾಸವನ್ನು ನೋಡಿದರೆ ಒಂದು ವಿಶೇಷವಾದ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿರುವುದು ಅಮೃತೇಶ್ವರ ಮತ್ತು ಚನ್ನಕೇಶವ ದೇವಾಲಯವು ಶೈವ-ವೈಷ್ಣವ ಪರಂಪರೆ ಒಂದಕ್ಕೊಂದು ಪೂರಕವಾಗಿ ಬೆಸೆದುಕೊಂಡು ಬಂದಿರುವುದು ವಾಸ್ತು ರಚನಾ ನೋಟದಿಂದ ತಿಳಿದುಬರುತ್ತದೆ.

## ಈಶ್ವರ ಮತ್ತು ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ-ದಿಡಗ

ಈಶ್ವರ ದೇವಾಲಯ ಮತ್ತು ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವು ಒಂದೇ ದೇವಾಲಯದಲ್ಲಿ ಮೂಡಿಬಂದಿದೆ. ಈ ದೇವಾಲಯವು ಸಹ ವಿಶೇಷವಾದ ದೇವಾಲಯವಾಗಿದ್ದು ಅಗ್ರಹಾರ ಬೆಳಗುಲಿಯ ಅಮೃತೇಶ್ವರ ಮತ್ತು ಚನ್ನಕೇಶವನ ಮೂರ್ತಿಯನ್ನು ನೆನಪಿಗೆ ತರುತ್ತದೆ. (ಚಿತ್ರ ಸಂಖ್ಯೆ-11, 12) ಇದು ಶುದ್ಧ ದ್ರಾವಿಡ ಶೈಲಿಯ ದೇವಾಲಯವಾಗಿದ್ದು ದೇವಾಲಯವು ಪೂರ್ವಭಿಮುಖವಾಗಿ ಮತ್ತು ದಕ್ಷಿಣಾಭಿಮುಖವಾಗಿದೆ. ಈಗ ಈ ದೇವಾಲಯವು ದುಸ್ಥಿತಿಯಾಗಿದೆ. ಈಗ ಈ ದೇವಾಲಯದಲ್ಲಿ ಒಂದು ಶಾಸನವಿದ್ದು ಹೊಯ್ಸಳರ ಎರಡನೇಯ ಬಲ್ಲಾಳನ ಶಾಸನವಾಗಿದೆ. ಶಾಸನದ ಕಾಲ ಶಕವರ್ಷ 1012 ಅಂದರೆ ಕ್ರಿ.ಶ. 1206 ಏಪ್ರಿಲ್ 19 ಬುದುವಾರ ಶಾಸನವನ್ನು ಬರೆಸಲಾಗಿದೆ.[6]

ಮೂಲ ಈಶ್ವರ ದೇವಾಲಯದ ಗರ್ಭಗುಡಿಯಲ್ಲಿ ಈಶ್ವರ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು, ಮೇಲ್ಭಾಗದಲ್ಲಿ ಭುವನೇಶ್ವರಿ ಇದೆ. ಶುಕನಾಸದ ಅಂಕಣದಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ. ನವರಂಗಕ್ಕೆ ಬಂದರೆ ಮಧ್ಯದಲ್ಲಿ ನಾಲ್ಕು ಹೊಯ್ಸಳ ಶೈಲಿಯ ಕಂಬಗಳಿದ್ದು ಉತ್ತರ ದಿಕ್ಕಿಗೆ ದಕ್ಷಿಣಾಭಿಮುಖವಾಗಿ ಒಂದು ಗರ್ಭಗುಡಿಯನ್ನು ನಿರ್ಮಿಸಿದ್ದು ಲಕ್ಷ್ಮೀನರಸಿಂಹನ ಮೂರ್ತಿ ಶಿಲ್ಪವನ್ನು ಇಡಲಾಗಿದೆ. ಈ ದೇವಾಲಯದಲ್ಲಿಯೂ ಸಹ ಎರಡು ದ್ವಾರದಲ್ಲಿಯೂ ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ಉಬ್ಬುಶಿಲ್ಪದ ಕೆತ್ತನೆಯನ್ನು ಮಾಡಲಾಗಿದೆ. ನವರಂಗದ ಮುಂದೆ ಮುಖಮಂಟಪವಿದ್ದು ಅದರ ಮುಂದೆ ದ್ವಾರಮಂಟಪವಿದೆ. ಅದು ಸಹ ಈಗ ದುಸ್ಥಿತಿ ಹೊಂದಿದೆ. ದಕ್ಷಿಣ ದಿಕ್ಕಿಗೆ ಇರುವ ಮುಖ್ಯ ಪ್ರವೇಶದ್ವಾರದಲ್ಲಿ

ನಿಲ್ಲಿಸಿರುವ ದ್ವಾರಕಂಬದಲ್ಲಿ ದ್ವಾರಪಾಲಕರ ಉಬ್ಬುಕೆತ್ತನೆಯೊಂದಿಗೆ ಕೂಡಿದ್ದು ಲಲಾಟ ಬಿಂಬದಲ್ಲಿ ಗಣೇಶನ ಉಬ್ಬುಶಿಲ್ಪವನ್ನು ಕಡೆಯಲಾಗಿದೆ. ದುಸ್ಥಿತಿಯಲ್ಲಿರುವ ದೇವಾಲಯದ ಭಿತ್ತಿಯ ಭಾಗದಲ್ಲಿ ನಾಗರ ಮತ್ತು ದ್ರಾವಿಡ ಮಾದರಿಯ ಕೋಷ್ಟಮಂಟಪವನ್ನು ಸಹ ಕಡೆಯಲಾಗಿದೆ.

ಹೊಯ್ಸಳ ಅರಸ ಎರಡನೇಯ ಬಲ್ಲಾಳನು ತನ್ನ ಬಿರುದು ಬಾವಲಿಗಳನ್ನು ಒಳಗೊಂಡಂತೆ ಮತ್ತು ದೇವಾಲಯದ ಪೂಜಾ ಕಾರ್ಯಕ್ಕೆ ಅನೇಕ ರೀತಿಯ ದಾನ ನೀಡಿರುವುದನ್ನು ಶಾಸನ ತಿಳಿಸುತ್ತದೆ. [7] ಈ ಊರಿನಲ್ಲಿ ಮತ್ತೊಂದು ದೇವಾಲಯವಿದ್ದು ಇದು ಈಗ ಸಂಪೂರ್ಣವಾಗಿ ನವೀಕರಣಗೊಂಡಿದೆ. ಆ ದೇವಾಲಯದ ಪಕ್ಕದಲ್ಲಿ ಕೆಲವೊಂದು ಬಿಡಿಶಿಲ್ಪಗಳಿದ್ದು ಒಂದು ಚಪ್ಪಡಿಯಲ್ಲಿ ಕಂಬವನ್ನು ಸೇರಿಸಿದ್ದು ಕಂಬದ ಮೇಲ್ಭಾಗದಲ್ಲಿ ಚೂಪಾದ ಭರ್ಜಿಯ ಮಾದರಿಯಲ್ಲಿ ಕಡೆಯಲಾಗಿದ್ದು ಇಕ್ಕೆಲಗಳಲ್ಲಿ ಇಬ್ಬರನ್ನು ಸೇರಿಸಿದ್ದು ಪುರುಷ ಮತ್ತು ಸ್ತ್ರೀಯರನ್ನು ಕೂರಿಸಲಾಗಿದೆ. ಪ್ರಾಯಶಃ ಇದರ ಉದ್ದೇಶವೇನೆಂದರೆ ರಾಜ ಮತ್ತು ರಾಣಿಯರು ಇರಬೇಕು ಎಂದು ಹೇಳಬಹುದು. ಏಕೆಂದರೆ ಇಬ್ಬರು ಸಹ ವಿವಿಧ ಆಭರಣಗಳನ್ನು ಧರಿಸಿದ್ದು ರಾಜಮಾತೆಯರಂತೆ ಕುಳಿತಿರುವುದರಿಂದ ಇದು ರಾಜರ ಶಿಲ್ಪವೇ ಆಗಿರಬೇಕೆಂಬುದು ನನ್ನ ಸಂಶೋಧನೆಯ ಉದದೇಶವಾಗಿದೆ. (ಚಿತ್ರ ಸಂಖ್ಯೆ–14) ಇದರ ಪಕ್ಕದಲ್ಲಿ ಒಂದು ಶಿಲ್ಪವಿದೆ. ಇದು ಪೂರ್ಣಕೆತ್ತನೆಯಿಂದ ಕೂಡಿಲ್ಲ. ಆದಕಾರಣ ಈ ಶಿಲ್ಪವು ಸರಿಯಾದ ರೀತಿಯಲ್ಲಿ ಅಲಂಕರಣೆಯನ್ನು ಹೊಂದಿಲ್ಲ. ಈ ಶಿಲ್ಪವನ್ನು ಗಮನಿಸಿದರೆ ಸುಬ್ರಮಣ್ಯಸ್ವಾಮಿ ಶಿಲ್ಪವೆಂದು ಕರೆಯಬಹುದಾಗಿದೆ. (ಚಿತ್ರ ಸಂಖ್ಯೆ–15)

ಈ ಊರಿನಲ್ಲಿ ಕರಿಗಲ್ಲು ಬ್ರಹ್ಮದೇವರು ಎಂದು ಪೂಜಿಸುತ್ತಾರೆ. ಇದು ಒಂದು ಸಮಾಧಿಯಾಗಿದ್ದು ಪೂರ್ವದಿಂದಲೂ ಪೂಜಿಸುವ ಪರಿಪಾಠವಿದೆ. ಅಂದರೆ ಅಂದಿನ ಕಾಲದಲ್ಲಿ ಈ ಊರಿನ ಪ್ರಮುಖ ವ್ಯಕ್ತಿ ವೀರಮರಣ ಹೊಂದಿರಬೇಕು. ಆ ವ್ಯಕ್ತಿಯನ್ನು ಇಲ್ಲಿಯೇ ಸಮಾಧಿಮಾಡಿ ಈ ರೀತಿಯ ಎರಡು ಕಲ್ಲುಗಳನ್ನು ನಿಲ್ಲಿಸಿ ಮಧ್ಯದಲ್ಲಿ ಒಂದು ಚಪ್ಪಡಿಯಿದ್ದು ಅದರ ಮಧ್ಯದಲ್ಲಿ ಒಂದು ರಂಧ್ರವನ್ನು ಮಾಡಲಾಗಿದೆ. ಪ್ರಾಯಶಃ ವರ್ಷದಲ್ಲಿ ಒಂದು ಬಾರಿ ಇಲ್ಲಿ ಪೂಜೆಸಲ್ಲಿಸುವ ಪರಿಪಾಠವನ್ನು ಹೊಂದಿದೆ ಎಂದು ಹೇಳಬಹುದಾಗಿದೆ. ಅಂದರೆ ಈ ರಂಧ್ರದ ಮೂಲ ಉದ್ದೇಶವೇನೆಂದರೆ ಆತನ ಸೇವಿಸುವ ಆಹಾರ ಪದಾರ್ಥವನ್ನು ಈ ರಂಧ್ರದ ಮೂಲಕ ಒಳಗೆ ಹಾಕುವ ಪರಿಪಾಠವು ಸಹ ಕಂಡುಬರುತ್ತದೆ. ಈ ಹಿನ್ನೆಲೆಯಿಂದ ಚನ್ನರಾಯಪಟ್ಟಣ ತಾಲೂಕಿನ ದಿಡಿಗ ಊರಿನಲ್ಲಿಯೇ ಸಹ ಪ್ರಾಚೀನ ಸಂಸ್ಕೃತಿ

ಪರಂಪರೆಯನ್ನು ಇಂದಿಗೂ ಮುಂದುವರಿಸಿಕೊಂಡು ಹೋಗುತ್ತಿರುವುದು ಕಂಡು ಬರುತ್ತದೆ. (ಚಿತ್ರ ಸಂಖ್ಯೆ–15, 16)

**ಸೋಮೇಶ್ವರ ದೇವಾಲಯ ಅಥವಾ (ಈಶ್ವರ ದೇವಾಲಯ)–ದಿಂಡಗೂರು**

ದಿಂಡಗೂರಿನಲ್ಲಿ ಊರಿನಿಂದ ಹೊರಗೆ ಪೂರ್ವಾಭಿಮುಖವಾಗಿ ಸೋಮೇಶ್ವರ ಅಥವಾ ಈಶ್ವರ ದೇವಾಲಯವಿದೆ. ಈ ದೇವಾಲಯವು ಅತ್ಯಂತ ಪ್ರಾಚೀನವಾದ ದೇವಾಲಯವಾಗಿದೆ. ಈ ದೇವಾಲಯದ ವಾಸ್ತುಲಕ್ಷಣಗಳನ್ನು ಗಮನಿಸಿದರೆ ಹೊಯ್ಸಳರ ಶೈಲಿಯನ್ನು ಹೊಂದಿದೆ. ಸೋಮೇಶ್ವರ ದೇವಾಲಯದ ಹಿಂಭಾಗದಲ್ಲಿ ಗೋಡೆಯ ಮೇಲೆ ಕ್ರಿ.ಶ. 1651ರಂದು ಶನಿವಾರ ಮೇ 24ನೇ ತಾರೀಖಿನಂದು ಬರೆಸಿದ ಶಿಲಾ ಶಾಸನವಿದೆ. ಇದನ್ನು ಸ್ವಸ್ತಿ ಶ್ರೀ ವಿಜಯಾಭ್ಯುದಯ ಷಾಲಿವಾಹನ ಶಕ ವರ್ಷ 1573 ನೆಯ ಕರಸಂವತ್ಸರದ ಜೇಷ್ಟ ಶುಧ 15ನೇ ಸ್ತರವಾರದಲ್ಲಿ ಶ್ರೀಯತು ಚೆಂನಪಟ್ಟಣದ ಸೀಮೆಯ ಕಾಣಿಕಾರನಹಳ್ಳಿ ದೊಡ್ಡೈಯನವರು ಕಂಠೀರವ ನರಸರಾಜ್ಯಯನವರು ಚೆಂನರಾಯ ಪಟ್ಟಣದ ಸೀಮೆಯ ಹವಾಲ ಮಾಡಿದಾಗ ನಾಗಭಕ್ತೈಯಗಳ ಪ್ರತಿಷ್ಟೆಯ ಮಾಡಿ ಮಂಟಪ ಕಟ್ಟಿಸಿ ಸೇವೆ ಮಾಡಿದ ವಿಚಾರ ತಿಳಿದು ಬರುತ್ತದೆ.[8] ಇಲ್ಲಿರುವ ದೇವಾಲಯವು ತಳ ವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗವನ್ನು ಹೊಂದಿದೆ. ಮೂಲಗರ್ಭ ಗುಡಿಯಲ್ಲಿ ಶಿವಲಿಂಗವನ್ನು ಹೊಂದಿದೆ. ಶುಕನಾಸಿ ಅಂಕಣದಲ್ಲಿ ನಂದಿಶಿಲ್ಪವನ್ನು ಇಡಲಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳನ್ನು ಗಮನಿಸಿದರೆ ಹೊಯ್ಸಳ ಮಾದರಿಯ ಕಂಬಗಳನ್ನು ಹೋಲುತ್ತದೆ. ದೇವಾಲಯದ ಮೇಲ್ಭಾಗದಲ್ಲಿ ಗರ್ಭಗೃಹದ ಭಾಗದಲ್ಲಿ ಶಿಖರವನ್ನು ಹೊಂದಿದೆ. ಸುತ್ತಲೂ ಕೈಪಿಡಿ ಗೋಡೆಯನ್ನು ಹೊಂದಿದೆ. ಕೈಪಿಡಿ ಗೋಡಯು ಸಹ ಇನ್‌ಸರಿತ ಮತ್ತು ಮುನ್‌ಸರಿತವನ್ನು ಹೊಂದಿದೆ. ಭಿತ್ತಿಯ ಭಾಗದಲ್ಲಿ ಅರೆಕಂಬಗಳನ್ನು ಕಡೆಯಲಾಗಿದೆ. ಪ್ರವೇಶದ್ವಾರದ ನಿಲುವು ಕಂಬವು ಸಹ ಕೆತ್ತನೆಯಿಂದ ಕೂಡಿದೆ. ಈಗ ಈ ದೇವಾಲಯವು ದುಸ್ಥಿತಿಯ ಪರಿಸ್ಥಿತಿಯನ್ನು ಹೊಂದಿದೆ. ಒಟ್ಟಾರೆಯಾಗಿ ನೋಡುವುದಾದರೆ ಇದೊಂದು ಪ್ರಾಚೀನ ಕಾಲದ ಶೈವ ದೇವಾಲಯವಾಗಿದೆ (ಚಿತ್ರ ಸಂಖ್ಯೆ–17)

**ಕೇಶವ ದೇವಾಲಯ–ದಿಂಡಗೂರು**

ದಿಂಡಗೂರಿನಲ್ಲಿ ಮತ್ತೊಂದು ಪ್ರಾಚೀನ ಕಾಲದ ಕೇಶವ ದೇವಾಲಯವಿದೆ. (ಚಿತ್ರ ಸಂಖ್ಯೆ–18) ಇದು ಹೊಯ್ಸಳರ ಎರಡನೇಯ ವೀರನರಸಿಂಹನ ಕಾಲದ್ದು, ಕ್ರಿ.ಶ. 1231ರ ಮೇ 12ನೇ ತಾರೀಖಿನಂದು ಶಾಸನವನ್ನು ಬರೆಸಲಾಗಿದೆ. [9]ಕೇಶವ ದೇವಾಲಯವು

ಪೂರ್ವಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗ, ಮುಖಮಂಟಪ ಅಲ್ಲದೆ ಎದ್ದುದು ಮುಖಮಂಟಪವನ್ನು ಹೊಂದಿದೆ. ಮೂಲಗರ್ಭಗುಡಿಯಲ್ಲಿ ಗರುಡ ಕಲ್ಲು ಪೀಠದ ಮೇಲೆ ಕೇಶವನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಮೇಲ್ಭಾಗದಲ್ಲಿ ಸುಂದರವಾದ ಭುವನೇಶ್ವರಿಯನ್ನು ಕಡೆಯಲಾಗಿದೆ. ಗರ್ಭಗೃಹದ ಲಲಾಟಬಿಂಬದಲ್ಲಿ ಉಬ್ಬು ಗಜಲಕ್ಷ್ಮಿಯ ಕೆತ್ತನೆ ಇದೆ. ದ್ವಾರವು ಸುಂದರವಾಗಿ ಅಲಂಕೃತಗೊಂಡಿದೆ. (ಚಿತ್ರ ಸಂಖ್ಯೆ-19) ಶುಕನಾಸದ ದ್ವಾರದ ಭಾಗದಲ್ಲಿ ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ನವರಂಗವು ವಿಶಾಲವಾಗಿದ್ದು ನವರಂಗದ ಮಧ್ಯದಲ್ಲಿ ನಾಲ್ಕುಕಂಬಗಳಿವೆ.

ಸುತ್ತಲೂ ಎಂಟು ಗೋಡೆಕಂಬಗಳಿವೆ, ನವರಂಗದ ನಾಲ್ಕು ಕಂಬದ ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ಕಡೆಯಲಾಗಿದೆ. ಭುವನೇಶ್ವರಿಯು ಲತೆ ಬಳ್ಳಿ ಸುರುಳಿ ಕೆತ್ತನೆಯಿಂದ ಸಣ್ಣ ಸಣ್ಣ ಕಂಬಗಳಿಂದ ಕೂಡಿದೆ (ಚಿತ್ರ-20) ಅಲ್ಲದೆ ನವಗ್ರಹಗಳ ಕೆತ್ತನೆಗಳು ಕಂಡು ಬರುತ್ತವೆ. ನವರಂಗದಲ್ಲಿ ಗಣಪತಿ ಶಿಲ್ಪ, ಶಂಕರಮೂರ್ತಿ ಶಿಲ್ಪಗಳಿವೆ. ನವರಂಗಕ್ಕೆ ಹೊಂದಿಕೊಂಡಂತೆ ಮುಖಮಂಟಪ ಇದೆ. ಇದಕ್ಕೆ ಪ್ರವೇಶ ದ್ವಾರವನ್ನು ಅಳವಡಿಸಲಾಗಿರುತ್ತದೆ. ದ್ವಾರಮೆಟ್ಟಿಲುಗಳು ಸಹ ಅಲಂಕೃತವಾಗಿದೆ. ತಳವಿನ್ಯಾಸದಲ್ಲಿ ಇನ್‍ಸರಿತ ಮುನ್‍ಸರಿತಗಳನ್ನು ಹೊಂದಿದೆ. ಭಿತ್ತಿಯ ಸುತ್ತಲೂ ಅರೆಕಂಬಗಳು ಕಂಡುಬಂದಿದೆ.

ಮೇಲ್ಭಾಗದ ವಿಮಾನ ದುಸ್ಥಿತಿ ಹೊಂದಿದೆ. ಕೈಪಿಡಿ ಗೋಡೆಯು ದುಸ್ಥಿತಿ ಹೊಂದಿದ್ದು ಇತ್ತೀಚಿನ ಗಾರೆಯ ಕೈಪಿಡಿಯನ್ನು ಸಹ ಸೇರಿಸಲಾಗಿರುತ್ತದೆ (ಚಿತ್ರ ಸಂಖ್ಯೆ-21) ಈ ದೇವಾಲಯದ ಎದುರು ದ್ವಾರ ಮಂಟಪವಿದೆ. ಈ ದ್ವಾರ ಮಂಟಪದಲ್ಲಿ 12 ಕಂಬಗಳಿವೆ. ಈ ಊರು ಶೈವ ಮತ್ತು ವೈಷ್ಣವ ಧರ್ಮಕ್ಕೆ ಪೂರಕವಾಗಿ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬಂದಿದೆ.

### ಈಶ್ವರ ದೇವಾಲಯ-ಮಸಗನ ಹಳ್ಳಿ

ಮಸಗನಹಳ್ಳಿಯಲ್ಲಿ ಎರಡು ಶಿಲಾ ಶಾಸನಗಳಿದ್ದು ಇವುಗಳಲ್ಲಿ ಒಂದು ತಲಕಾಡಿನ ಗಂಗದೊರೆ ಎರಡನೇ ಮಾರಸಿಂಹನ ಕ್ರಿ.ಶ. 971-72ರ ಕಾಲದ ಶಾಸನವಾಗಿದೆ. 10 ಮತ್ತೊಂದು ಹೊಯ್ಸಳ ಅರಸ ಎರಡನೇ ವೀರಬಲ್ಲಾಳನ ಶಾಸನವಾಗಿದೆ. ಇದರ ಕಾಲ ಕ್ರಿ.ಶ. 1213 ಅಕ್ಟೋಬರ್ 11ನೇ ತಾರೀಖು ಶುಕ್ರವಾರದಂದು ಬರೆಸಲಾಗಿದೆ. [11]. ಈಶ್ವರ ದೇವಾಲಯಕ್ಕೆ ಪೂರಕವಾಗಿ ಈ ಶಾಸನವಿದೆ.ಆದರೆ ಈಶ್ವರ ದೇವಾಲಯ ಸಂಪೂರ್ಣವಾಗಿ ನಾಶವಾಗಿದೆ.

ಈಗ ಉಳಿದಿರುವುದು ಅಂದಿನ ಕಾಲದ ಶಿವಲಿಂಗ ಮಾತ್ರ ಅಲ್ಲದೆ ಪ್ರಾಚೀನ ಅವಶೇಷಗಳು ಸಹ ಕಂಡು ಬರುತ್ತವೆ. (ಚಿತ್ರ ಸಂಖ್ಯೆ–22)

**ನುಗ್ಗೇಹಳ್ಳಿಯ ದೇವಾಲಯಗಳು**

ನುಗ್ಗೇಹಳ್ಳಿ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನಲ್ಲಿದೆ. ಈ ಗ್ರಾಮ ಚನ್ನರಾಯಪಟ್ಟಣದಿಂದ ಸುಮಾರು 18 ಕಿ.ಮೀ. ದೂರದಲ್ಲಿದೆ. ಈ ಗ್ರಾಮವನ್ನು ಸೋಮನಾಥಪುರ ಅಗ್ರಹಾರವೆಂದು ಪುನರ್‌ನಾಮಕರಣ ಮಾಡಲಾಯಿತು. ಕ್ರಿ.ಶ. 1435ರ ಶಾಸನಗಳಲ್ಲಿ ಸಹ ನುಗ್ಗೇಹಳ್ಳಿಯನ್ನು ಸೋಮನಾಥಪುರ ಅಗ್ರಹಾರವೆಂದು ಮತ್ತು ನುಗ್ಗೀಹಳ್ಳಿ ಎಂದು ಕರೆಯುತ್ತಾರೆ. ಎಪಿಗ್ರಾಫಿಯ ಕರ್ನಾಟಿಕ ಗ್ರಂಥದಲ್ಲಿ ನುಗ್ಗೇಹಳ್ಳಿ ಎಂದು ಉಲ್ಲೇಖಿತವಾಗಿರುವುದರಿಂದ ಪ್ರಸ್ತುತ ಇಲ್ಲಿ ಈ ಗ್ರಾಮದ ಹೆಸರನ್ನು ನುಗ್ಗೇಹಳ್ಳಿ ಎಂದು ಕರೆಯಲಾಗಿರುತ್ತದೆ. ಈ ಊರಿನಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ತ್ರಿಕೂಟವಾದ ಲಕ್ಷ್ಮೀನರಸಿಂಹ (ಚಿತ್ರ ಸಂಖ್ಯೆ 31) ಏಕಕೂಟ ಚಂದ್ರಮೌಳೀಶ್ವರ, ಸದಾಶಿವ ದೇವಾಲಯಗಳಾಗಿವೆ. ಇವುಗಳಲ್ಲದೆ ತದನಂತರದ ಕಾಲದಲ್ಲಿ ನಿರ್ಮಿತಗೊಂಡು ಭಗ್ನವಾಗಿರುವ ಕೆಲವೊಂದು ದೇವಾಲಯದ ಭಗ್ನಾವಶೇಷಗಳು ಸಹ ಕಂಡುಬರುತ್ತವೆ.

**ಲಕ್ಷ್ಮೀನರಸಿಂಹ ದೇವಾಲಯ**

ಈ ದೇವಾಲಯವನ್ನು ಹೊಯ್ಸಳ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಅವನ ಸಂಧಿ ವಿಗ್ರಹಿಯಾದ ಬೊಮ್ಮಣ್ಣ ಎಂಬ ದಂಡನಾಯಕನು ಕ್ರಿ.ಶ. 1246ರಲ್ಲಿ ಪ್ರಸನ್ನಕೇಶವ ದೇವಾಲಯವನ್ನು ನಿರ್ಮಿಸಿದನು. ಕ್ರಿ.ಶ. 1142 ರಿಂದ 1173ರ ಅವಧಿಯಲ್ಲಿ ವಿಜಯಾದಿತ್ಯ ಹೆಗ್ಗಡೆ ಶತರುದ್ರಯಾಗಪುರಿ ಗೊರೂರಿನಲ್ಲಿ ತ್ರಿಕೂಟಲಿಂಗವನ್ನು ಸ್ಥಾಪಿಸಿದನೆಂದೂ ಈ ದೇವಾಲಯದ ಪೂಜಾ ಸೇವಾಕಾರ್ಯಕ್ಕಾಗಿ ಮಾವಿನಕೆರೆಯಲ್ಲಿ ಭೂಮಿಯನ್ನು ಬಿಟ್ಟನೆಂದು ತಿಳಿದುಬರುತ್ತದೆ.

ಈ ದೇವಾಲಯದ ಹೆಸರೇ ಸೂಚಿಸುವಂತೆ, ದೇವಾಲಯದಲ್ಲಿ ಮೂರು ಶಿವಲಿಂಗಗಳಿವೆ. ಸುಕನಾಸಿಯ ಅಂಕಣಕ್ಕೆ ಸೇರಿದಂತೆ, ಮಹಿಷಮರ್ದಿನಿ, ವೀರಭದ್ರ, ಗಣಪತಿ, ದುರ್ಗಿಯರು, ಸುಬ್ರಹ್ಮಣ್ಯೇಶ್ವರ ಶಿಲ್ಪಗಳಿವೆ. ಗರ್ಭಗೃಹದಲ್ಲಿರುವ ಮೂರು ಲಿಂಗದಲ್ಲೂ ಸೊಗಸಾದ ಕೆತ್ತನೆ ಇದೆ.

ನರಸಿಂಹ ಮತ್ತು ಗೋಪಾಲ ದೇವರುಗಳನ್ನು ಪ್ರತಿಷ್ಠಾಪಿಸಿದಲ್ಲದೆ ನಿತ್ಯ ಕಾರ್ಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿದನು. ಇಲ್ಲಿಯ ಮೂರು ಶಾಸನಗಳಲ್ಲಿ ದಂಡನಾಯಕನಾದ ಬೊಮ್ಮಣ್ಣನ ಉಲ್ಲೇಖವಿದೆ. ಅವುಗಳಲ್ಲಿ ಎರಡು ಶಾಸನಗಳನ್ನು ಬೊಮ್ಮಣ್ಣ ದಂಡನಾಯಕನೇ ಹಾಕಿಸಿದ್ದಾನೆ. ಈ ದೇವಾಲಯವನ್ನು ತಿ.ನರಸೀಪುರ ತಾಲೂಕಿನ ಸೋಮನಾಥಪುರದ ಚೆನ್ನಕೇಶವ ದೇವಾಲಯದ ನಿರ್ಮಾಣಕ್ಕಿಂತ 20 ವರ್ಷ ಸೋಮನಾಥಪುರವಾದ ನುಗ್ಗೇಹಳ್ಳಿಯಲ್ಲಿ ಬೊಮ್ಮಣ್ಣನಾಯಕನ ಹಿರಿಯ ಅಕ್ಕ ಲಕ್ಷ್ಮೀ ಅಥವಾ ಲಕ್ಕವ್ವೆಯ ಮಕ್ಕಳು ನಾನಾಗೋತ್ರದ ಬ್ರಾಹ್ಮಣರಿಗೆ ಛತ್ರದಲ್ಲಿ ಪ್ರತಿದಿನ ಎಂಟು ಜನ ಬ್ರಾಹ್ಮಣರ ಭೋಜನಕ್ಕಾಗಿ ಸರ್ವಜನರ ಉಪಯೋಗಕ್ಕಾಗಿಯೂ ಹಲವಾರು ದಾನಗಳನ್ನು ನೀಡಿದನು. ಕ್ರಿ.ಶ. 1253ರ ಆ ಶಾಸನವನ್ನು ತಳಗಲ್‌ನ ವಿಷ್ಣುಭಟ್ಟನ ಮಗ ಕಮ್ಮರ ಬಸವಣ್ಣನು ಹಾಕಿಸಿದ್ದಾನೆ. ಇದರಲ್ಲಿಯೂ ಬ್ರಾಹ್ಮಣರಿಗಾಗಿ ಛತ್ರ ಮತ್ತು ಜನರ ಉಪಯೋಗಕ್ಕಾಗಿ ಬ್ರಹ್ಮಸಮುದ್ರ ಕೆರೆಯನ್ನು ಹತ್ತಿರದ ಗೊತ್ತಿಕೆರೆಯಲ್ಲಿ ಮಾಡಿಸಿದನೆಂದೂ ತಿಳಿದುಬರುತ್ತದೆ. ಈಗಲೂ ಈ ಕೆರೆಯು ಸದಾಶಿವ ದೇವಾಲಯದ ಪಕ್ಕದಲ್ಲಿದೆ. ಈ ದೇವಾಲಯದ ಮುಖ್ಯ ದೇವರು ಕೇಶವನಾದರೂ ಇದನ್ನು ಲಕ್ಷ್ಮೀನರಸಿಂಹ ದೇವಾಲಯ ಎಂದು ಸ್ಥಳೀಯರು ಕರೆಯುತ್ತಾರೆ. ಕ್ರಿ.ಶ. 1435ರ ಶಾಸನದಲ್ಲಿ ಉಲ್ಲೇಖಿತವಾಗಿರುವಂತೆ ವಿಜಯನಗರದ ರಾಜ ದೇವರಾಯನು ನುಗ್ಗೇಹಳ್ಳಿಯನ್ನು ಅವನ ಮಾಂಡಲೀಕನಾದ ಕಟ್ಟಿಕಗೆಯ ಗುಂಡಪ್ಪನಾಯಕನು ಆಳುತ್ತಿರುವಾಗ ಅದರ ಅಧಿಕಾರಿಯಾದ ಚಿಕ್ಕಭೀಮಣ್ಣನು ನರಸಿಂಹ ದೇವಾಲಯಕ್ಕೆ ಕೆಲವು ಪ್ರತಿಮೆಗಳನ್ನು ಮಾಡಿಸಿಕೊಟ್ಟನು. ವಿಜಯನಗರದ ಕಾಲದಲ್ಲಿಯೂ ಸಹ ನುಗ್ಗೇಹಳ್ಳಿಯು ಒಂದು ಪ್ರಮುಖ ಅಗ್ರಹಾರವಾಗಿತ್ತು ಹಾಗೂ ರಾಜಕೀಯ ಚಟುವಟಿಕೆಯ ಕೇಂದ್ರವಾಗಿತ್ತು ಎಂದು ಹೇಳಬಹುದಾಗಿದೆ.

ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವು ಪೂರ್ವಾಭಿಮುಖವಾಗಿದ್ದು ತ್ರಿಕೂಟಚಲವಾಗಿದೆ. ಇದನ್ನು ಬಳಪದ ಕಲ್ಲಿನಿಂದ ಕಟ್ಟಲಾಗಿದೆ. ಇದರ ವಾಸ್ತುವು ದ್ರಾವಿಡ ಶೈಲಿಯಲ್ಲಿದೆ. ಮೂಲ ದೇವಾಲಯವು ಸಂಪೂರ್ಣವಾಗಿ ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿದ್ದು ಪಾತಾಳಂಕಣವು ಮಾತ್ರ ವಿಜಯನಗರದ ಕಾಲದಲ್ಲಿ ನಿರ್ಮಾಣವಾಗಿದೆ. ದೇವಾಲಯದ ಹಲವು ಭಾಗಗಳನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ತ್ರಿಕೂಟಾಚಲನಾದ ಈ ದೇವಾಲಯವು ಚತುರಸ್ತವಾದ ತಳವಿನ್ಯಾಸಗಳನ್ನು ಹೊಂದಿದ್ದು, ಸುಮಾರು 3 ಅಡಿ ಎತ್ತರದ ಜಗತಿಯನ್ನು ಹೊಂದಿದೆ. ಅಧಿಷ್ಠಾನದಲ್ಲಿ ಗಜ, ಹೂಬಳ್ಳಿ, ಕೆತ್ತನೆಗಳು, ಕುದುರೆಗಳ ಸಾಲು ಹೀಗೆ ಹಲವಾರು ಶಿಲ್ಪಗಳನ್ನು ಒಳಗೊಂಡಿದೆ. ಈ ದೇವಾಲಯವು ಮೂರು ಗರ್ಭಗೃಹ, ಒಂದು ಸುಕನಾಸಿ, ನವರಂಗ, ಸಭಾಮಂಟಪ ಮತ್ತು ಮುಂಭಾಗದಲ್ಲಿ ಚಿಕ್ಕದಾದ ಮುಖಮಂಟಪ ಇದರ ಮುಂಭಾಗದಲ್ಲಿ ವಿಶಾಲವಾದ

ಪಾತಾಳಂಕಣವನ್ನು ಹೊಂದಿದೆ. ದೇವಾಲಯದ ಸುತ್ತಲೂ ಪ್ರಾಕಾರವಿದ್ದು, ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿರುವ ಮುಖ್ಯದ್ವಾರ ಮಂಟಪವನ್ನು ಹೊಂದಿದೆ. ದೇವಾಲಯದ ಸಂಪೂರ್ಣ ವಾಸ್ತುಕೃತಿಯು ಹೊಯ್ಸಳರ ಕಾಲದಲ್ಲಿ ರಚನೆಯಾಗಿದ್ದರೂ ನಂತರದ ಕಾಲಘಟ್ಟದಲ್ಲಿ ಅಲ್ಲಲ್ಲಿ ಹಲವಾರು ಹೊಸ ಹೊಸ ಜೋಡಣೆಗಳಾಗಿರುವುದನ್ನು ಇಲ್ಲಿ ಕಾಣಬಹುದು. ಇದನ್ನು ಆಯಾ ಭಾಗಗಳನ್ನು ಉಲ್ಲೇಖಿಸುವಾಗ ವಿವರಣೆಯನ್ನು ನೀಡುವಾಗ ಅವುಗಳ ಕಾಲಘಟ್ಟಗಳ ಮತ್ತು ಅವುಗಳ ಲಕ್ಷಣಗಳನ್ನು ವಿವರಿಸಲಾಗಿದೆ. ಈ ದೇವಾಲಯದ ಗರ್ಭಗುಡಿಗಳು ತ್ರಿಕೂಟಾಚಲ ದೇವಾಲಯವಾಗಿರುವುದರಿಂದ ಇಲ್ಲಿ ಮೂರು ಗರ್ಭಗೃಹಗಳಿವೆ. ಪಶ್ಚಿಮ ಭಾಗದ ಗರ್ಭಗುಡಿಯಲ್ಲಿ ಗರುಡ ಪೀಠದ ಮೇಲೆ ಸುಮಾರು 4.5 ಅಡಿ ಎತ್ತರದ ಕೇಶವನ ಶಿಲ್ಪವನ್ನು ಇಡಲಾಗಿದೆ. ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು, ಶಂಖ, ಚಕ್ರ, ಗದ ಮತ್ತು ಪದ್ಮವನ್ನು ಹೊಂದಿದ್ದು ಮುಖಭಾವವು ಬಹಳ ಸೌಮ್ಯತೆಯಿಂದ ಕೂಡಿದೆ. ಆದುದರಿಂದಲೇ ಇದನ್ನು ಪ್ರಸನ್ನ ಕೇಶವ ಎಂದು ಕರೆಯಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯನ್ನು ಇದರಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪವನ್ನು ಕಡೆಯಲಾಗಿದೆ. ಪ್ರಭಾವಳಿಯ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯನ್ನು ಕಡೆಯಲಾಗಿದೆ. ಈ ಗರ್ಭಗೃಹದ ದ್ವಾರಬಂದವು ನಾಲ್ಕು ಶಾಖೆಗಳನ್ನು ಒಳಗೊಂಡಿದೆ. ಮೊದಲನೆ ಎರಡು ಶಾಖೆಗಳು ನಿರಾಡಂಬರವಾಗಿದೆ. ಮಧ್ಯದ ಶಾಖೆಯು ಕಂಬ ಮಾದರಿಯಲ್ಲಿದೆ. ಲಲಾಟ ಬಿಂಬದಲ್ಲಿ ಲಕ್ಷ್ಮೀನಾರಾಯಣನನ್ನು ಕಡೆಯಲಾಗಿದೆ. ಇದರ ಮೇಲ್ಭಾಗದ ತೋರಣದಲ್ಲಿ ಕೇಶವನನ್ನು ಚಿತ್ರಿಸಲಾಗಿದ್ದು ಎರಡು ಕಡೆಗಳಲ್ಲೂ ಅಲಂಕೃತ ವ್ಯಾಳಗಳನ್ನು ಕಡೆಯಲಾಗಿದೆ.

ಸುಕನಾಸಿಯು ಗರ್ಭಗೃಹದಷ್ಟೇ ವಿಶಾಲವಾದ ವಿಸ್ತೀರ್ಣವನ್ನು ಶುಕನಾಸಿಯು ಸಹ ಹೊಂದಿದೆ. ಇಲ್ಲಿಯ ಒಳಭಾಗದಲ್ಲಿ ಅಷ್ಟೇನೂ ಅಲಂಕರಣೆ ಕಂಡುಬರುವುದಿಲ್ಲ. ಮೇಲ್ಭಾಗದ ದ್ವಾರಬಂಧವು ಪಂಚಶಾಖೆಯನ್ನು ಹೊಂದಿದೆ. ಒಂದರಲ್ಲಿ ಕಂಬದ ಕೆತ್ತನೆ ಇದೆ. ದ್ವಾರದ ಮೊದಲೆರಡು ಒಳಶಾಖೆಗಳನ್ನು ವೃತ್ತಾಕಾರದ ಬಳ್ಳಿ ಲತಾ ಸಾಲುಗಳಿಂದ ಅಲಂಕರಿಸಲಾಗಿದೆ. ಇಲ್ಲಿ ಕಪೋತದ ಕೆಳಗೆ ಮತ್ತೊಂದು ಪಟ್ಟಿಕೆಯನ್ನು ಸೇರಿಸಿದ್ದು, ಅದು ಶಾಖೆಯ ಒಂದು ಭಾಗವಾಗಿದೆ. ಇದರ ಲಲಾಟಬಿಂಬದಲ್ಲಿ ಪೀಠದ ಮೇಲೆ ಕುಳಿತಿರುವ ಯೋಗೀಶ್ವರ ವಿಷ್ಣುವನ್ನು ಕಡೆಯಲಾಗಿದೆ. ಎಡಗಾಲನ್ನು ಮಡಚಿಕೊಂಡು ಬಲಗಾಲನ್ನು ಇಳಬಿಟ್ಟ ರೀತಿಯಲ್ಲಿ ಕಡೆಯಲಾಗಿದೆ. ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯನ್ನು ನಿಂತ ಭಂಗಿಯಲ್ಲಿ ಕಡೆಯಲಾಗಿದೆ. ಗರ್ಭಗೃಹ ಮತ್ತು ಸುಕನಾಸಿಯ ದ್ವಾರ ಬಂಧಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಕಡೆಯಲಾಗಿದೆ. ಈ ಸುಕನಾಸಿಯಲ್ಲಿ ಸುಮಾರು ಮೂರು ಅಡಿ ಎತ್ತರದ

ಕೇಶವ ದೇವರ ಲೋಹದ ಉತ್ಸವ ಮೂರ್ತಿಯನ್ನು ಇಟ್ಟಿದ್ದಾರೆ. ಕೇಶವನ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಲೋಹದ ಮೂರ್ತಿಗಳನ್ನು ಸಹ ಇಲ್ಲಿ ಕಾಣಬಹುದು.

**ಉತ್ತರ ದಿಕ್ಕಿನ ಗರ್ಭಗುಡಿ:** ಉತ್ತರ ಭಾಗದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ಲಕ್ಷ್ಮೀನರಸಿಂಹನ ಶಿಲ್ಪವಿದೆ. ಇದು ಸುಮಾರು ನಾಲ್ಕು ಅಡಿ ಎತ್ತರವಿದೆ. ನರಸಿಂಹನು ತೊಡೆಯ ಮೇಲೆ ಲಕ್ಷ್ಮೀಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಇದಕ್ಕೆ ಸುಂದರವಾದ ಪ್ರಭಾವವಿದ್ದು ಇದರಲ್ಲಿ ವಿಷ್ಣುವಿನ ದಶಾವತಾರದ ಕೆತ್ತನೆಯನ್ನು ಕಡೆಯಲಾಗಿದೆ. ಈ ಶಿಲ್ಪವು ಹೊಸ ಹೊಳಲಿನ ದೇವಾಲಯದಲ್ಲಿರುವ ಲಕ್ಷೀನರಸಿಂಹ ದೇವಾಲಯದ ಮಾದರಿಯದ್ದಾಗಿದೆ.

ದ್ವಾರಬಂಧದಲ್ಲಿ ಐದು ಅಲಂಕಾರಕ ಪಟ್ಟಿಕೆಯಿದ್ದು ಇದರಲ್ಲಿಯೂ ಹೂಬಳ್ಳಿಗಳ ಅಲಂಕಾರವಿದ್ದು ಮಧ್ಯದಲ್ಲಿ ಲಂಬವಾದ ಕಂಬಗಳ ಚೂರುಗಳು, ಕಪೋತಗಳು ಇಲ್ಲಿ ಕಂಡುಬರುತ್ತವೆ. ಇದರ ಲಲಾಟಬಿಂಬದಲ್ಲಿ ಲಕ್ಷ್ಮೀನರಸಿಂಹನ ಕುಳಿತ ಶಿಲ್ಪವಿದ್ದು ಅಕ್ಕ ಪಕ್ಕದಲ್ಲಿ ಪರಿಚಾರಕಿಯರ ಕೆತ್ತನೆಗಳಿವೆ. ಮೇಲ್ಭಾಗದಲ್ಲಿ ಮಕರ ತೋರಣದಲ್ಲಿ ಯೋಗನರಸಿಂಹನನ್ನು ಕುಳಿತ ಭಂಗಿಯಲ್ಲಿ ಕೆತ್ತಲಾಗಿದೆ. ಇದಕ್ಕೆ ಕೋಷ್ಠ ರೀತಿಯಲ್ಲಿ ಕಮಾನುಳ್ಳ ಮಂಟಪವನ್ನು ಕಡೆಯಲಾಗಿದೆ. ಗೂಡಿನ ಅಕ್ಕ ಪಕ್ಕದಲ್ಲಿ ಮಕರಗಳ ಅಲಂಕರಣೆಯನ್ನು ಮಾಡಲಾಗಿದೆ. ಭುವನೇಶ್ವರಿಯಲ್ಲಿ ಪದ್ಮದ ರಚನೆ ಇದೆ. ದ್ವಾರದ ಎರಡು ಭಾಗದಲ್ಲೂ ವೈಷ್ಣವ ದ್ವಾರ ಪಾಲಕರ ಶಿಲ್ಪಗಳಿವೆ.

ದಕ್ಷಿಣ ಭಾಗದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರದ ವೇಣುಗೋಪಾಲನ ಶಿಲ್ಪವಿದೆ. ತ್ರಿಭಂಗಿಯಲ್ಲಿರುವ ಕೃಷ್ಣನು ಬಲಕ್ಕೆ ಕೊಳಲನ್ನು ಹಿಡಿದು ನಿಂತಿದ್ದಾನೆ. ಇದಕ್ಕೆ ಸುಂದರವಾದ ಪ್ರಬಾವಳಿಯಿದ್ದು ಇಲ್ಲಿ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕಡೆಯಲಾಗಿದೆ. ಈ ಶಿಲ್ಪವು ಸೋಮನಾಥಪುರದ ದೇವಾಲಯದ ವೇಣುಗೋಪಾಲನ ಲಕ್ಷಣಗಳನ್ನು ಹೊಂದಿದೆ. ಭುವನೇಶ್ವರಿಯಲ್ಲಿ ಪದ್ಮ ಮಂಡಲ ಪಿತಾನವಿದೆ.

ಲಲಾಟ ಬಿಂಬದಲ್ಲಿ ಅಮರನಾರಾಯಣನ ಶಿಲ್ಪವಿದೆ. ನಾರಾಯಣನು ಕುಳಿತ ಭಂಗಿಯಲ್ಲಿದ್ದು ಆದಿಶೇಷನ ಮೇಲೆ ಕುಳಿತಿದ್ದು ಒಂದು ಕಾಲನ್ನು ಇಳಿಬಿಟ್ಟು ಮತ್ತೊಂದು ಕಾಲನ್ನು ಮಡಿಚಿ ಅದರ ಕೈಯನ್ನು ಹೊರಚಾಚಿಕೊಂಡಿದ್ದು ಸುಖಾಸನದ ರೀತಿಯಲ್ಲಿದ್ದಾನೆ. ಇದನ್ನು ಆದಿಮೂರ್ತಿ, ಶೇಷಶಯನ ವಿಷ್ಣು ಎಂದು ಕರೆಯಬಹುದು. ದ್ವಾರಬಂಧಗಳನ್ನು ಅಲಂಕರಣ ಪಟ್ಟಿಕೆಗಳಿಂದ ಕೆತ್ತಲಾಗಿದ್ದು ಐದು ಶಾಖೆಗಳನ್ನು ಕೆತ್ತಿದ್ದಾರೆ. ಇಲ್ಲಿ ಅರೆ ಕಂಬಗಳು

ಹೂಬಳ್ಳಿಗಳು ಇನ್ನಿತರ ಅಲಂಕರಣ ಪಟ್ಟಿಕೆಯನ್ನು ಮಾಡಲಾಗಿದೆ. ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ.

ಈ ಮೂರು ಗರ್ಭಗೃಹಗಳು ಸಹ ಒಂದೇ ಅಳತೆಯ ವಿಸ್ತೀರ್ಣವನ್ನು ಹೊಂದಿದ್ದು ಸಾಮಾನ್ಯವಾಗಿ ಒಂದೇ ಲಕ್ಷಣಗಳನ್ನು ಹೊಂದಿದೆ. ಎಲ್ಲವೂ ಚೌಕಾಕಾರವಾಗಿದೆ. ಆದರೆ ಮುಖ್ಯ ದೇವರಿರುವ ಗುಡಿಯ ಮುಂಭಾಗದಲ್ಲಿ ಅಂದರೆ ಕೇಶವ ದೇವರಿರುವ ಪಶ್ಚಿಮ ಗರ್ಭಗುಡಿಗೆ ಹೊಂದಿಕೊಂಡಂತೆ ಮಾತ್ರ ಸುಕನಾಸಿಯಿದ್ದು ಉಳಿದ ಉತ್ತರ ಮತ್ತು ದಕ್ಷಿಣ ಗರ್ಭಗೃಹಗಳಲ್ಲಿ ಸುಕನಾಸಿಯು ಇರುವುದಿಲ್ಲ. ಇವು ನೇರವಾಗಿ ನವರಂಗಕ್ಕೆ ಹೊಂದಿಕೊಂಡಂತಿವೆ.

ನವರಂಗದ ಬಲಭಾಗದಲ್ಲಿ ಸುಮಾರು ಮೂರು ಅಡಿ ಎತ್ತರದ ಗಣೇಶನ ಶಿಲ್ಪವಿದೆ. ಎಡಭಾಗದಲ್ಲಿಯೂ ಮೂರು ಅಡಿ ಎತ್ತರದ ಮಹಿಷಮರ್ದಿನಿಯ ಶಿಲ್ಪವಿದೆ. ಮಧ್ಯಭಾಗದಲ್ಲಿ ಸ್ವತಂತ್ರ್ಯವಾದ ನಾಲ್ಕು ಕಂಬಗಳಿವೆ. ಇವುಗಳು ಚೌಕಾಕಾರದ ಪೀಠ ದುಂಡಾದ ಮೈಯುಳ್ಳ ಹಲವು ಬಳೆಗಳಿಂದ ರಚನೆಯಾಗಿದೆ. ಕುಂಭ ಗಂಟೆಗಳ ಆಕೃತಿಯಲ್ಲಿ ಅಲಂಕರಣಗೊಂಡಿದೆ. ಈ ಕಂಬಗಳನ್ನು ಚರಕ ಯಂತ್ರದ ಮೇಲೆ ತಿರುಗಿಸಿ ದುಂಡಗೆ ಮಾಡಿದ್ದಾರೆ. ಕಂಬಗಳ ಮೇಲಿನ ಭೋದಿಗೆಗಳು ಸಹ ಅಲಂಕಾರಿಕವಾಗಿರುತ್ತದೆ. ದೇವಾಲಯದ ಪ್ರತಿ ಮೂಲೆಯಲ್ಲೂ ಭಿತ್ತಿಗೆ ಹೊಂದಿಕೊಂಡಂತೆ 32 ಅಂಚುಗಳುಳ್ಳ ಕೆಳಮುಖ ಭೋದಿಗೆಯ ಹದಿನಾಲ್ಕು ಕಂಬಗಳಿವೆ. ಇವುಗಳು ಹೊರಭಾಗದಲ್ಲಿ ಮಾತ್ರ ಅಲಂಕರಣೆಯನ್ನು ಹೊಂದಿದ್ದು ಒಳಭಾಗದಲ್ಲಿ ಅಂದರೆ ಭಿತ್ತಿಗೆ ಹೊಂದಿಕೊಂಡಂತೆ ಇರುವ ಭಾಗವು ಅಲಂಕರಣವನ್ನು ಹೊಂದಿರುವುದಿಲ್ಲ. ನವರಂಗದ ಮಧ್ಯದಲ್ಲಿ ಸುಮಾರು ಅರ್ಧ ಅಡಿ ಎತ್ತರದ ಚೌಕಾಕಾರದ ಜಗತಿಯನ್ನು ರಚಿಸಿದ್ದಾರೆ. ನವರಂಗದಲ್ಲಿರುವ ಎಲ್ಲಾ ಭುವನೇಶ್ವರಿಗಳು ಪದ್ಮಮಂಡಲವನ್ನು ಹೊಂದಿದೆ. ಕೆಲವು ಭುವನೇಶ್ವರಿಗಳು ಶಿಲ್ಪದ ಜೊತೆಯಲ್ಲಿಯೇ ಪದ್ಮಮಂಡಲದ ಅಲಂಕರಣವನ್ನು ಹೊಂದಿದೆ. ಪದ್ಮಮಂಡಲಗಳನ್ನು ವೃತ್ತಾಕಾರದಲ್ಲಿ ಜೋಡಿಸಿದಂತೆ ಬಿಡಿಸಿರುವ ಪಿತಾನವನ್ನು ಪದ್ಮಮಂಡಲ ಪಿತಾನ ಎಂದು ಕರೆಯುವರು. ಪದ್ಮಮಂಡಲದ ಮಧ್ಯ ಭಾಗದಲ್ಲಿ ಇಳಿಬಿದ್ದಿರುವ ಮೊಗ್ಗಿಗೆ ಪದ್ಮಶಿಲಾ ಎಂದು ಕರೆಯುತ್ತಾರೆ. ಪ್ರಾಯಶಃ ಕಲಾವಿದನಿಗೆ ಭುವನೇಶ್ವರಿಯ ನಿರ್ಮಾಣದಲ್ಲಿ ಅತ್ಯಂತ ಪ್ರಭುತ್ವ ಬೇಕಾಗಿರುತ್ತದೆ. ಇನ್ನು ಕೌಶಲ್ಯವನ್ನು ಭುವನೇಶ್ವರಿಯ ನಿರ್ಮಾಣದಲ್ಲಿ ತೋರಿಸುತ್ತಿದ್ದ ಉದಾಹರಣೆಗೆ ಮಲ್ಲಿತಮ್ಮ. ಇವುಗಳು ಕೆತ್ತನೆಯು ಕಲಾವಿದನ ಜಾಣ್ಮೆಯ ಮತ್ತು ಅವನಲ್ಲಿರುವ ಕಲಾ ಪ್ರಜ್ಞೆಗೆ ಸವಾಲಾದ ಕೆಲಸವಾಗಿದೆ. ಇದು ಕಲಾವಿದನಿಗೆ ತನ್ನ ಪ್ರೌಢಿಮೆಯನ್ನು ತೋರಿಸಲು ಒಂದು ಪ್ರಮುಖವಾದ ಕೆಲಸ ಎಂದೇ ಹೇಳಬಹುದು.

ಇವುಗಳ ರಚನೆಯಲ್ಲಿ ಕೆಲವು ಮುಖ್ಯ ಸಂಗತಿಯನ್ನು ನಾವು ಗಮನಿಸಬಹುದು. ಭುವನೇಶ್ವರಿ ಅಲಂಕೃತವಾದಷ್ಟು ಕುಸುರಿನ ಕೆತ್ತನೆಗಳು ಇದ್ದಷ್ಟು ರಚನೆಯಲ್ಲಿ ತಾಂತ್ರಿಕ ಪರಿಣತೆಯನ್ನು ಓರೆಯಾಗಿ ಹಚ್ಚಬೇಕಾಗುತ್ತದೆ. ಬಿಡಿ ಶಿಲ್ಪದ ಹಾಗೆ ಇದನ್ನು ಒಂದೇ ಕಲ್ಲಿನಲ್ಲಿ ಮಾಡಲು ಆಗುವುದಿಲ್ಲ. ಅದರ ವಿನ್ಯಾಸ ಹಾಗೂ ಅದರ ದಪ್ಪ ಒಳ ಅಳತೆಗಳಿಗೆ ಅನುಸಾರವಾಗಿ ಎಷ್ಟು ತುಂಡುಗಳು ಬೇಕೆಂಬುದನ್ನು ಮೊದಲೇ ತಿಳಿದುಕೊಂಡು ಏನನ್ನು ಕೆತ್ತಬೇಕೆನ್ನುವುದನ್ನು ಕೂಡ ಪೂರ್ವದಲ್ಲಿಯೇ ತಿರ್ಮಾನಿಸಿ ಆಯಾ ಕೆತ್ತನೆಯನ್ನು ಮಾಡಬೇಕಾಗುತ್ತದೆ. ಪ್ರತಿಯೊಂದು ತುಂಡು ಕಲ್ಲುಗಳನ್ನು ಒಳವಿನ್ಯಾಸಕ್ಕೆ ತಕ್ಕಂತೆ ಮೊದಲೆ ಕೆತ್ತಿ ಆಕೃತಿಗಳನ್ನು ಪೂರ್ವದಲ್ಲಿಯೇ ತಿರ್ಮಾನಿಸಿ ಆಯಾ ಕೆತ್ತನೆಯನ್ನು ಮಾಡಬೇಕಾಗುತ್ತದೆ. ಪ್ರತಿಯೊಂದು ತುಂಡು ಕಲ್ಲುಗಳನ್ನು ಒಳ ವಿನ್ಯಾಸಕ್ಕೆ ತಕ್ಕಂತೆ ಮೊದಲೆ ಕೆತ್ತಿ ಆಕೃತಿಗಳನ್ನು ಪೂರ್ಣಗೊಳಿಸಿ ವ್ಯವಸ್ಥಿತವಾಗಿ ಜೋಡಿಸುವುದರಲ್ಲೂ ತಾಂತ್ರಿಕ ಪರಿಣಿತಿ ಅತ್ಯಾವಶ್ಯಕ. ಇವುಗಳನ್ನು ಒಂದಕ್ಕೊಂದು ಲಂಬವಾಗಿ ಅಥವಾ ಅಡ್ಡವಾಗಿ ಜೋಡಿಸಿದಾಗ ಜೋಡಣೆಗೊಂಡ ಸ್ಥಳದ ಗುರುತು ಸಿಗದೆ ಇರುವ ಹಾಗೆ ಕಲ್ಲು ತುಂಡುಗಳನ್ನು ಇದರಲ್ಲಿ ವಿನ್ಯಾಸ ಗೊಳಸಬೇಕಾಗುತ್ತದೆ. ಇಲ್ಲಿ ವಿವಿಧ ದೇವತೆಗಳನ್ನು ರಾಜರಾಣಿಯರ ಸಭೆ, ನರ್ತನ ಮಾಡುತ್ತಿರುವ ಸ್ತ್ರೀಯರು ಅಷ್ಟದಿಕ್ಪಾಲಕರು ಅಲ್ಲದೇ ವೃತ್ತ, ವಜ್ರ, ಆಯತ, ನಕ್ಷತ್ರ ಇತ್ಯಾದಿ ರೂಪುಗಳನ್ನು ನೀಡಿರುತ್ತಾರೆ. ಅತ್ಯಂತ ಕುಸುರಿಯ ಕೆತ್ತನೆಯಿಂದ ಕೂಡಿದ ಭುವನೇಶ್ವರಿಗಳನ್ನು ಅಮೃತಾಪುರದ ಅಮೃತೇಶ್ವರ ಮತ್ತು ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿ ಕಾಣಬಹುದು. ಇದೇ ರೀತಿಯಲ್ಲಿ ಈ ದೇವಾಲಯದ ನವರಂಗ ಭುವನೇಶ್ವರಿಗಳಲ್ಲೂ ಕಾಣಬಹುದು.

ನವರಂಗದಿಂದ ಸಭಾಮಂಟಪಕ್ಕೆ ಪ್ರವೇಶ ಕಲ್ಪಿಸುವ ದ್ವಾರವು ಕೂಡ ಅಲಂಕೃತಗೊಂಡಿದೆ. ಇದರಲ್ಲಿ ವೈವಿಧ್ಯಮಯವಾದ ಕಂಬಗಳ ಕೆತ್ತನೆ ಇದೆ. ಸರಳ ಚಾಚುಕಂಬದ ಜೊತೆಗೆ ಅರ್ಧ ವೃತ್ತಾಕಾರದ ವೈಷ್ಣವ ದ್ವಾರಪಾಲಕರ ಶಿಲ್ಪವನ್ನು ಕಡೆಯಲಾಗಿದೆ. ಲಲಾಟ ಬಿಂಬದಲ್ಲಿ ವೀಣೆಯನ್ನು ಹಿಡಿದು ಕುಳಿತಿರುವ ಸರಸ್ವತಿಯ ಶಿಲ್ಪವಿದೆ. ಸಾಮಾನ್ಯವಾಗಿ ಈ ಜಾಗದಲ್ಲಿ ಗಜಲಕ್ಷ್ಮೀ ಮತ್ತು ದೇವಾಲಯಗಳ ಮುಖ್ಯ ದೇವರಿಗಿರುವ ಅವತಾರದ ಶಿಲ್ಪಗಳನ್ನು ಇಲ್ಲಿ ಕಾಣುತ್ತೇವೆ. ಆದರೆ ಇಲ್ಲಿ ಸರಸ್ವತಿಯ ಶಿಲ್ಪವನ್ನು ಕೆತ್ತಲಾಗಿದೆ. ಈ ರೀತಿಯ ಶಿಲ್ಪಗಳು ಲಲಾಟಬಿಂಬದಲ್ಲಿ ಕೊರೆದಿರುವುದು ಸ್ವಲ್ಪ ವಿರಳವೆಂದೇ ಹೇಳಬಹುದು.

ನವರಂಗದ ಮುಂಭಾಗದಲ್ಲಿ ಸಭಾ ಮಂಟಪವಿದೆ. ಇಲ್ಲಿ ಮೊದಲು ಹೊಯ್ಸಳ ಕಾಲದಲ್ಲಿ ನಿರ್ಮಿಸಲಾಗಿರುವ ನಾಲ್ಕು ಗ್ರೀಕರ ಮಾದರಿಯ ಕಂಬಗಳಿದ್ದು ಅವು ಸಣ್ಣದಾದ ಮುಖಮಂಟಪವನ್ನು ರಚನೆ ಮಾಡಿರುವಂತಿದೆ. ಆದರೆ ನಂತರದ ಕಾಲದಲ್ಲಿ ಅಂದರೆ

ವಿಜಯನಗರ ಕಾಲದಲ್ಲಿ ಇದಕ್ಕೆ ಹೊಂದಿಕೊಂಡಂತೆ ನಾಲ್ಕು ಸ್ವತಂತ್ರ ಕಂಬಗಳಿರುವ ಒಂದು ಚಿಕ್ಕದಾದ ಸಭಾ ಮಂಟಪವನ್ನು ರಚಿಸಿದ್ದಾರೆ. ಇಲ್ಲಿರುವ ಕಂಬಗಳು ಗ್ರಾನೈಟ್ ಶಿಲೆಯಾಗಿದ್ದು ಚೌಕಾಕಾರವಾಗಿದೆ. ಪೂರ್ವಕಾಲದಲ್ಲಿ ಕಟ್ಟಲಾಗಿರುವ ಸಣ್ಣದಾದ ಮುಖಮಂಟಪಕ್ಕೆ ಹೊಂದಿಕೊಂಡಂತೆ ಇದನ್ನು ಸೇರಿಸಿ ಕಟ್ಟಲಾಗಿದೆ. ಇದರ ಮುಂಭಾಗದ ಭಿತ್ತಿಯಲ್ಲಿ ದೊಡ್ಡದಾದ ಜಾಲಾಂಧ್ರವನ್ನು ರಚಿಸಲಾಗಿದೆ.

ಸಭಾಮಂಟಪದ ಮೂಲಕ ಪಾತಾಂಶ ಕಣವಿದ್ದು ಇದು ಸುಮಾರು 5 ಅಡಿ ಎತ್ತರ 3 ಅಡಿ ಅಗಲ 30 ಅಡಿ ಉದ್ದವಿದೆ. ಇಲ್ಲಿಯು ಸಹ ನಾಲ್ಕು ಸ್ವತಂತ್ರ ಕಂಬಗಳನ್ನು ನಿರ್ಮಿಸಲಾಗಿದೆ. ಇವು ಸಹ ನಂತರದ ಕಾಲದವು ಇದಕ್ಕೆ ಇತ್ತೀಚಿಗೆ ಕಟ್ಟಿರುವ ಸೋಪಾನವಿದೆ. ಸೋಪಾನದ ಎರಡು ಬದಿಯಲ್ಲೂ ಸೋಪುಗಲ್ಲಿನಿಂದ ಕೆತ್ತಿರುವ ಆನೆಗಳ ಶಿಲ್ಪಗಳನ್ನು ಕೂರಿಸಲಾಗಿದೆ. ಇವು ಹೊಯ್ಸಳರ ಕಾಲದವು. ಮೂಲ ದೇವಾಲಯದ ವಾಸ್ತುವಿನ ಮುಂಭಾಗದಲ್ಲಿದ್ದ ಅಂದರೆ ಮುಖ್ಯ ದ್ವಾರದ ಬದಿಗಳಲ್ಲಿ ಇದ್ದಂತಹ ಶಿಲ್ಪಗಳನ್ನು ಇಲ್ಲಿಗೆ ತಂದು ಹಾಕಲಾಗಿದೆ. ಈ ಗಜಗಳ ಸೊಂಡಿಲ ಪಕ್ಕದಲ್ಲಿ ಇಬ್ಬರು ಕುದುರೆ ಸವಾರರು ಓಡುತ್ತಿರುವಂತೆ ಕಡೆಯಲಾಗಿದೆ. ಇಲ್ಲಿ ಸುಮಾರು 15 ಅಡಿ ಎತ್ತರದ ಹದಿನೆಂಟು ಮುಖದ ರಚನೆಯುಳ್ಳ ಕಂಬಗಳಿಂದ ರಚಿತವಾಗಿರುವ ಪಾತಾಳಂಕಣವಿದೆ. ಇದನ್ನು ಹದಿನಾರನೇ ಶತಮಾನದಲ್ಲಿ ಕಟ್ಟಲಾಗಿದೆ. ಇದರ ಮಧ್ಯದಲ್ಲಿ ಸಣ್ಣದಾದ  ಲೋಹದ ಮೇಲ್ಪೈಯನ್ನು ಹೊಂದಿರುವ ದೀಪ ಸ್ತಂಭವಿದೆ. ಬಲಭಾಗದಲ್ಲಿ ಸುಮಾರು 25 ಅಡಿ ಎತ್ತರವಿರುವ ಗರುಡ ಗಂಬವಿದೆ. ಇದರ ಸುತ್ತಲೂ ಭಗ್ನವಾದ ಸಣ್ಣದಾದ ಸೋಪುಗಲ್ಲಿನ ತುಂಡುಗಳನ್ನು ಹಾಕಿ ಪಿರಮಿಡ್ಡಿನಾಕಾರದಲ್ಲಿ ಪೀಠವನ್ನು ರಚಿಸಲಾಗಿದೆ. ಅದರ ಮೂಲ ಗರುಡಗಂಬಕ್ಕೆ ಪೀಠವಿರುವುದಿಲ್ಲ.

ಸಾಮಾನ್ಯವಾಗಿ ದೇವಾಲಯಕ್ಕೆ ಮುಖ್ಯದ್ವಾರಗಳನ್ನು ನಿರ್ಮಿಸುವ ಪದ್ಧತಿ ಹೆಚ್ಚಿನ ಸಂಖ್ಯೆಯಲ್ಲಿ ವಿಜಯನಗರ ಕಾಲದಲ್ಲಿ ಕಾಣಬಹುದು. ಆದರೆ ಈ ದೇವಾಲಯದಲ್ಲಿ ಹೊಯ್ಸಳರ ಕಾಲದಲ್ಲಿಯೇ ಮುಖ್ಯ ದ್ವಾರವನ್ನು ಕಟ್ಟಲಾಗಿದೆ. ಹೊಯ್ಸಳರ ಕಾಲದಲ್ಲಿಯೆ ನಿರ್ಮಾಣವಾಗಿರುವುದು ಇದರ ವಿಶೇಷತೆಯಾಗಿದೆ. ಇದರಲ್ಲಿ ಯಾವುದೇ ಶಿಲ್ಪಗಳನ್ನು ಕೆತ್ತಲಾಗಿಲ್ಲ. ಇದಕ್ಕೆ ಹೊಂದಿಕೊಂಡಂತೆ ದೇವಾಲಯದ ಸುತ್ತಲೂ ಇತ್ತೀಚೆಗೆ ಕಟ್ಟಿರುವ ಪ್ರಾಕಾರವಿದೆ. ಈ ದ್ವಾರವನ್ನು ಉಪ್ಪರಿಗೆ ಎಂದು ಸಹ ಕರೆಯುತ್ತಾರೆ. ಇದನ್ನು ಬೆಳವಾಡಿಯ ವೀರನಾರಾಯಣ ದೇವಾಲಯದಲ್ಲಿಯೂ ಸಹ ಕಾಣಬಹುದು. ದೇವಾಲಯದ ಅಧಿಷ್ಠಾನವು ಆಲಂಕಾರಿಕದಂತಹ ಶಿಲ್ಪಗಳನು ಹೊಂದಿದೆ. ಇದು ಬೇಲೂರು, ಹಳೇಬೀಡು ಮತ್ತು ಸೋಮನಾಥಪುರ ದೇವಾಲಯಗಳ ಅಧಿಷ್ಠಾನದ ರೀತಿಯಲ್ಲಿಯೇ ಕಡೆಯಲಾಗಿದೆ. ಇಲ್ಲಿನ

ಪ್ರತಿಯೊಂದು ಶಿಲ್ಪ ಪಟ್ಟಿಕೆಯು ಸುಮಾರು ಅರ್ಧ ಅಡಿ ಎತ್ತರವಿದ್ದು ದೇವಾಲಯದ ಸುತ್ತಲೂ ಕಂಡುಬರುತ್ತದೆ. ಕೆಳ ಸಾಲಿನಲ್ಲಿ ಗಜಗಳನ್ನು ಕಡೆಯಲಾಗಿದೆ. ಇವುಗಳನ್ನು ದೇವಾಲಯದ ಭಾವ ವಾಹಕಗಳಂತೆ ಸಾಂಕೇತಿಕವಾಗಿ ಬಳಸಲಾಗಿದೆ. ಇವುಗಳನ್ನು ಒಂದೇ ಸಾಲಿನಲ್ಲಿ ಒಂದರ ಹಿಂದೆ ಮತ್ತೊಂದರಂತೆ ಸಾಗುತ್ತಿರುವಂತೆ ಬಿಗಿಯಾದ ಸಂಯೋಜನೆಯಲ್ಲಿ ಸಾಲಾಗಿ ಕಡೆಯಲಾಗಿದೆ. ಪ್ರತಿಯೊಂದು ಆನೆಯು ಮುಂಚಲನಾ ಭಂಗಿಯಲ್ಲಿದೆ. ಅಲ್ಲಲ್ಲಿ ಒಂದಕ್ಕೊಂದು ನಿಲ್ಲಲ್ಲು ಸ್ಥಳಾವಕಾಶವೇ ಇಲ್ಲದಂತೆ ತುಂಬಾ ಹತ್ತಿರ ಹತ್ತಿರವಾಗಿ ಒಂದರ ಪಕ್ಕದಲ್ಲಿ ಮತ್ತೊಂದು ಇರುವಂತೆ ಕೆತ್ತಿದ್ದಾರೆ. ಇವುಗಳಿಗೆ ಅಲಂಕಾರವನ್ನು ಮಾಡಿರುವಂತೆ ತೋರಿಸಲಾಗಿದೆ. ಬೆನ್ನ ಮೇಲೆ ಅಲಂಕಾರಿಕ ಬಟ್ಟೆಗಳನ್ನು ಹಾಕಲಾಗಿದೆ. ಇದಕ್ಕೆ ಇಳಿ ಬಿಟ್ಟಿರುವ ಹೂ ಗುಚ್ಚಗಳಿದ್ದು ಕೊರಳಲ್ಲಿ ಗಂಟೆಗಳ ಮಾಲೆಯನ್ನು ಹಾಕಲಾಗಿದೆ. ಇಲ್ಲಿ ಅಲಂಕರಣದ ಜೊತೆಗೆ ಪೋಷಾಕುಗಳನ್ನು ಹಾಕಿದ್ದಾರೆ. ಇದು ಯುದ್ಧದ ಸಮಯದಲ್ಲಿ ರಕ್ಷಣೆ ಒದಗಿಸಲು ಹಾಕಿದ ಯುದ್ಧ ಪೋಷಾಕಿನ ರೀತಿ ಕಂಡುಬಂದರು ಸಹ ಹಲವಾರು ಕೆತ್ತನೆಗಳಿಂದ ಅಲಂಕಾರಿಕವಾಗಿರುತ್ತದೆ. ಆದರೆ ಎಲ್ಲಾ ಆನೆಗಳಲ್ಲೂ ಪೋಷಾಕುಗಳು ಇರುವುದಿಲ್ಲ.

ಎರಡನೆ ಸಾಲು ಅಶ್ವಗಳ ಸಾಲು ಇದು ಸಹ ಗಜಗಳ ಸಾಲಿನಂತೆಯೇ ವೈವಿಧ್ಯಮಯ ಲಕ್ಷಣಗಳನ್ನು ಹೊಂದಿದೆ. ಇವುಗಳು ಒಂದರ ಹಿಂದೆ ಮತ್ತೊಂದು ಅದರ ಹಿಂದೆ ಮಗದೊಂದು ಮುನ್ನುಗ್ಗುತ್ತಿರುವ ರೀತಿಯಲ್ಲಿಯೂ ಹಾಗೂ ವಿರುದ್ಧ ದಿಕ್ಕಿನಲ್ಲಿಯೂ ಚಲಿಸುವಂತೆ ಕೆತ್ತಲಾಗಿದೆ. ಇವುಗಳು ಮುಂದಿನ ಎರಡು ಕಾಲುಗಳನ್ನು ಮೇಲಕ್ಕೆತ್ತಿ ಜಿಗಿದು ಓಡುತ್ತಿರುವಂತೆಯೂ ಕಡೆಯಲಾಗಿದೆ. ಯುದ್ಧಕ್ಕೆ ಹೊರಟಿರುವ ದೃಶ್ಯ ಹಾಗೂ ಯೋಧರು ಮತ್ತು ಸವಾರರನ್ನು ಸಹ ಕರೆಯಲಾಗಿದೆ. ಗಜಗಳಿಗೆ ಹಾಕಿರುವ ಯುದ್ಧ ಪೋಷಾಕುಗಳನ್ನು ಇಲ್ಲಿಯೂ ಹಾಕಲಾಗಿದ್ದು ಇವು ಯುದ್ಧದ ಸಮಯದಲ್ಲಿ ಕುದುರೆಗಳ ರಕ್ಷಣೆಗೆಂದು ಹಾಕಲಾಗಿದೆ. ಇವುಗಳನ್ನು ಸಹ ಸೂಕ್ಷ್ಮ ಕೆತ್ತನೆ ಕುಸುರಿಯಿಂದ ಅಲಂಕರಿಸಲಾಗಿದೆ. ಅಶ್ವಗಳ ಮಧ್ಯದಲ್ಲಿ ಸೈನಿಕರು ಗುರಾಣಿ ಮತ್ತು ಭರ್ಜಿಗಳನ್ನು ಹಿಡಿದು ಸಾಗುತ್ತಿರುವ ಕೆತ್ತನೆಗಳಿವೆ.

ಮೂರನೆಯ ಸಾಲಿನಲ್ಲಿ ಲತಾ ಪಟ್ಟಿಕೆಯನ್ನು ಕೆತ್ತಲಾಗಿದೆ. ಈ ಸಾಲಿನ ಪ್ರತಿಯೊಂದು ಮೂಲೆಯಲ್ಲೂ ಕೀರ್ತಿಮುಖದ ರಚನೆ ಇದೆ. ಈ ರೀತಿಯ ಆಲಂಕಾರಿಕ ಸುರುಳಿಯಾಕಾರದ ಹೂಬಳ್ಳಿಗಳ ಮಧ್ಯದಲ್ಲಿ ಹಂಸ ಮಕರ, ಕೋತಿಗಳು ಹಾಗೂ ಇನ್ನಿತರ ಶಿಲ್ಪಗಳನ್ನು ಕೆತ್ತಲಾಗಿದೆ. ಅಲ್ಲಲ್ಲಿ ಹಣ್ಣು ಕಾಯಿಗಳನ್ನು ತಿನ್ನುತಿರುವ ಪಕ್ಷಿಗಳನ್ನು ವಿವಿಧ ಭಂಗಿಯಲ್ಲಿರುವಂತೆ ತೋರಿಸಲಾಗಿದೆ.

ನಾಲ್ಕನೇ ಸಾಲಿನಲ್ಲಿ ಕಥಾನಕ ಶಿಲ್ಪಗಳನ್ನು ಕಡೆಯಲಾಗಿದೆ. ಇಲ್ಲಿ ಭಾಗವತ ಕಥೆಯನ್ನು ಹೇಳುವುದಾಗಿದೆ. ಕಥಾನಕ ವಸ್ತುಗಳನ್ನು ದೃಶ್ಯ ರೂಪದಲ್ಲಿ ಕೆತ್ತುವ ಪರಿಪಾಠ ಭಾರತೀಯ ಕಲೆಯಲ್ಲಿ ಬಹು ಪ್ರಾಚೀನ ಕಾಲದಿಂದಲೂ ಬಂದಂತಹ ಕಲೆಯಾಗಿದೆ. ಇದನ್ನು ಬೌದ್ಧ ಸೂಪ್ತಗಳಲ್ಲಿಯೂ ಕಾಣಬಹುದು. ಇದೇ ರೀತಿಯಲ್ಲಿ ಹಿಂದೂ ದೇವಾಲಯಗಳಲ್ಲಿಯೂ ಸಹ ಕಂಡು ಬಂದಿದ್ದು ಇದು ಗುಪ್ತರ ಕಾಲದಲ್ಲಿಯೇ ಪ್ರಾರಂಭವಾಯಿತು. ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ಚಾಲುಕ್ಯರ ಕಾಲದಲ್ಲಿ ಪೌರಾಣಿಕ ಕಥೆಗಳನ್ನು ದೃಶ್ಯರೂಪದಲ್ಲಿ ಕೆತ್ತಿದ್ದಾರೆ. ನಂತರದಲ್ಲಿ ಹೊಯ್ಸಳರು ಇದನ್ನೇ ಅನುಸರಿಸಿದರು. ಇಲ್ಲಿ ಭಾಗವತದ ಕಥೆಯ ನಿರೂಪಣೆಯು ಇಲ್ಲಿ ಒಂದರ ನಂತರ ಮತ್ತೊಂದರಂತೆ ಅಂದರೆ ಕೃಷ್ಣನ ಜನ್ಮದಿಂದ ಹಿಡಿದು ಕಂಸವನ್ನು ಕೊಲ್ಲುವವರೆಗೆ ಅನುಕ್ರಮವಾಗಿ ಎಲ್ಲ ಘಟನಾವಳಿಗಳನ್ನು ಕಡೆಯಲಾಗಿದೆ. ಮಧ್ಯೆ ಮಧ್ಯೆ ಹಲವಾರು ಕಥೆಗಳನ್ನು ನಿರೂಪಿಸುವ ಶಿಲ್ಪಗಳನ್ನು ಬಿಟ್ಟಿದ್ದರೂ ಕೆತ್ತಿರುವ ಶಿಲ್ಪಗಳಿಂದಲೆ ಸಂಪೂರ್ಣವಾದ ಕಥೆಯನ್ನು ತಿಳಿಯಬಹುದು.

ಉತ್ತರ ಗರ್ಭಗುಡಿಯಿಂದ ಭಾಗವತದ ಕಥೆಯು ಆರಂಭವಾಗಿದೆ. ಶಕಟಗೋಪರು ಕೃಷ್ಣನಿಗೆ ಬೆಣ್ಣೆ ಮೊಸರು ಕೊಡುವುದು ಇಲ್ಲಿ ಚಕ್ಕಡಿಯಲ್ಲಿ ಕುಳಿತ ಕೆಲವರು ಮುಂಭಾಗದಲ್ಲಿ ಹೆಗಲ ಮೇಲೆ ತಕ್ಕಡಿಯ ರೀತಿಯಲ್ಲಿರುವಂತೆ ಎರಡು ಕಡೆಯು ಹಾಲು ಬೆಣ್ಣೆ ತುಂಬಿರುವ ಪಾತ್ರೆಗಳನ್ನು ಕಡೆಯಲಾಗಿದೆ. ಇಲ್ಲಿ ಮರಗಿಡಗಳನ್ನು ತೋರಿಸುತ್ತಾ ಇದು ಗೋಕುಲದ ವಾಸ್ತವಿಕತೆಯನ್ನು ತಿಳಿಸುತ್ತದೆ. ಎರಡನೆಯದು ಕೃಷ್ಣನು ಬಾಯ್ತೆರೆದು ತನ್ನ ತಾಯಿಯಾದ ಯಶೋಧರೆಗೆ ಬೆಣ್ಣೆಯನ್ನು ತಿಂದಿಲ್ಲ ಎಂದು ಬಾಯಿಯನ್ನುತೆರೆದು ತೋರಿಸುತ್ತಿರುವುದು. ಇದು ಬಾಯಿಯಲ್ಲಿ ವಿಶ್ವವನ್ನು ತೋರಿಸುವ ಕಲ್ಪನೆಯು ಆಗಿದೆ. ನಂತರದಲ್ಲಿ ಯಶೋಧಯು ಕೃಷ್ಣನನ್ನು ದಂಡಿಸುವುದು, ಇಲ್ಲಿ ಕೃಷ್ಣನ ಬಾಲಚೇಷ್ಟೆಯಿಂದ ಕೋಪಗೊಂಡು ಬಾಲಕೃಷ್ಣನನ್ನು ದಂಡಿಸುತ್ತಿರುವುದು, ಕೈಯಲ್ಲಿ ಉದ್ದನೆಯ ಖಡ್ಗ ಮತ್ತು ಡಾಲುಗಳನ್ನು ಹಿಡಿದು ಕುಂತಿದ್ದರೆ ಬಹುಶಃ ಇದು ಕಂಸನು ದೇವಕಿಯ ಮಕ್ಕಳನ್ನು ಕೊಲ್ಲಿಸುವ ದೃಷ್ಠಿಯಿಂದ ಅವರನ್ನು ಹುಡುಕಿಸುವ ತನ್ನ ಸೈನಿಕರನ್ನು ಕಳುಹಿಸಿರ ಬಹುದಾದಂತಹ ಶಿಲ್ಪ, ಗೋಪುರ ಇಂದ್ರ ಮತ್ತು ಧಿಕ್ಪಾಲಕರೊಡನೆ ಯುದ್ಧ ಮಾಡುತ್ತಿರುವುದು ಇದರ ಮುಂದುವರೆದ ಭಾಗವಾಗಿಯೇ ಗೋಪಾಲಕರು ದೇವತೆಗಳೊಡನೆ ಹೋರಾಡುವ ದೃಶ್ಯವಿದೆ, ಇಲ್ಲಿ ಇಂದ್ರನನ್ನು ತೋರಿಸಲಾಗಿದೆ. ಇವನ ಹಿಂದೆ ಅಷ್ಟದಿಕ್ಪಾಲಕರು ಒಬ್ಬರ ಹಿಂದೆ ಮತ್ತೊಬ್ಬರಂತೆ ನಿಂತಿದ್ದಾರೆ. ಇವರ ವಿರುದ್ಧ ದಿಕ್ಕಿನಲ್ಲಿ ಬಾಲಕೃಷ್ಣ ಮತ್ತು ಗೋಪಾಲಕರನ್ನು ಕಡೆಯಲಾಗಿದೆ. ನಂತರದಲ್ಲಿ ಕೃಷ್ಣನ ಬಾಲ್ಯದಲ್ಲಿ ನಡೆದ ಘಟನೆಗಳನ್ನು ಆಧರಿಸಿದ ದೃಶ್ಯಗಳನ್ನು ಕಡೆಯಲಾಗಿದೆ. ಇವುಗಳಲ್ಲಿ ಬಾಲಕೃಷ್ಣನಿಗೆ ರಾಜನಂತೆ ಅಲಂಕರಿಸಲ್ಪಟ್ಟ ವ್ಯಕ್ತಿಯೊಬ್ಬ ನಮಸ್ಕರಿಸುತ್ತಿರುವುದು, ತೊಟ್ಟಿಲಿನಲ್ಲಿ

ಮಲಗಿರುವ ಕೃಷ್ಣ , ಪೂತನಿಸಂಹಾರ ಇಲ್ಲಿ ಕೃಷ್ಣನನ್ನು ತೊಟ್ಟಿಲಿನಲ್ಲಿರುವಂತೆ ಪಕ್ಕದಲ್ಲಿ ದೈತ್ಯಾಕಾರದ ರಾಕ್ಷಸಿಯು ನಿಂತಿರುವಂತೆಯೂ ನಂತರದಲ್ಲಿ ರಾಕ್ಷಸಿಯು ದೊಡ್ಡದಾದ ಆಕಾರದಲ್ಲಿ ಬಿದ್ದಿರುವುದು ಕೃಷ್ಣನು ಅವಳ ಮೇಲೆ ನಿಂತುಕೊಂಡು ಅವಳನ್ನು ಕೊಲ್ಲುವುದು ಇದು ಕೂಡ ಪೂತನಿಯು ವಿಷಪೂರಿತ ಸ್ತನಪಾನ ಮಾಡಿ ಕೃಷ್ಣನನ್ನು ಕೊಲ್ಲುಲು ಹೋಗಿ ತಾನೇ ಬಲಿಯಾದ ಘಟನೆಯನ್ನು ವಿವರಿಸುತ್ತದೆ. ಶಕಟಾಸುರಭಂಜನದ ಕತೆಯ ಶಿಲ್ಪದಲ್ಲಿ ರಾಕ್ಷಸ ಶಕಟನನ್ನು ಕೃಷ್ಣ ತನ್ನ ಕಾಲಿನಿಂದ ಮೇಲಕ್ಕೆ ಒದೆದು ಕೊಂಡಿರುವ ಕೆತ್ತನೆ ಇದೆ. ನಂತರದಲ್ಲಿ ಯವಳಾರ್ಜುನ ವೃಕ್ಷ ರಾಕ್ಷಸರ ಹರಣ. ಈ ವೃಕ್ಷ ರಾಕ್ಷಸರು ಗೋಕುಲದ ಜನರಿಗೆಲ್ಲಾ ತೊಂದರೆ ಕೊಡುತ್ತಿದ್ದರು. ಇವೆಲ್ಲವು ಬಾಲಕೃಷ್ಣನು ದುಷ್ಟಸಂಹಾರ ಮಾಡಿದನು ಎಂದು ತಿಳಿದುಬರುತ್ತದೆ.

ಕೃಷ್ಣನು ತನ್ನ ಬಾಲ್ಯದಲ್ಲಿ ತುಂಟಾಟ ಮಾಡುವುದನ್ನು ಸಹಿಸದ ತಾಯಿ ಅವನನ್ನು ಮರಕ್ಕೆ ಕಟ್ಟಿಹಾಕಿ ಹೊಡೆಯುತ್ತಿರುವ ದೃಶ್ಯಾವಳಿಯನ್ನು ಕಡೆಯಲಾಗಿದೆ. ಬೆಣ್ಣೆಯನ್ನು ಕದ್ದು ತಿನ್ನುವುದೆಂದರೆ ಈತನಿಗೆ ಬಹಳ ಇಷ್ಟವಾದ ಕಾಯಕ. ಇದರಿಂದ ಬೇಸತ್ತ ತಾಯಿ ದಂಡಿಸುತ್ತಿದ್ದಳು. ಇಂತಹ ಘಟನೆಗಳನ್ನು ಆಧರಿಸಿ ಮಜ್ಜಿಗೆ ಕಡೆಯುತ್ತಿರುವುದು, ಬೆಣ್ಣೆಯನ್ನು ತುಂಬಿಸಿ ಒಂದರ ಮೇಲೊಂದು ಇಟ್ಟಿರುವ ಮಡಕೆಗಳಿವೆ. ಇಲ್ಲಿ ಯಶೋಧ ಮತ್ತು ಗೋಪಿಯರ ದೃಶ್ಯಗಳಿವೆ. ಬೆಣ್ಣೆಯನ್ನು ತಾನು ತಿಂದು ಬೆಕ್ಕಿಗೆ ಕೊಡುತ್ತಿರುವ ದೃಶ್ಯ, ಬೆಣ್ಣೆಯನ್ನು ಕದಿಯುತ್ತಿರುವುದು, ಗೋಪಿಯರಿಗೆ ಕೀಟಲೆ ಮಾಡಿ ಅವರಿಂದ ಶಿಕ್ಷೆ ಗೊಳಪಟ್ಟ ದೃಶ್ಯಗಳಿವೆ. ನಂತರದಲ್ಲಿ ಗೋಕುಲದ ಗೋಪಾಲಕರು ಬೆಣ್ಣೆಯನ್ನು ಮಾರಲು ಎತ್ತಿನ ಗಾಡಿಗಳಲ್ಲಿ ಹೇರಿಕೊಂಡು ಹಾಗೂ ಹೆಗಲ ಮೇಲೆ ಅಡ್ಡಕೋಲುಗಳಲ್ಲಿ ನೇತುಹಾಕಿಕೊಂಡು ಹೋಗುತ್ತಿರುವ ದೃಶ್ಯ ಇಲ್ಲಿ ಮನುಷ್ಯರು ಹೊತ್ತ ಅಡ್ಡಗಳ ಮಡಕೆಗಳಿಂದ ಬೆಣ್ಣೆ ಕದಿಯುವುದು, ಬಾಲ್ಯಗೆಳತಿ ರಾಧೆಯ ಜೊತೆ ನೃತ್ಯ ಮಾಡುತ್ತಾ ಆಡುತ್ತಿರುವುದು, ಗೋಪಾಲಕರೊಡನೆ ಆಟವಾಡುತ್ತಿರುವ ದೃಶ್ಯ ಅಲ್ಲಲ್ಲಿ ಮರಗಿಡಗಳನ್ನು ಸಹ ಕಡೆದಿರುವುದು ನೈಸರ್ಗಿಕ ಸಂಪತ್ತನ್ನು ಇಲ್ಲಿ ಮೂಡಿಸಿದ್ದಾನೆ. ದಕ್ಷಿಣದಗೂಡಿನಲ್ಲಿ ಇರುವ ಶಿಲ್ಪಗಳು ಕಾಳಿಂಗಮರ್ಧನ ಇಲ್ಲಿ ನದಿಯನ್ನು ತೋರಿಸಲು ಮೀನುಗಳನ್ನು, ಆಮೆಗಳನ್ನು ಮತ್ತು ಸರ್ಪಗಳನ್ನು ನೀರಿನ ಅಲೆಗಳ ರಚನೆಯ ಸಹಿತ ಕಡೆಯಲಾಗಿದೆ. ಇಲ್ಲಿ ಕಾಳಿಂಗನ ಮೇಲೆ ನರ್ತನ ಮಾಡುವಂತೆ ತೋರಿಸಲಾಗಿದೆ. ನಂತರದಲ್ಲಿ ಹರ್ಷೋದ್ಗಾರವಾಗಿರುವ ಗೋಪಾಲಕರನ್ನು ಕಡೆಯಲಾಗಿದೆ. ಇವರು ಕಾಳಿಂಗನ ಮೇಲಿನ ಗೆಲುವನ್ನು ಆಚರಿಸುವಂತಿದ್ದಾರೆ. ಇದರಿಂದ ಸಂತೋಷಗೊಂಡ ಜನರು ಬಂಡಿಗಳಲ್ಲಿ, ಹೆಗಲ ಮೇಲೆ ಹಾಲು, ಮೊಸರು, ಬೆಣ್ಣೆಗಳನ್ನು ಹೊತ್ತುಕೊಂಡು ಬರುತ್ತಿರುವುದನ್ನು ಕಡೆಯಲಾಗಿದೆ. ನಂತರದಲ್ಲಿ ಗೋವರ್ಧನಗಿರಿ ಧಾರಣದ ದೃಶ್ಯವಿದೆ. ಇಲ್ಲಿ ಇಂದ್ರನಿಗೆ

ಮಾಡುವ ಪೂಜೆಯನ್ನು ವಾಸುದೇವನಿಗೆ ಮಾಡಲು ಆರಂಭಿಸಿದಾಗ ಇಂದ್ರನು ಕೋಪಗೊಂಡು ಧಾರಾಕಾರವಾಗಿ ಮಳೆಯನ್ನು ಸುರಿಸಿದನು. ಆಗ ಕೃಷ್ಣನು ಊರಿನ ಜನರು ಮತ್ತು ಗೋವುಗಳನ್ನು ರಕ್ಷಿಸಲು ಬೆಟ್ಟವನ್ನು ಕಿರುಬೆರಳಿನಿಂದ ಮೇಲಕ್ಕೆ ಎತ್ತಿ ಇವರಿಗೆ ರಕ್ಷಣೆಕೊಟ್ಟ ಕಥಾ ಪ್ರಸಂಗವನ್ನು ನಿರೂಪಿಸಿರುವುದನ್ನು ಕಾಣಬಹುದು. ಇಲ್ಲಿ ಗೋವುಗಳನ್ನು ಮತ್ತು ಜನರನ್ನು ಕಡೆಯಲಾಗಿದೆ. ನಂತರದಲ್ಲಿ ಇಂದ್ರನು ತಪ್ಪನ್ನು ಒಪ್ಪಿಕೊಂಡು ಶರಣಾಗುವ ಶಿಲ್ಪವನ್ನು ಕೆತ್ತಲಾಗಿದೆ.

ಪಶ್ಚಿಮ ಗೂಡಿನಲ್ಲಿರುವ ಪಟ್ಟಿಕೆಗಳ ಶಿಲ್ಪಗಳು ಕೃಷ್ಣನು ಕೊಳಲನ್ನು ನುಡಿಸುತ್ತಿರುವುದು, ಅಕ್ಕ ಪಕ್ಕದಲ್ಲಿ ಗೋವುಗಳು, ಗೋಪಿಕಾ ಸ್ತ್ರೀಯರು, ಗೋಪಾಲಕರು ಮತ್ತು ದೇವತೆಗಳನ್ನು ಕಡೆಯಲಾಗಿದೆ. ಇದರಲ್ಲಿ ಗೋಪಿಯರು ನೃತ್ಯವನ್ನು ಮಾಡುತ್ತಿರುವುದು ಹಾಗೂ ಕೃಷ್ಣನು ಗೋಪಿಯರಿಗೆ ತತ್ವೋಪದೇಶವನ್ನು ಮಾಡುತ್ತಿರುವ ದೃಶ್ಯಗಳಿವೆ. ಗೋಪಿಯರೊಡನೆ ಜಲಕ್ರೀಡೆ, ಇಬ್ಬರು ಗೋಪಿಯರ ನಡುವೆ ಕೃಷ್ಣಗೋಪಿಯರ ವಸ್ತ್ರಾಪಹರಣ ಇದರಲ್ಲಿ ಗೋಪಿಯರನ್ನು ಒಂದೇ ಕಡೆ ನಿಂತಿರುವಂತೆ ಕಡೆಯಲಾಗಿದೆ. ಇವರುಗಳು ನಗ್ನವಾಗಿರುವಂತೆ ಕಡೆಯಲಾಗಿದೆ. ಮತ್ತೊಂದು ಕಡೆಯಲ್ಲಿ ಅವರ ವಸ್ತುಗಳನ್ನು ಕದ್ದು ಹಿಡಿದುಕೊಂಡು ನಿಂತಿರುವಂತೆ ಕೆತ್ತಲಾಗಿದೆ. ನಂತರದಲ್ಲಿ ಧೇನುಕಾಸುರಭಂಜನ ಕಥೆ ನಿರೂಪಣೆಯ ಶಿಲ್ಪವಿದೆ. ಧೇನುಕನು ಗೂಳಿಯೊಡನೆ ಸೆಣಸುತ್ತಿರುವ ದೃಶ್ಯವಿದ್ದು ಇದರ ಪಕ್ಕದಲ್ಲಿ ಬಲರಾಮ ಮತ್ತು ಗೋಪಾಲಕರು ಸಹಾಯ ಮಾಡಲು ಸನ್ನದ್ಧರಾಗಿ ನಿಂತಿದ್ದಾರೆ. ನಂತರದಲ್ಲಿ ಗರ್ಧಬಾಸುರದ ನಿರೂಪಣೆಯಿದೆ. ಕೆತ್ತನೆಯ ರೂಪದಲ್ಲಿ ರಾಕ್ಷಸನನ್ನು ಸೋಲಿಸುತ್ತಿರುವ ದೃಶ್ಯ. ನಂತರದಲ್ಲಿ ವಿಜಯೋತ್ಸವದ ಆಚರಣೆಯಲ್ಲಿ ಇಡೀ ಗ್ರಾಮದ ಜನರು ಗೋವುಗಳು ಸಾಲಾಗಿ ಮೆರವಣಿಗೆಯಲ್ಲಿ ಹೊರಟಿರುವಂತೆ ಕಡೆಯಲಾಗಿದೆ. ನಂತರದಲ್ಲಿ ಕೃಷ್ಣನು ಮತ್ತೊಬ್ಬ ರಾಕ್ಷಸನನ್ನು ಕೊಲ್ಲುತ್ತಿರುವುದು, ನಂತರದಲ್ಲಿ ಅಣ್ಣ ಬಲರಾಮನೊಂದಿಗೆ ಮೆರವಣಿಗೆಯಲ್ಲಿ ಹೊರಟಿರುವ ದೃಶ್ಯಗಳಿವೆ.

ಸಾಮಾಜಿಕ ದೃಶ್ಯಗಳಲ್ಲಿ ಇರುವಂತೆ ಯಶೋಧ ಕೃಷ್ಣ ಮರಕ್ಕೆ ಕಟ್ಟಿರುವ ತೊಟ್ಟಿಲು ಯಶೋಧ, ಕೃಷ್ಣ, ಬಲರಾಮನು ಕರುವಿನೊಂದಿಗೆ ಆಡುವುದು, ಹಾಲು ಕರೆಯುವುದು, ಬೆಣ್ಣೆ ಕದಿಯುವುದು ಇತ್ಯಾದಿ ನಿರೂಪಣೆಗಳಿವೆ. ನಂತರದಲ್ಲಿ ಆಕ್ರೂರನು ಕೃಷ್ಣ, ಬಲರಾಮರೊಡನೆ ಬಂಡಿಯಲ್ಲಿ ಮಥರೆಗೆ ಹೋಗುವುದು ಇಲ್ಲಿ ಅಕ್ರೂರನ ಹಿಂದೆ ಸಾಲುಗಟ್ಟಿ ಜನರು ಹೊರಟಿರುವುದು, ಗೋಪರು ಅವರೊಡನೆ ಬೆಣ್ಣೆ ಹೊತ್ತುಕೊಂಡು ಹೋಗುವುದು ಅಕ್ರೂರನ ಆಶಯದ ಮೇರೆಗೆ ಯಮುನೆಯಲ್ಲಿ ಕೃಷ್ಣನು ಅಕ್ರೂರನಿಗೆ ವಿಶ್ವರೂಪವನ್ನು ತೋರಿಸುವುದು

ಮಂಟಪದಲ್ಲಿ ಆಯುಧ ಪೂಜೆ, ಕೃಷ್ಣ, ಕುಬ್ಜೆ, ಕೃಷ್ಣನು ರಾಕ್ಷಸರನ್ನು ಸಂಹರಿಸುವುದು ಇಲ್ಲಿ ದ್ವಾರಕೆಗೆ ಹೊರಟ ಇವರಿಗೆ ಕೃಷ್ಣ ಮತ್ತು ಬಲರಾಮರನ್ನು ಕೊಲ್ಲಲು ಕಂಸ ಹೂಡಿದ ಹಲವಾರು ತಂತ್ರಗಳ ದರ್ಶನಗಳನ್ನು ಇಲ್ಲಿ ನಿರೂಪಿಸಲಾಗಿದೆ. ಕೃಷ್ಣನ ಆಗಮನವನ್ನು ಕಂಸನಿಗೆ ತಿಳಿಸುವುದು. ಮಲ್ಲರಿಗೆ ಕೃಷ್ಣನನ್ನು ಕೊಲ್ಲಲು ಕಂಸನು ಆಜ್ಞೆ ಮಾಡುವುದು. ಇಲ್ಲಿ ಕಂಸನು ಕೃಷ್ಣ ಬಲರಾಮರನ್ನು ಕೊಲ್ಲಲು ಕುಸ್ತಿ ಮಲ್ಲರಾದ ಚಾಣೂರು ಮಷ್ಕರರನ್ನು ಕಳುಹಿಸುತ್ತಾನೆ. ಇದರಲ್ಲಿ ಮಲ್ಲರು ಸೋತು ಹೋಗುತ್ತಾರೆ. ನಂತರದಲ್ಲಿ ಆನೆಯನ್ನು ಸಂಹರಿಸುವುದು, ಮಲ್ಲಯುದ್ಧ, ಕಂಸನ ಆಶ್ಚರ್ಯ, ಕಂಸನು ಮಲ್ಲರು ಸೋತ ವಿಷಯ ತಿಳಿದು ಆಶ್ಚರ್ಯ ಪಡುತ್ತಾನೆ. ಇಲ್ಲಿ ಕಂಸನನ್ನು ಎತ್ತರವಾದ ಸಿಂಹಾಸನದ ಮೇಲೆ ಚಿತ್ರಿಸಲಾಗಿದೆ. ನಂತರದಲ್ಲಿ ಕೃಷ್ಣ ಮತ್ತು ಬಲರಾಮರು ಜೊತೆಗೂಡಿ ಕಂಸನನ್ನು ಕೊಲ್ಲುತ್ತಾರೆ. ಈ ರೀತಿಯಲ್ಲಿ ಕೃಷ್ಣನ ಜೀವನ ಮತ್ತು ಸಾಹಸ ಕಥೆಗಳನ್ನು ತೋರಿಸುವ ಭಾಗವತ ಕಥೆಯ ನಿರೂಪಣೆಯನ್ನು ಶಿಲ್ಪ ಮಾದರಿಯಲ್ಲಿ ಶಿಲ್ಪಿಯು ಕಂಡರಿಸಿದ್ದಾನೆ. ಈ ಕಥಾನಕ ಶಿಲ್ಪಗಳಲ್ಲಿ ವಿಭಿನ್ನ ರೀತಿಯ ಶಿಲ್ಪ ಕೃತಿಗಳ ಕೆತ್ತನೆ ಕಂಡು ಬಂದರೂ ಇಲ್ಲಿ ಕಲಾವಿದರು ಆಕೃತಿಗಳನ್ನು ಪಟ್ಟಿಕೆಯ ಎತ್ತರಕ್ಕೆ ಅನುಗುಣವಾಗಿ ರೂಪಿಸಿ ಕೆತ್ತಿದ್ದಾನೆ. ಏನೇ ಹೊಸತನ್ನು ತೋರಿಸ ಬೇಕಾದರೆ ಶಿಲ್ಪಗಳನ್ನು ಅಡ್ಡಲಾಗಿ ಅಂದರೆ ಪಟ್ಟಿಕೆಯ ಅಗಲಕ್ಕೆ ಪೂರಕವಾಗಿ ಚಿತ್ರಿಸುತ್ತಾ ಹೋಗುತ್ತಾನೆ. ಇಲ್ಲಿಯ ಮತ್ತೊಂದು ವಿಶೇಷವನ್ನು ಗಮನಿಸಬಹುದು. ಇಲ್ಲಿ ಕೆತ್ತಲ್ಪಟ್ಟಿರುವ ಹಲವು ಶಿಲ್ಪಗಳು ಮುಖ್ಯ ಭಿತ್ತಿಗೆ ಬಂದಾಗ ದೊಡ್ಡ ಶಿಲ್ಪಗಳಾಗಿ ರೂಪಗಳನ್ನು ಪಡೆದಿದೆ. ಹೊಯ್ಸಳ ಕಲಾವಿದನು ಇಂತಹ ಚಿಕ್ಕ ಚಿಕ್ಕ ಸ್ಥಳಗಳನ್ನು ಬಿಡದೆ ಅವುಗಳನ್ನು ಅರ್ಥ ಪೂರ್ಣವಾಗಿ ಬಳಸಿಕೊಂಡಿರುವುದಕ್ಕೆ ಮೇಲೆ ತಿಳಿಸಿದ ಪಟ್ಟಿಕೆಗಳ ಶಿಲ್ಪಗಳೇ ಸಾಕ್ಷಿಯಾಗಿವೆ.

ಐದನೆಯ ಸಾಲಿನಲ್ಲಿ ಮಕರಗಳ ಪಟ್ಟಿಕೆಯಿದೆ. ಇಲ್ಲಿ ಮಕರಗಳನ್ನು ಸಹ ಅದ್ಭುತವಾಗಿ ಕಡೆಯಲಾಗಿದೆ. ದಪ್ಪನಾದ ದೇಹ ಮೇಲಕ್ಕೆ ಮುಖಮಾಡಿ ತೆರೆದ ಬಾಯಿಗಳಿಂದ ತಲೆ ಹಿಂಬಾಗಕ್ಕೆ ಚಾಚಿಕೊಂಡಿರುವ ಬಳ್ಳಿ ಸುರುಳಿಗಳು ಬಾಲದಿಂದ ಹೊರ ಹೊಮ್ಮುವ ಸುರುಳಿಗಳ ಬಳ್ಳಿಗಳು ಈ ಲಕ್ಷಣಗಳನ್ನು ಹೊಂದಿರುವ ಮಕರಗಳು ಒಂದರ ಹಿಂದೆ ಮತ್ತೊಂದರಂತೆ ಮುಮ್ಮುಖವಾಗಿ ಚಲಿಸುವಂತೆ ಕೆತ್ತಲಾಗಿದೆ.

ಆರನೇ ಸಾಲು ಹಾಗೂ ಕೊನೆಯ ಪಟ್ಟಿಕೆಯಾಗಿರುವುದರಿಂದ ಹಂಸಗಳನ್ನು ಕಡೆಯಲಾಗಿದೆ. ಹಂಸಗಳು ಒಂದರ ಹಿಂದೆ ಮತ್ತೊಂದರಂತೆ ಚಲಿಸುವಂತೆ ಮಕರಗಳ ಕೆತ್ತನೆಯಂತೆಯೇ ಇವುಗಳನ್ನು ಅಲಂಕಾರಿಕವಾಗಿ ಕೆತ್ತಿದ್ದಾರೆ. ಹಂಸದ ದೇಹಭಾಗವು ನೈಜವಾಗಿದ್ದು ಅದರ ಗರಿಗಳನ್ನು ಮಕರದ ಬಾಲದ ಹಾಗೆ ನವಿಲಿನ ಗರಿಗಳ ರೀತಿಯಲ್ಲಿ

ಕೆತ್ತಿದ್ದಾರೆ. ಅಲ್ಲಲ್ಲಿ ಸಣ್ಣದಾದ ಹಂಸ ಮರಿಗಳನ್ನು ಕಡೆಯಲಾಗಿದೆ. ಮೂಲೆ ಭಾಗದಲ್ಲಿ ಕೆತ್ತಿರುವ ಹಂಸಗಳನ್ನು ಎರಡು ಹಂಸಗಳು ಎದುರಾಗಿ ಇರುವಂತೆ ಕೆತ್ತಿದ್ದಾರೆ. ಈ ಮೇಲಿನ ಪಟ್ಟಿಕೆಗಳ ಶಿಲ್ಪಗಳನ್ನು ಗಮನಿಸಿದಾಗ ನಿಜಕ್ಕೂ ಇಷ್ಟೊಂದು ನೈಜವಾಗಿ ಚಿತ್ರಿಸಿರುವ ಶಿಲ್ಪಿಗಳೇ ಧನ್ಯರು. ಇವರು ಜೀವಕಳೆಯನ್ನು ಕೊಟ್ಟು ಸೂಕ್ಷ್ಮಾತಿ ಸೂಕ್ಷ್ಮವಾಗಿ ಕಡೆಯಲಾಗಿದೆ.

ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ಹಲವು ದೇವಾಲಯಗಳ ಹೊರ ಭಿತ್ತಿಯಲ್ಲಿ ಶಿಲ್ಪಗಳನ್ನು ಶಿಲ್ಪಿಗಳು ಕಂಡರಿಸಿದ್ದಾರೆ. ದೇವಾಲಯದ ಹೊರ ಭಿತ್ತಿಯು ಸ್ವಲ್ಪ ಭಾಗವನ್ನು ಬಿಡದೆ ಅಲ್ಲಲ್ಲಿ ಅಲಂಕಾರಿಕ ವಸ್ತುಗಳ ಜೊತೆಗೆ ಒಂದರ ಹಿಂದೆ ಮತ್ತೊಂದರಂತೆ ಶಿಲ್ಪಗಳನ್ನು ಕೆತ್ತಿದ್ದಾರೆ. ಇವುಗಳಿಗೆ ಸಾಕ್ಷಿಯಾಗಿ ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳೆ ಸಾಕ್ಷಿಯಾಗಿವೆ ಹಾಗೂ ಈ ದೇವಾಲಯದ ಹೊರ ಭಿತ್ತಿಯಲ್ಲಿ ಅಂದರೆ ಪಶ್ಚಿಮ ಗರ್ಭಗುಡಿಯ ಹೊರಭಾಗದ ಮೂರು ದಿಕ್ಕಿನಲ್ಲಿಯು ದೇವಕೋಷ್ಠಗಳನ್ನು ಕಡೆಯಲಾಗಿದೆ. ಇವು ಸಹ ಒಂದು ದೇವಾಲಯವು ಯಾವ ಯಾವ ಭಾಗಗಳನ್ನು ಹಾಗೂ ಲಕ್ಷಣಗಳನ್ನು ಹೊಂದಿರಬೇಕೊ ಅವುಗಳೆಲ್ಲವನ್ನು ಸಾಮಾನ್ಯವಾಗಿ ಬಿಡಿ ಶಿಲ್ಪಗಳನ್ನು ಸುಲಭವಾಗಿ ಪ್ರತಿಷ್ಠಾಪಿಸುವ ಶಿಲ್ಪಗಳಾಗಿದ್ದರೆ ಭಿತ್ತಿ ಶಿಲ್ಪಗಳು ದೇವಾಲಯದ ಅಲಂಕರಣೆಯನ್ನು ಹೆಚ್ಚಿಸಲು ಪೂರಕವಾದ ಈ ದೇವಾಲಯವು ವೈಷ್ಣವ ಧರ್ಮಕ್ಕೆ ಸೇರಿದ್ದುದಾಗಿರುವುದರಿಂದ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಷ್ಣವ ದೇವತೆಗಳನ್ನು ಕಡೆಯಲಾಗಿದೆ. ಶೈವ ಧರ್ಮಕ್ಕೆ ಸೇರಿದ ಶಿಲ್ಪಗಳು ಕೇವಲ ಬೆರಳಣಿಕೆಯಷ್ಟು ಮಾತ್ರ ಇವೆ. ಭಿತ್ತಿಯು ಹಲವು ಶಿಲ್ಪಗಳ ಕಳಗೆ ಪೀಠದ ಮೇಲೆ ಶಿಲ್ಪದ ಹೆಸರು ಮತ್ತು ಕೆಲವು ಕಡೆಯಲ್ಲಿ ಶಿಲ್ಪದ ರೂವಾರಿಯ ಹೆಸರುಗಳನ್ನು ಕೆತ್ತಲಾಗಿದೆ. ಪಶ್ಚಿಮ ಗರ್ಭಗುಡಿಯ ಹೊರ ಭಿತ್ತಿಯಲ್ಲಿ ಪಶ್ಚಿಮ, ಉತ್ತರ, ದಕ್ಷಿಣ ಭಾಗದಲ್ಲಿ ಒಂದೊಂದು ಗೂಡು ಮಂಟಪಗಳಿವೆ. ಇವುಗಳನ್ನು ಬಹಳ ಅಲಂಕರಣದಿಂದ ಕಡೆಯಲಾಗಿದೆ. ಇವು ದೇವಾಲಯದ ಇಂದು ಭಾಗವಾದರು ಒಂದು ಸಣ್ಣ ದೇವಾಲಯದಂತೆ ಬಿಡಿ ಶಿಲ್ಪಗಳನ್ನು ಇಡಲಾಗಿದೆ. ಗುಡಿಯ ಮೇಲ್ಭಾಗದಲ್ಲಿ ಸಣ್ಣ ವಿಮಾನದ ರಚನೆ ಇದೆ. ದ್ವಾರಬಂಧಗಳನ್ನು ಸಣ್ಣದಾದ ಅರೆ ಕಂಬಗಳಿಂದ ಚಿತ್ರಿಸಲಾಗಿದೆ. ದೇವಾಲಯದ ಎಡಭಾಗದಿಂದ ಪ್ರದಕ್ಷಿಣೆ ಹಾಕುವ ಮಾರ್ಗವಾಗಿ ಪ್ರಾರಂಭವಾಗುವ ಶಿಲ್ಪಗಳು ಒಂದನೇಯ ಭಾಗದ ಕಲ್ಪವೃಕ್ಷ ಕೇಶವ ಶಿಲ್ಪಗಳು ಇತ್ತೀಚೆಗೆ ಕಟ್ಟಿರುವ ಗೋಡೆಯ ಒಳಭಾಗದಲ್ಲಿ ಸೇರಿಕೊಂಡಿದೆ.

ಎರಡನೇಯ ಭಾಗದಲ್ಲಿ ಮೊದಲನೆಯದು ಬ್ರಹ್ಮನ ಶಿಲ್ಪವಿದೆ. ಇದು ಪದ್ಮಪೀಠದ ಮೇಲೆ ಸ್ಥಾನಿಕವಾಗಿ ನಿಂತಿದೆ. ಇದು ತ್ರಿಮುಖವನ್ನು ಹೊಂದಿದ್ದು ಚೂಪಾದ ಗಡ್ಡವನ್ನು

ಹೊಂದಿದೆ. ಬಲ ಮೇಲುಗೈಯಲ್ಲಿ ಸೌಟುಗಳನ್ನು ಕೆಳ ಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದಿದ್ದು ವರದ ಹಸ್ತವನ್ನು ಹೊಂದಿದೆ. ಎಡ ಮೇಲುಗೈಯಲ್ಲಿ ಪಾಷ ಮತ್ತು ಕಮಂಡಲ ಹಾಗೂ ದಂಡಗಳನ್ನು ಹಿಡಿದಿದೆ. ತಲೆಯಲ್ಲಿ ಸುಂದರವಾದ ತ್ರಿಕೋನಾಕೃತಿಯ ಕೀರಿಟ ಕಣಜ ಕುಂಡಲಗಳು, ಮಣಿಸರಗಳು, ಎಡಭಾಗದಲ್ಲಿ ಸ್ತ್ರೀ ದೇವತೆಯ ಶಿಲ್ಪವಿದೆ. ಪೀಠದ ಕೆಳಗೆ ಬ್ರೊಮ್ಮರು ಎಂದು ಕನ್ನಡದಲ್ಲಿ ಬ್ರಹ್ಮನ ಹೆಸರನ್ನು ಕೆತ್ತಲಾಗಿದೆ ಬ್ರಹ್ಮನ ನಂತರದಲ್ಲಿ ಬಹು ಬೀಜಫಲವನ್ನು ಹಿಡಿದಿರುವ ಸ್ತ್ರೀ ದೇವತೆಯ ಶಿಲ್ಪವಿದೆ. ಇದರ ಪಕ್ಕದಲ್ಲಿ ನಾರಾಯಣನ ಶಿಲ್ಪವಿದೆ. ಇದು ಸಮಭಂಗದಲ್ಲಿದ್ದು ಅಲಂಕೃತಗೊಂಡಿದೆ ನಾಲ್ಕು ಕೈಗಳನ್ನು ಹೊಂದಿರುವ ನಾರಾಯಣನು ಶಂಖ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಪೀಠದಲ್ಲಿ ಸಿಂಹದ ಮುಖವನ್ನು ಕೆತ್ತಲಾಗಿದ್ದು ನಾರಾಯಣ ಎಂಬ ಹೆಸರನ್ನು ಕೊರೆದಿದ್ದಾರೆ. ಇದರ ಬಲಭಾಗದಲ್ಲಿ ವೀರಾಸನದಲ್ಲಿ ಕುಳಿತಿರುವ ಗರುವಿನ ಶಿಲ್ಪವಿದೆ. ನಾರಾಯಣನ ವಿಷ್ಣುವಿನ ಇಪ್ಪತ್ನಾಲ್ಕು ಅವತಾರಗಳಲ್ಲಿ ಒಂದು ಎಂದು ಹೇಳಲಾಗುತ್ತದೆ. ಇದರ ಪಕ್ಕದಲ್ಲಿ ನಗ್ನವಾಗಿ ನಿಂತಿರುವ ಮೋಹಿನಿಯ ಶಿಲ್ಪವಿದೆ. ಇವಳು ವಸ್ತ್ರವನ್ನು ಧರಿಸದೆ ಕೆಲವು ಕಂದಾಭರಣಗಳನ್ನು ಧರಿಸಿದ್ದಾಳೆ. ಕಾಲಿಗೆ ಪಾದರಕ್ಷೆಯನ್ನು ಹಾಕಿದ್ದಾಳೆ. ದಪ್ಪನಾದ ದುಂಡನೆಯ ಸ್ತನಗಳನ್ನು ಸಹ ಕಡೆಯಲಾಗಿದೆ. ಕಲಾವಿದನು ಇವಳ ನಗ್ನತೆಯ ರೂಪವನ್ನು ಸಹಜವಾಗಿಯೇ ಕಡೆಯಲಾಗಿದೆ. ನಂತರದಲ್ಲಿ ದಕ್ಷಿಣಮೂರ್ತಿ ಶಿಲ್ಪವಿದೆ. ಈತನು ತಲೆಯ ಮೇಲೆ ಕುಲಾವಿ ಉದ್ದನೆಯ ನಿಲುವಂಗಿ ಮತ್ತು ಪಾದುಕೆಗಳನ್ನು ಧರಿಸಿದ್ದಾನೆ. ಬಲಗೈಯಲ್ಲಿ ದಂಡವಿದ್ದು ಎಡಗೈಯಲ್ಲಿ ಪಾತ್ರೆಯ ರೀತಿಯ ವಸ್ತುವನ್ನು ಹಿಡಿದಿದ್ದಾನೆ. ಇದು ದಕ್ಷಿಣಾ ಮೂರ್ತಿಯ ಶಿಲ್ಪಗಳಿಗಿಂತ ಸ್ವಲ್ಪ ಭಿನ್ನವಾಗಿದ್ದು ಶಿಲ್ಪಶಾಸ್ತ್ರಗಳಲ್ಲಿ ಉಲ್ಲೇಖಿಸಿರುವ ಕಾಳಾಮುಖ ಯತಿಯ ಶಿಲ್ಪದಂತೆ ಇದೆ.

ಮೂರನೇಯ ಭಾಗದಲ್ಲಿ ಡೋಲೋತ್ಸವ ಶಿಲ್ಪದಲ್ಲಿ ಕೃಷ್ಣರುಕ್ಮಿಣಿಯರು ಉಯ್ಯಾಲೆಯಲ್ಲಿ ಕುಳಿತಿರುವಂತೆ ಕಡೆಯಲಾಗಿದೆ. ಉಯ್ಯಾಲೆಯಲ್ಲಿ ಕಟ್ಟಿರುವ ಹಗ್ಗವನ್ನು ಬಹಳ ಸೂಕ್ಷ್ಮವಾಗಿ ಕಡೆಯಲಾಗಿದೆ. ಪಕ್ಕದಲ್ಲಿ ಬಾಳೆಗಿಡಗಳನ್ನು ಚಿತ್ರಿಸಿದ್ದು ಹಣ್ಣುಗಳ ಗೊನೆಯು ನೇತಾಡುವಂತೆಯೂ ಕಪಿಗಳ ಶಿಲ್ಪಗಳನ್ನು ಸಹ ಅಲ್ಲಲ್ಲಿ ಕೆತ್ತಲಾಗಿದೆ. ಈ ಚಿತ್ರಣವನ್ನು ಪದ್ಮಪೀಠದ ಮೇಲೆ ಕಡೆಯಲಾಗಿದೆ. ಇದರ ಪಕ್ಕದಲ್ಲಿ ರತಿ–ಮನ್ಮಥರನ್ನು ಕೆತ್ತಿದ್ದು ಇವರುಗಳು ಆಕರ್ಷಕ ಭಂಗಿಯಲ್ಲಿದ್ದಾರೆ. ಮನ್ಮಥನು ಎಡಗೈಯಲ್ಲಿ ಕಬ್ಬಿನ ಜಲ್ಲೆಯನ್ನು ಬಲಗೈಯಲ್ಲಿ ಬಾಣಗಳನ್ನು ಹಿಡಿದಿದ್ದಾನೆ. ರತಿಯನ್ನು ಕಂಠಿಹಾರ ಹಾಗೂ ವಸ್ತ್ರಗಳಿಂದ ಅಲಂಕರಿಸಲಾಗಿದ್ದು ಬಲಗೈಯಲ್ಲಿ ಪುಷ್ಪಗುಚ್ಛವನ್ನು ಎಡಗೈಯಲ್ಲಿ ಬಹುಬೀಜ ಫಲವನ್ನು ಹಿಡಿದಿದ್ದಾಳೆ. ಪೀಠದಲ್ಲಿ ಕಾಮರತಿ ಎಂದು ಬರೆಯಲಾಗಿದೆ. ಇದರ ಪಕ್ಕದಲ್ಲಿ ಹವಗ್ರೀವ

ಶಿಲ್ಪವಿದೆ. ಅಶ್ವಮುಖವನ್ನು ಹೊಂದಿದ್ದು ಕೈಯಲ್ಲಿ ಶಂಖ, ಚಕ್ರ, ಗದೆ, ಖಡ್ಗ, ಗುರಾಣಿ, ಮತ್ತು ಪದ್ಮವನ್ನು ಹಿಡಿದಿದೆ. ಇದರ ಪಕ್ಕದಲ್ಲಿ ಮಾಧವ–ಲಕ್ಷ್ಮೀಯ ಶಿಲ್ಪವಿದೆ. ಮಾಧವನ ಕೈಯಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಇದನ್ನು ಸಹ ಬಹಳ ಅಲಂಕಾರಿಕವಾಗಿ ಕೆತ್ತಲಾಗಿದೆ. ಲಕ್ಷ್ಮೀಯ ಶಿಲ್ಪವು ನಿಂತಭಂಗಿಯಲ್ಲಿದ್ದು ಕೈಯಲ್ಲಿ ಪುಷ್ಪಗುಚ್ಛ ಮತ್ತು ಬೀಜಪೂರ ಫಲವಿದೆ. ಇವಳನ್ನು ಆಭರಣಗಳಿಂದ ಬಹಳ ಸುಂದರವಾಗಿ ಅಲಂಕರಿಸಲಾಗಿದೆ. ಈ ಎರಡು ಶಿಲ್ಪಗಳ ಮೇಲ್ಭಾಗದಲ್ಲಿ ಸುರುಳಿಯಾಕಾರದ ಮರದ ವಿನ್ಯಾಸವಿದ್ದು ಶಿಲ್ಪಗಳಿಗೆ ಇದು ಮೆರುಗನ್ನು ಕೊಡುವಂತಿದೆ. ಇದರ ಪಕ್ಕದಲ್ಲಿ ನಾಟ್ಯಗಣಪತಿಯ ಶಿಲ್ಪವಿದೆ ನಾಟ್ಯಭಂಗಿಯಲ್ಲಿರುವ ಗಣಪತಿಯು ಎಂಟು ಕೈಗಳನ್ನು ಹೊಂದಿದ್ದು ಪಾಶ, ಅಂಕುಶ. ಕೊಡಲಿ, ಮೋದಕ, ಪಾತ್ರೆ, ಅರ್ಧದಂಥ, ಪುಷ್ಪ ಮತ್ತು ಚಕ್ರವನ್ನು ಹಿಡಿದಿದ್ದಾನೆ. ಗಣಪತಿಯ ಎರಡು ಬದಿಯಲ್ಲಿಯೂ ವಾದ್ಯಗಾರರನ್ನು ಕಡೆಯಲಾಗಿದೆ. ಕೆಳಭಾಗದಲ್ಲಿ ಗಣೇಶನ ವಾಹನವಾದ ಮೂಷಿಕನನ್ನು ಕಡೆಯಲಾಗಿದೆ. ಇದರ ಪಕ್ಕದಲ್ಲಿ ಹೂಗುಚ್ಛ ಹಾಗೂ ಪಾತ್ರೆಯನ್ನು ಹಿಡಿದಿರುವ ಸುಂದರವಾದ ಸ್ತ್ರೀಯ ಶಿಲ್ಪವಿದೆ.

ನಾಲ್ಕನೆಯ ಭಾಗದಲ್ಲಿ ಒಟ್ಟು ಐದು ಶಿಲ್ಪಗಳಿವೆ ಅಮರನಾರಾಯಣನ ಶಿಲ್ಪವಿದೆ. ಇವನನ್ನು ಪರವಾಸುದೇವ ಹಾಗೂ ಆದಿಮೂರ್ತಿ ಎಂತಲೂ ಕರೆಯುತ್ತಾರೆ. ಇವನು ಏಳು ಹೆಡೆಯ ಸರ್ಪದ ಕೆಳಗೆ, ಸರ್ಪದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಮುಂದಿನ ಎರಡು ಕೈಗಳನ್ನು ಆರಾಮವಾಗಿ ಆಯುಧಗಳಿಲ್ಲದೆ ಕೆಳಮುಖವಾಗಿ ಬಾಗಿರುವಂತೆ ಬಿಟ್ಟಿದ್ದಾನೆ. ಬಲಗೈಯನ್ನು ಸರ್ಪದ ಮೈ ಮೇಲೂ ಎಡ ಕೈಗಳನ್ನು ಮೊಣಕಾಲ ಮೇಲೆ ಇರಿಸಿದ್ದಾನೆ. ಮೇಲಿನ ಬಲ ಮತ್ತು ಎಡ ಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದಾನೆ. ಮುಂಭಾಗದಲ್ಲಿ ಗರುಡ ಮತ್ತು ಪ್ರಹ್ಲಾದರು ಅಜಿಜಲಿ ಮುದ್ರೆಯಲ್ಲಿದ್ದಾರೆ. ಶಿಲ್ಪದ ಪೀಠದ ಮೇಲೆ ಶ್ರೀ ಆದಿಮೂರ್ತಿ ದೇವರನ್ನು ನಂದಿಯ ಭಚೋಜನು ಮಾಡಿದ ಕಂಡಿದೆ ಎಂದು ಉಲ್ಲೇಖಸಿದೆ. ಇದನ್ನು ನಂದಿಯ ಬೈಚೋಜ ಎಂಬ ಶಿಲ್ಪಿಯು ಆದಿಮೂರ್ತಿ ದೇವರನ್ನು ಮಾಡಿದ ಎಂದು ತಿಳಿಯುತ್ತದೆ. ಇದರ ಎಡಭಾಗದಲ್ಲಿ ಚಾಮರ ಮತ್ತು ಕಳಸವನ್ನು ಹಿಡಿದಿರುವ ಸ್ತ್ರೀಯ ಶಿಲ್ಪವಿದೆ. ನಂತರದಲ್ಲಿ ಮಾಧವನ ಶಿಲ್ಪವಿದೆ. ಗರುಡ ಪೀಠದ ಮೇಲಿದ್ದು ಅದರ ಮೇಲೆ ಮಾಧವ ಎಂದು ಕೊರೆಯಲಾಗಿದೆ. ಕೈಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಇದರ ಪಕ್ಕದಲ್ಲಿ ಗೋವಿಂದನನ್ನು ಕೆತ್ತಲಾಗಿದೆ. ಇದನ್ನು ನಾರಾಯಣನ ಶಿಲ್ಪದ ರೀತಿಯಲ್ಲಿ ಕೆತ್ತಲಾಗಿದೆ. ಪೀಠದಲ್ಲಿ ಗೋವಿಂದ ಎಂದು ಉಲ್ಲೇಖಸಲಾಗಿದೆ. ನಂತರದಲ್ಲಿ ಯೋಗನರಸಿಂಹನ ಶಿಲ್ಪವಿದೆ. ಯೋಗಪಟ್ಟಿಕೆಯಲ್ಲಿ ಧರಿಸಿರುವ ಇವನು ಪದ್ಮ ಪೀಠದ ಮೇಲೆ ಕುಳಿತಿದ್ದಾನೆ. ಲತಾ ಪಟ್ಟಿಕೆಯ ಮೇಲೆ ನರಸಿಂಹ ಎಂದು ಕೆತ್ತಲಾಗಿದೆ. ಎರಡು ಕೈಗಳನ್ನು ಮೊಳಕಾಲುಗಳ ಮೇಲೆ

ಇಳಬಿಟ್ಟಿದ್ದಾನೆ. ಮತ್ತೆರಡು ಕೈಗಳಲ್ಲಿ ಚಕ್ರ ಮತ್ತು ಶಂಖವನ್ನು ಹಿಡಿದಿದ್ದು ಅಕ್ಕ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಕೆತ್ತಲಾಗಿದೆ. ಪಕ್ಕದಲ್ಲಿ ಪ್ರಹ್ಲಾದ ಮತ್ತು ಗರುಡನು ನಿಂತ ಭಂಗಿಯ ಕಿರು ಶಿಲ್ಪಗಳಿವೆ. ನರಸಿಂಹನ ಬಲಭಾಗದಲ್ಲಿ ಲಕ್ಷ್ಮೀಯ ಶಿಲ್ಪವಿದೆ. ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಬೀಜಫಲವಿದೆ. ಇದರ ಪಕ್ಕದಲ್ಲಿ ವಿಷ್ಣುವಿನ ಶಿಲ್ಪವಿದೆ. ಸಮಭಂಗಿಯಲ್ಲಿರುವ ವಿಷ್ಣುವು ಕೈಯಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಪೀಠದಲ್ಲಿ ವಿಷ್ಣು ಎಂದು ಕೊರೆಯಲಾಗಿದೆ. ಬಲಭಾಗದಲ್ಲಿ ಸಿಂಹಮುಖವಿದ್ದು ಅವನಿಂದ ಹೊರಟಿರುವ ಲತಾಬಳ್ಳಿಯಿಂದ ಗರುಡನನ್ನು ಕಡೆಯಲಾಗಿದೆ. ನಂತರದಲ್ಲಿ ವಿಷ್ಣುವಿನ ರೂಪವಾದ ವರದರಾಜ ಶಿಲ್ಪವಿದೆ. ಸುಖಾಸನದಲ್ಲಿ ಕುಳಿತಿರುವ ಈ ಶಿಲ್ಪವು ಕೈಯಲ್ಲಿ ಶಂಖ, ಚಕ್ರವನ್ನು ಹೊಂದಿದ್ದು ಮತ್ತೆರೆಡು ಕೈಗಳಲ್ಲಿ ಅಭಯ ಮತ್ತು ವರದ ಹಸ್ತವನ್ನು ಹೊಂದಿದೆ. ಶಿಲ್ಪದ ಕೆಳಭಾಗದಲ್ಲಿ ಗರುಡ ಮತ್ತು ಭಕ್ತನೊಬ್ಬನು ಅಂಜಲಿ ಮುದ್ರೆಯಲ್ಲಿ ಇದ್ದಾನೆ. ಇದಕ್ಕೆ ಅಲ್ಲಾಳ ಸದಮಾಳ ಎಂದು ಕರೆಯುತ್ತಾರೆ.

ಐದನೇಯ ಭಾಗದಲ್ಲಿ ಹರಿಹರನ ಶಿಲ್ಪವಿದೆ. ಇದು ಅರ್ಧಭಾಗ ವಿಷ್ಣುವನ್ನು ಮತ್ತರ್ಧ ಭಾಗ ಶಿವನನ್ನು ಉಲ್ಲೇಖಿಸುವಂತಹ ಶಿಲ್ಪವಾಗಿದೆ. ಬಲಗೈಯಲ್ಲಿ ತ್ರಿಶೂಲ, ಅಕ್ಷರಮಾಲೆಯಿದ್ದು ಎಡಗೈಯಲ್ಲಿ ಚಕ್ರ, ಶಂಖಗಳಿವೆ. ಪೀಠದಲ್ಲಿ ನಂದಿ ಮತ್ತು ಗರುಡನನ್ನು ಕಡೆಯಲಾಗಿದೆ. ಇದರ ಪಕ್ಕದಲ್ಲಿ ಮಧುಸೂಧನನ ಶಿಲ್ಪವಿದೆ. ಇದು ವಿಷ್ಣುವಿನ ಅವತಾರದ ಶಿಲ್ಪವಾಗಿದೆ. ಎಡಗೈಯಲ್ಲಿ ಗದೆ, ಪದ್ಮವಿದ್ದು ಬಲಗೈಯಲ್ಲಿ ಚಕ್ರ, ಶಂಖವನ್ನು ತೋರಿಸಲಾಗಿದೆ. ಇದು ಗರುಡ ಪೀಠದ ಮೇಲಿದೆ. ಶಿಲ್ಪದ ಪೀಠದ ಮೇಲೆ ಮಧುಸೂಧನ ಎಂದು ಕೊರೆಯಲಾಗಿದೆ. ಇವನ ಬಲಭಾಗದಲ್ಲಿ ನಿಂತ ಭಂಗಿಯಲ್ಲಿ ಲಕ್ಷ್ಮೀಯನ್ನು ಕಡೆಯಲಾಗಿದೆ. ಎರಡೂ ಕೈಗಳಲ್ಲಿ ಅಮೃತ ಕಳಶವನ್ನು ಹಿಡಿದಿದ್ದಾಳೆ. ನಂತರದಲ್ಲಿ ವಾಮನನ ಶಿಲ್ಪವಿದೆ. ಇಲ್ಲಿ ವಿಷ್ಣು, ತ್ರಿವಿಕ್ರಮನ ಅವತಾರವನ್ನು ಕಾಳಿ ಕೈಯಲ್ಲಿ ಶಂಖ, ಚಕ್ರ, ಗದೆ, ಪದ್ಮವನ್ನು ಆಕಾಶಕ್ಕೆ ಬಲಗಾಲನ್ನು ಮೇಲಕ್ಕೆತ್ತಿರುವಂತೆ ತೋರಿಸಲಾಗಿದೆ. ಈ ಶಿಲ್ಪವನ್ನು ಕೆತ್ತಿದವನು ರುವಾರ ನಂದಿಯ ಬೈಚೋಜನ ಮಾಡಿದ ತ್ರಿವಿಕ್ರಮ ಎಂದು ಕೆತ್ತಲಾಗಿದೆ. ಇದರ ಕೆಳಭಾಗದಲ್ಲಿ ಬಲಿವಾಮನ ಎಂದು ಸಹ ಉಲ್ಲೇಖವಿದೆ.

ಆರನೇಯ ಭಾಗದಲ್ಲಿ ತ್ರಿವಿಕ್ರಮನ ಶಿಲ್ಪವಿದೆ. ಜೊತೆಯಲ್ಲಿ ನಾಗ-ಕನ್ಯೆಯನ್ನು ಕಡೆಯಲಾಗಿದೆ. ಇವನು ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಗದೆ, ಪದ್ಮವಿದ್ದು, ಎಡಗೈಯಲ್ಲಿ ಚಕ್ರ, ಶಂಖಗಳನ್ನು ಹಿಡಿದಿದ್ದಾನೆ. ಎಡಭಾಗದಲ್ಲಿ ನಾಗಕನ್ಯೆಯನ್ನು ಪಕ್ಕದಲ್ಲಿ ಕಡೆಯಲಾಗಿದೆ. ನಾಗಕನ್ಯೆಯು ಮೇಲ್ಭಾಗದಲ್ಲಿ ಮನುಷ್ಯ ರೂಪ ಹೊಂದಿದ್ದು ಕೆಳಭಾಗದಲ್ಲಿ

ಸರ್ಪದ ದೇಹವನ್ನು ಹೊಂದಿದ್ದಾಳೆ. ಈಕೆಯನ್ನು ಕಂಠಹಾರಗಳಿಂದ ಅಲಂಕರಿಸಿದ್ದು ಕೈಗಳಲ್ಲಿ ಹಾರವನ್ನು ಹಿಡಿದಿದ್ದಾಳೆ. ಪೀಠದಲ್ಲಿ ಗರುಡನನ್ನು ಕಡೆಯಲಾಗಿದೆ. ಮೇಲ್ಭಾಗದಲ್ಲಿ ತ್ರಿವಿಕ್ರಮ ಎಂದು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ಭೈರವನ ಶಿಲ್ಪವಿದೆ. ಇದು ನಗ್ನವಾಗಿದ್ದು ಕೈಗಳಲ್ಲಿ ಖಡ್ಗ ಢಮರುಗ ಕರಂಡಶೂಲವನ್ನು ಮತ್ತು ಮತ್ತೊಂದರಲ್ಲಿ ರುಂಡವನ್ನು ಹಿಡಿದಿದ್ದು ಅದರಿಂದ ತೊಟ್ಟಿಕ್ಕುವ ರಕ್ತವನ್ನು ನಾಯಿವು ನೆಕ್ಕುತ್ತಿರುವಂತೆ ಇದೆ. ಇವನು ರುಂಡಮಾಲೆಯನ್ನು ಧರಿಸಿದ್ದು ತ್ರಿಭಂಗಿಯಲ್ಲಿದ್ದು ಪಾದರಕ್ಷೆಯನ್ನು ಧರಿಸಿದ್ದಾನೆ. ಇದರ ಎಡ ಪಾರ್ಶ್ವದಲ್ಲಿ ಭಕ್ತನು ಅಂಜಲಿ ಮುದ್ರೆಯಲ್ಲಿ ನಿಂತಿದ್ದಾನೆ. ಇವನ ಪಕ್ಕದಲ್ಲಿ ದುರ್ಗಿಯು ನಾಟ್ಯಭಂಗಿಯಲ್ಲಿ ಇದ್ದಾಳೆ. ಆರು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಖಡ್ಗ, ಢಮರುಗ, ಕರಂಡಶೂಲ ಮತ್ತು ಕಪಾಲ ಬಟ್ಟಲನ್ನು ಹೊಂದಿದ್ದಾಳೆ. ಅಕ್ಕ ಪಕ್ಕದಲ್ಲಿ ವಾದ್ಯಗಾರರು ಮತ್ತು ಎಡಭಾಗದ ಮೇಲ್ಭಾಗದಲ್ಲಿ ಭಕ್ತೆಯು ಅಂಜಲಿ ಮುದ್ರೆಯಲ್ಲಿದ್ದಾಳೆ. ನಂತರದಲ್ಲಿ ವಾಮನನ ಶಿಲ್ಪವಿದ್ದು ಇದು ವಿಷ್ಣುವಿನ ಅವತಾರದ ಶಿಲ್ಪವಾಗಿದೆ. ಚತುರ್ಭುಜವನ್ನು ಹೊಂದಿದ್ದು ಸಮಭಂಗಿಯಲ್ಲಿದ್ದಾನೆ. ಕೈಗಳಲ್ಲಿ ಶಂಖ, ಚಕ್ರವಿದ್ದು ಎಡಕೈಗಳಲ್ಲಿ ಪದ್ಮ ಮತ್ತು ಗದೆಯನ್ನು ಹಿಡಿದಿದ್ದಾನೆ. ನಂತರದಲ್ಲಿ ಶ್ರೀಧರನ ಶಿಲ್ಪವಿದೆ. ಇದು ಸಾಮಾನ್ಯವಾಗಿ ವಾಮನನಂತೆಯೇ ಕಡೆಯಲಾಗಿದೆ. ಇದರ ಪಕ್ಕದಲ್ಲಿ ಒಂದು ಫಲವನ್ನು ಹಿಡಿದಿರುವ ಎರಡು ವಾನರರನ್ನು ಸಹ ಕಡೆಯಲಾಗಿದೆ. ಇದು ಫಲವನ್ನು ಕಿತ್ತುಕೊಳ್ಳಲು ವಾನರರು ಜಗಳವಾಡುತ್ತಿರುವಂತೆ ಶಿಲ್ಪಿಯು ಶಿಲ್ಪಗಳನ್ನು ಕೆತ್ತಿದ್ದಾನೆ. ಇವುಗಳನ್ನು ಎರಡು ಮೂಲೆ ಭಾಗದಲ್ಲಿ ತೋರಿಸಲಾಗಿದೆ.

ಏಳನೇಯ ಭಾಗದಲ್ಲಿ ಗೋವರ್ಧನ ಗಿರಿದಾರಿಯ ಶಿಲ್ಪವಿದೆ. ಕೃಷ್ಣನು ದ್ವಿಭಂಗಿಯಲ್ಲಿ ನಿಂತಿದ್ದು ಬಲಗೈಯ ಅಂಗೈ ಮೇಲೆ ಗೋವರ್ಧನ ಗಿರಿಭಾರವನ್ನು ಎತ್ತಿಹಿಡಿದಿದ್ದಾನೆ. ಪೀಠದಲ್ಲಿ ಸಿಂಹಮುಖದಿಂದ ಅಲಂಕೃತಗೊಳಿಸಲಾಗಿದೆ. ಅಕ್ಕ ಪಕ್ಕದಲ್ಲಿ ಗೋಪಿಕೆಯರು ಗೋವುಗಳನ್ನು ಇನ್ನಿತರ ಪ್ರಾಣಿಪಕ್ಷಿಗಳಿಂದ ಅಲಂಕರಿಸಲಾಗಿದೆ. ಈ ರೀತಿಯ ಶಿಲ್ಪವು ಅಧಿಷ್ಠಾನದ ಕಥಾನಕ ಪಟ್ಟಿಕೆಯಲ್ಲಿಯೂ ಸಹ ಮೂಡಿಬಂದಿದೆ. ಈ ಶಿಲ್ಪವನ್ನು ಮಾಡಿದವನು ಬೈಚೋಜ ಎಂಬುವವನು. ನಂತರದಲ್ಲಿ ಉಗ್ರನರಸಿಂಹನ ಶಿಲ್ಪವಿದೆ. ನರಸಿಂಹನು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ಕರುಳನ್ನು ಕೊರಳಿಗೆ ಹಾಕಿಕೊಂಡಿದ್ದಾನೆ. ಕೈಯಲ್ಲಿಯು ಸ್ವಲ್ಪ ಸುತ್ತಿ ಕೊಂಡಿದ್ದಾನೆ. ಇನ್ನೆರಡು ಕೈಗಳಲ್ಲಿ ಚಕ್ರ, ಶಂಖವನ್ನು ಹಿಡಿದಿದ್ದಾನೆ. ಎಡಭಾಗದಲ್ಲಿ ಗರುಡ, ಬಲಭಾಗದಲ್ಲಿ ಲಕ್ಷ್ಮೀ ಮತ್ತು ಕೆಳಭಾಗದಲ್ಲಿ ಪ್ರಹ್ಲಾದನ ಶಿಲ್ಪವಿದೆ. ಪೀಠದ ಮೇಲೆ ಉಗ್ರನರಸಿಂಹ ಎಂದು ಕೊರೆಯಲಾಗಿದೆ. ಇದರ ಪಕ್ಕದಲ್ಲಿ ಹೃಷಿಕೇಶನ ಶಿಲ್ಪವಿದೆ. ಈ ಶಿಲ್ಪ ಅಷ್ಟೇನು ಅಲಂಕಾರಿಕವಾಗಿ ಕೆತ್ತಲಾಗಿಲ್ಲ. ಇದರ ಭಿತ್ತಿಯಲ್ಲಿ ವರಹಾದೇವನ ಶಿಲ್ಪವಿದ್ದು ಅಕ್ಕ ಪಕ್ಕದಲ್ಲಿ

ಶ್ರೀದೇವಿ ಮತ್ತು ಭೂದೇವಿಯರನ್ನು ಕಡೆಯಲಾಗಿದೆ. ಮತ್ತೊಂದು ಬದಿಯಲ್ಲಿ ನರಸಿಂಹನ ಕುಳಿತ ವಿಗ್ರಹವಿದೆ. ಕೋಷ್ಠದಲ್ಲಿ ದುರ್ಗೆಯ ಶಿಲ್ಪವಿದೆ.

ಒಂಬತ್ತನೆಯ ಭಾಗದಲ್ಲಿ ವಿಷ್ಣುವಿನ ಅವತಾರ ಶಿಲ್ಪಗಳಾದ ಪದ್ಮನಾಭ, ವೇಣುಗೋಪಾಲ, ಸೂರ್ಯ ಮತ್ತು ದಾಮೋದರರ ಶಿಲ್ಪಗಳಿವೆ. ಸೂರ್ಯನು ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದಿದ್ದು ಏಳು ಕುದುರೆಗಳಿರುವ ರಥದ ಮೇಲೆ ಸಮಭಂಗಿಯಲ್ಲಿ ನಿಂತಿದ್ದಾನೆ. ಇಕ್ಕೆಲಗಳಲ್ಲಿ ಉಷೆ ಹಾಗೂ ಪ್ರತ್ಯುಷಯರಿದ್ದಾರೆ. ಪೀಠದಲ್ಲಿ ಸೂಜನ್ಯ ಎಂದು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಈಗಾಗಲೇ ಮೇಲೆ ತಿಳಿಸಿದ ವಿಷ್ಣುವಿನ ಅವತಾರಗಳ ಶಿಲ್ಪಗಳ ವಿವರಣೆಯನ್ನು ನೀಡಲಾಗಿದೆ.

ಹತ್ತನೆಯ ಭಾಗದಲ್ಲಿ ದೇವಕೋಷ್ಠವಿದ್ದು ಇದರ ಭಿತ್ತಿಯಲ್ಲಿ ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ವಿಷ್ಣುವಿನ ತೊಡೆಯ ಮೇಲೆ ಲಕ್ಷ್ಮೀಯು ಕುಳಿತಿದ್ದಾಳೆ. ವಿಷ್ಣುವು ಎಡಗೈಯಿಂದ ಲಕ್ಷ್ಮೀಯ ಬೆನ್ನನ್ನು ಬಾಚಿ ಹಿಡಿದಿದ್ದು, ಆ ಕೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. ಲಕ್ಷ್ಮೀಯು ತನ್ನ ಬಲಗೈಯಿಂದ ವಿಷ್ಣುವಿನ ಬೆನ್ನನ್ನು ಬಳಸಿ ಹಿಡಿದಿದ್ದಾಳೆ ವಿಷ್ಣುವಿನ ಕೈಗಳಲ್ಲಿ ಪದ್ಮ, ಗದೆ, ಶಂಖವಿದೆ. ಲಕ್ಷ್ಮೀಯು ಎಡಕೈಯಲ್ಲಿ ಪದ್ಮವಿದೆ. ಗರುಡ ಪೀಠದಲ್ಲಿ ರುವಾರಿ ಮಲ್ಲಿತಮ್ಮ ಎಂದು ಹೆಸರನ್ನು ಖಂಡರಿಸಲಾಗಿದೆ. ಇದರ ಪಕ್ಕದಲ್ಲಿರುವ ಕೋಷ್ಠದಲ್ಲಿ ಹರಿಹರ ಶಿಲ್ಪವಿದೆ. ಸಮಭಂಗಿಯಲ್ಲಿರುವ ಹರಿಹರನ ಕೈಗಳಲ್ಲಿ ಅಕ್ಷಮಾಲಾ, ತ್ರಿಶೂಲ, ಚಕ್ರ ಮತ್ತು ಶಂಖವನ್ನು ಹಿಡಿದಿದೆ. ಪೀಠದಲ್ಲಿ ನಂದಿ ಮತ್ತು ಗರುಡನನ್ನು ಕಡೆಯಲಾಗಿದೆ. ನಂತರದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಪಾರ್ವತಿಯಿದ್ದು ಕೈಯಲ್ಲಿ ಅಕ್ಷಮಾಲಾ, ತ್ರಿಶೂಲ ಮತ್ತು ಮಾತುಲಿಂಗದ ಹಣ್ಣನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ಲಕ್ಷ್ಮೀಯು ಪದ್ಮಸನದಲ್ಲಿ ಕುಳಿತಿದ್ದು ಕೈಯಲ್ಲಿ ಅಕ್ಷಮಾಲಾ, ಚಕ್ರ, ಶಂಖ ಮತ್ತು ಗದೆಯನ್ನು ಹಿಡಿದಿದ್ದಾಳೆ. ನಂತರದಲ್ಲಿ ಸರಸ್ವತಿಯು ಪದ್ಮಾಸನದಲ್ಲಿ ಕುಳಿತಿದ್ದು ಕೈಯಲ್ಲಿ ಅಕ್ಷಮಾಲಾ, ದಂಡ, ಅಂಕುಶ ಹಾಗೂ ಕಳಸವನ್ನು ಹಿಡಿದಿದ್ದಾಳೆ. ಈ ಶಿಲ್ಪಗಳನ್ನೆಲ್ಲ ಬಹಳ ಅಲಂಕಾರಿಕವಾಗಿ ಅಲಂಕರಿಸಲಾಗಿದೆ.

ಹನ್ನೊಂದನೆಯ ಭಾಗದಲ್ಲಿ ಸಂಕರ್ಷಣ ಇಂದ್ರ ಮತ್ತು ಆತನ ಹೆಂಡತಿಯಾದ ಶಚಿಯು ಆನೆಯ ಮೇಲೆ ಕುಳಿತ ಶಿಲ್ಪವಿದೆ. ಇದು ಪಾರಿಜಾತ ಅಪಹರಣದ ಕಥೆಯನ್ನು ಸೂಚಿಸುವುದಾಗಿದೆ. ಇಂದ್ರನು ಬಲಗೈಯಲ್ಲಿ ವಜ್ರವನ್ನು ಹಿಡಿದಿದ್ದಾನೆ. ಹಿಂಭಾಗದಲ್ಲಿ ಸಖಿಯು ಇಂದ್ರನನ್ನು ಹಿಡಿದು ಕುಳಿತಿದ್ದಾಳೆ. ಈ ಶಿಲ್ಪದ ರೂವಾರಿ ಮಲ್ಲಿತಮ್ಮ. ನಂತರದಲ್ಲಿ ಕೃಷ್ಣ ಸತ್ಯಭಾಮೆಯರು ಗರುಡನ ಹೆಗಲ ಮೇಲೆ ಕುಳಿತ ಶಿಲ್ಪವಿದೆ. ಗರುಡನನ್ನು ದೊಡ್ಡದಾಗಿ ಚಿತ್ರಿಸಿದ್ದು ಬಲಗೈಯಲ್ಲಿ ವಜ್ರವನ್ನು ಎಡಗೈಯಲ್ಲಿ ಪಾರಿಜಾತ ವೃಕ್ಷವನ್ನು ಹಿಡಿದುಕೊಂಡಿದೆ. ಈ

ಪಾರಿಜಾತ ವೃಕ್ಷವು ಅರ್ಧ ವೃತ್ತಾಕಾರವಾಗಿ ಗರುಡನ ತಲೆಯ ಮೇಲೆ ಕೊಡೆಯಂತೆ ರಚನೆಯಾಗಿದೆ. ಕೊನೆಯಲ್ಲಿ ವಾಸುದೇವನ ಶಿಲ್ಪವಿದೆ. ಇದು ವಿಷ್ಣುವಿನ ರೂಪಗಳಲ್ಲಿ ಒಂದಾಗಿದ್ದು ಇದರಲ್ಲಿ ಹೆಚ್ಚಿನ ವಿಶೇಷತೆ ಕಂಡುಬರುವುದಿಲ್ಲ.

ಹನ್ನೆರಡನೆಯ ಭಾಗದಲ್ಲಿ ಯೋಗನಾರಾಯಣವಿದ್ದು ಇವನ ಪದ್ಮಾಸನದಲ್ಲಿ ಕುಳಿತಿದ್ದಾನೆ. ಕೈಯಲ್ಲಿ ಶಂಖ, ಚಕ್ರಗಳನ್ನು ಹಿಡಿದಿದ್ದಾನೆ. ಪಕ್ಕದಲ್ಲಿ ಲಕ್ಷ್ಮೀ ಮತ್ತು ಭೂದೇವಿಯು ಸಹ ಕುಳಿತಿದ್ದು ಇವರು ಕೈಗಳಲ್ಲಿ ಪಾಶ, ಅಂಕುಶ, ಪದ್ಮ ಹಾಗೂ ಬೀಜಸ್ತರ ಫಲವನ್ನು ಹಿಡಿದಿದ್ದಾರೆ. ಈ ಶಿಲ್ಪವು ಕೋಷ್ಠದ ಒಳಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಸರಸ್ವತಿಯ ಶಿಲ್ಪವಿದೆ. ಚತುರ್ಭುಜವನ್ನು ಹೊಂದಿರುವ ಈಕೆಯು ಬಲಗೈಯಲ್ಲಿ ಅಕ್ಷಮಾಲಾ, ಅಂಕುಶವನ್ನು ಹಿಡಿದಿದ್ದು ಎಡಗೈಯಲ್ಲಿ ಪುಸ್ತಕ ಮತ್ತು ಅಕ್ಷಮಾಲೆಯನ್ನು ಹಿಡಿದಿದ್ದಾಳೆ. ಶಿಲ್ಪಿಯು ಸರಸ್ವತಿಯ ಶಿಲ್ಪವನ್ನು ಬಹಳ ಅದ್ಭುತವಾಗಿ ಅಲಂಕರಿಸಿದ್ದಾನೆ. ನಂತರದಲ್ಲಿ ನಿಂತ ಭಂಗಿಯಲ್ಲಿರುವ ಹಯಗ್ರೀವನ ಶಿಲ್ಪವಿದೆ. ಇವನು ಅಶ್ವಮುಖವನ್ನು ಹೊಂದಿರುವ ವಿಷ್ಣುವಿನ ರೂಪವಾಗಿದ್ದಾನೆ. ಈತನು ಎಂಟು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮ, ಬಿಲ್ಲು, ಬಾಣ, ಖಡ್ಗ, ಗುರಾಣಿಯನ್ನು ಹಿಡಿದಿದ್ದಾನೆ. ಪೀಠದಲ್ಲಿ ಅಪಸ್ಮಾರ ಪುರುಷನನ್ನು ಕಡೆಯಲಾಗಿದೆ. ಪೀಠದ ಕೆಳಗೆ ದೇವತೆಯ ಹೆಸರನ್ನು ಕೊರೆಯಲಾಗಿದೆ. ಇವನ ಅಕ್ಕ ಪಕ್ಕದಲ್ಲಿ ಗಣಪತಿ ಮತ್ತು ಸರಸ್ವತಿಯ ಶಿಲ್ಪಗಳಿವೆ.

ಹದಿಮೂರನೆಯ ಭಾಗದಲ್ಲಿ ಪ್ರದ್ಯುಮ್ನನ ಶಿಲ್ಪವಿದೆ. ಇವನು ಸಮಭಂಗಿಯಲ್ಲಿ ಗರುಡ ಪೀಠದ ಮೇಲೆ ನಿಂತಿದ್ದಾನೆ. ಕೈಗಳಲ್ಲಿ ಚಕ್ರ, ಪದ್ಮ, ಶಂಖ ಮತ್ತು ಗದೆಗಳನ್ನು ಹಿಡಿದಿದ್ದಾನೆ. ಇದರ ಪಕ್ಕದಲ್ಲಿ ಗರುಡ ಪೀಠದ ಮೇಲೆ ವರಾಹನ ಶಿಲ್ಪವಿದೆ. ಇವನು ಹತ್ತು ಕೈಗಳನ್ನು ಹೊಂದಿದ್ದು ಗದೆ, ಖಡ್ಗ, ಚಕ್ರ, ಬಿಲ್ಲು, ಬಾಣ, ಶಂಖ, ಗುರಾಣಿ, ಫಲವನ್ನು ಹಿಡಿದಿದ್ದಾನೆ. ಮತ್ತೊಂದು ಕೈಯಿಂದ ಭೂದೇವಿಯ ಕಾಲನ್ನು ಹಿಡಿದಿದ್ದಾನೆ. ಅಕ್ಕ ಪಕ್ಕದಲ್ಲಿ ಪುಷ್ಪಗುಚ್ಛವನ್ನು ಹಿಡಿದಿರುವ ಸ್ತ್ರೀ ದೇವತೆಯರಿದ್ದಾರೆ. ಇದರ ಪಕ್ಕದಲ್ಲಿ ವೇಣುಗೋಪಾಲನ ಶಿಲ್ಪವಿದೆ. ಕೊಳಲನ್ನು ನುಡಿಸುತ್ತಿರುವ ಕೃಷ್ಣನಿಗೆ ಮನಸೋತು ಅಕ್ಕ ಪಕ್ಕದಲ್ಲಿ ಗೋಪಿಕೆಯರು ಗೋಪಾಲಕರು ಹಾಗೂ ಗೋವುಗಳನ್ನು ಹಂತ ಹಂತವಾಗಿ ಕಡೆಯಲಾಗಿದೆ. ಮೇಲಿನ ಎಲ್ಲಾ ಶಿಲ್ಪಗಳನ್ನು ಕೆತ್ತಿದವನು ಮಲ್ಲಿತಮ್ಮ.

ಹದಿನಾಲ್ಕನೆಯ ಭಾಗದಲ್ಲಿ ಅನಿರುದ್ಧನನ್ನು ಕಡೆಯಲಾಗಿದೆ. ಇವನು ವಿಷ್ಣುವಿನ ರೂಪನಾಗಿದ್ದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮವನ್ನು ಹಿಡಿದಿದ್ದಾನೆ. ಇವನ ಬಲಭಾಗದಲ್ಲಿ ಗರುಡನನ್ನು ಕಡೆಯಲಾಗಿದೆ. ಎಡಭಾಗದಲ್ಲಿ ಈತನ

ಪತ್ನಿಯಾದ ಉಷೆಯ ಶಿಲ್ಪವಿದೆ. ಈ ಶಿಲ್ಪವು ಇಡೀ ದೇವಾಲಯದಲ್ಲಿ ಕಂಡುಬರುವ ಸ್ತ್ರೀ ಶಿಲ್ಪಗಳಲ್ಲೇ ಅದ್ಭುತವಾಗಿದೆ. ಇವಳಿಗೆ ನೀಡಿರುವ ಅಲಂಕರಣವನ್ನು ಬಹುಶಃ ಶಿಲ್ಪಿಯು ಯಾವ ಶಿಲ್ಪಕ್ಕೂ ನೀಡಿಲ್ಲ. ಇವಳು ಅಲಂಕಾರಿಕವಾದ ಆಭರಣಗಳು ಹಾಗೂ ಕುಸುರಿ ಧರಿಸಿದ್ದು ಕೀರಿಟವನ್ನು ಹೊಂದಿದ್ದಾಳೆ. ಇವಳು ನಾಟ್ಯಭಂಗಿಯಲ್ಲಿ ನಿಂತಿದ್ದು ಎರಡು ಕೈ ಎರಡು ಜಡೆಯನ್ನು ಬಹಳ ದಪ್ಪನಾಗಿ ಹೆಣೆಸಿದ್ದು ಕೊನೆಯಲ್ಲಿ ಹೂಗುಚ್ಚವನ್ನು ಕಟ್ಟಿದ್ದಾಳೆ. ಬಲಭಾಗದ ಜಡೆಯನ್ನು ಮೊಣಕಾಲವರೆಗೆ ಇಳಬಿಟ್ಟು ಎಡಗೈಯಲ್ಲೂ ಎಡಭಾಗದ ಜಡೆಯನ್ನು ಮೊಣಕಾಲವರೆಗೆ ಇಳಬಿಟ್ಟು ಬಲಗೈಯಲ್ಲಿ ಹಿಡಿದಿದ್ದಾಳೆ. ನಂತರದಲ್ಲಿ ಬಲರಾಮನನ್ನು ಕಡೆಯಲಾಗಿದೆ. ಈತನು ಹೆಗಲ ಮೇಲೆ ನೇಗಿಲನ್ನು ಇಟ್ಟುಕೊಂಡು ಮೋಹಕ ಭಂಗಿಯಲ್ಲಿದ್ದಾನೆ. ಇವನ ಪಕ್ಕದಲ್ಲಿ ಪುಷ್ಪಗುಚ್ಚವನ್ನು ಹಿಡಿದಿರುವ ಸ್ತ್ರೀಯ ಶಿಲ್ಪವಿದೆ. ಇದರ ಪಕ್ಕದಲ್ಲಿ ನಾಟ್ಯಲಕ್ಷ್ಮೀಯನ್ನು ಕಡೆಯಲಾಗಿದೆ. ಇವಳು ಅಷ್ಠಭುಜವನ್ನು ಹೊಂದಿದ್ದು ಕೈಗಳಲ್ಲಿ ಅಭಯ, ಪದ್ಮ, ಚಕ್ರ, ಸ್ವರ್ಗ ಹಸ್ತ, ಶಂಖ, ಫಲ ಲಂಭಹಸ್ತ ಮತ್ತು ಧನಹಸ್ತವನ್ನು ಹೊಂದಿದ್ದಾಳೆ. ಇಕ್ಕೆಲಗಳಲ್ಲಿ ವಾದ್ಯಗಾರರ ಶಿಲ್ಪವನ್ನು ಕಡೆಯಲಾಗಿದೆ. ಈ ಶಿಲ್ಪವನ್ನು ಮಾಡಿದವನು ಮಲ್ಲಿತಮ್ಮನಾಗಿದ್ದು, ಪೀಠದಲ್ಲಿ ಅವನ ಹೆಸರು ಮತ್ತು ದೇವತೆಯ ಹೆಸರನ್ನು ಕಡೆಯಲಾಗಿದೆ. ಇದರ ಪಕ್ಕದಲ್ಲಿ ಮಗುವನ್ನು ಎತ್ತಿಕೊಂಡಿರುವ ಧ್ವಿಭಂಗಿಯಲ್ಲಿರುವ ಸ್ತ್ರೀಯ ಶಿಲ್ಪವಿದ್ದು ಒಂದು ಕೈಯಲ್ಲಿ ಹಣ್ಣಿನ ಗೊಂಚಲನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ಮಹಿಷಮರ್ದಿನಿಯ ಶಿಲ್ಪವಿದೆ. ಇವಳು ಸಹ ಅಷ್ಠಭುಜವನ್ನು ಹೊಂದಿದ್ದು ಮಹಿಷನನ್ನು ಎಡಗಾಲಿನಿಂದ ತುಳಿದಿದ್ದಾಳೆ. ಬಲಗೈಯಿಂದ ಬಲಭಾಗದಲ್ಲಿ ಮೋಹಿನಿಯ ಶಿಲ್ಪವಿದೆ. ಈಕೆಯು ನಗ್ನವಾಗಿದ್ದು ಕಾಳಿಂಗ ಸರ್ಪದೊಡನೆ ನಾಟ್ಯವಾಡುತ್ತಿರುವಂತೆ ಕಡೆಯಲಾಗಿದೆ. ಇದರ ಪಕ್ಕದಲ್ಲಿ ಅಧೋಕ್ಷಜನ ಶಿಲ್ಪವಿದೆ. ಇದು ಸಹ ವಿಷ್ಣುವಿನ ರೂಪದ್ದಾಗಿದೆ.

ಹದಿನೈದನೆಯ ಭಾಗದಲ್ಲಿ ಕಾಳಿಯವರ್ಧನ ಕೃಷ್ಣನ ಶಿಲ್ಪವಿದೆ. ಇಲ್ಲಿ ಕೃಷ್ಣನು ಕಾಳಿಂಗ ಸರ್ಪದ ಮೇಲೆ ನಾಟ್ಯವನ್ನು ಮಾಡಿತ್ತಿದ್ದಾನೆ. ಎಡಗೈಯಲ್ಲಿ ಸರ್ಪದ ಬಾಲವನ್ನು, ಬಲಗೈಯಲ್ಲಿ ಅಭಯ ಹಸ್ತವುಳ್ಳವನಾಗಿದ್ದು, ಎಡಗಾಲನ್ನು ಸರ್ಪದ ಮೇಲಿಟ್ಟು ನಾಟ್ಯವಾಡುತ್ತಿದ್ದಾನೆ. ಅಕ್ಕ ಪಕ್ಕದಲ್ಲಿ ನಾಗ ನಾಗಿಣಿಯು ಕೈ ಮುಗಿದು ನಿಂತಿರುವ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ನಂತರದಲ್ಲಿ ಸಿಂಹಮುಖದ ಮೇಲೆ ಸಮಭಂಗಿಯಲ್ಲಿ ನಿಂತಿರುವ ನರಸಿಂಹನ ಶಿಲ್ಪವಿದೆ. ಕೈಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಹಿಡಿದಿದ್ದಾನೆ. ಅಕ್ಕ ಪಕ್ಕದಲ್ಲಿ ಪುಷ್ಪಗುಚ್ಚವನ್ನು ಹಿಡಿದಿರುವ ಸ್ತ್ರೀ ದೇವತೆಯನ್ನು ಕಡೆಯಲಾಗಿದೆ. ನಂತರದಲ್ಲಿ ಅರ್ಜುನನನ್ನು ಕಡೆಯಲಾಗಿದೆ. ಅರ್ಜುನನು ಕೈಯಲ್ಲಿ ಬಿಲ್ಲು ಬಾಣವನ್ನು ಹಿಡಿದು ಮತ್ಸಯಂತ್ರವನ್ನು ಭೇದಿಸುವ ಕಥಾನಿರೂಪಣಾ ಶಿಲ್ಪವಾಗಿದೆ. ಇಕ್ಕೆಲಗಳಲ್ಲಿ ದ್ರೌಪದಿಯನ್ನು ಸಹ ತೋರಿಸಿ ಕೊಡಲಾಗಿದೆ.

ಹದಿನಾರನೆಯ ಭಾಗದಲ್ಲಿ ಲಕ್ಷ್ಮೀಯ ಶಿಲ್ಪವಿದೆ. ಇವಳು ಸಮಭಂಗಿಯಲ್ಲಿ ನಿಂತಿದ್ದು ಕೈಯಲ್ಲಿ ಪದ್ಮವನ್ನು ಹಿಡಿದಿದ್ದಾಳೆ. ಇದರ ಪಕ್ಕದಲ್ಲಿ ದಕ್ಷಿಣಮೂರ್ತಿಯ ಶಿಲ್ಪವಿದೆ. ಇದರಲ್ಲಿ ಕೋತಿಯು ಅವಳ ವಸ್ತ್ರವನ್ನು ಎಳೆಯುತ್ತಿರುವಂತೆಯು ಹಾಗೂ ಅವಳ ವಸ್ತ್ರವು ಜಾರದಿರಲೆಂದು ಅದನ್ನು ಹಿಡಿದುಕೊಂಡಿರುವುದನ್ನು ಕಡೆಯಲಾಗಿದೆ. ನಂತರದಲ್ಲಿ ಅಚ್ಚುತನ ಶಿಲ್ಪವಿದೆ. ಇವನು ಗರುಡ ಪೀಠದ ಮೇಲೆ ಸಮಭಂಗಿಯಲ್ಲಿರುವಂತೆ ಕಡೆಯಲಾಗಿದೆ. ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಚಕ್ರ, ಕೆಳಎಡಗೈಯಲ್ಲಿ ಶಂಖವನ್ನು ಹಿಡಿದಿದ್ದು, ಕೆಳಬಲಗೈಯಲ್ಲಿ ಗದೆಯನ್ನು ಹಿಡಿದಿದ್ದು ಕೆಳಗೆ ಇಟ್ಟುಕೊಂಡಿರುವಂತೆ ಕಡೆಯಲಾಗಿದೆ. ಇದರ ಪಕ್ಕದಲ್ಲಿ ಪರಶುರಾಮನ ಶಿಲ್ಪವಿದೆ. ಇವನು ದ್ವಿಭುಜವನ್ನು ಹೊಂದಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಬಲಗೈಯಲ್ಲಿ ಕೊಡಲಿಯನ್ನು ಎಡಗೈಯಲ್ಲಿ ಬಹು ಬೀಜಫಲವನ್ನು ಹಿಡಿದಿದ್ದಾನೆ. ಇವನ ಪಕ್ಕದಲ್ಲಿ ಲಕ್ಷ್ಮೀನಾರಾಯಣನ ಶಿಲ್ಪವಿದೆ. ಸುಖಾಸನದಲ್ಲಿ ಕುಳಿತಿರುವ ನಾರಾಯಣನು ತೊಡೆಯ ಮೇಲೆ ಲಕ್ಷ್ಮೀಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಹಿಂಬದಿಯ ಕೈಯಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದು ಮುಂಭಾಗದ ಬಲಗೈಯನ್ನು ವರದ ಹಸ್ತದಲ್ಲಿ ತೋರಿಸಿದ್ದು, ಎಡಗೈಯಲ್ಲಿ ಲಕ್ಷ್ಮೀಯ ಬೆನ್ನನ್ನು ಸುತ್ತುವರಿದು ಹಿಡಿಕೊಂಡಿದೆ. ನಂತರದಲ್ಲಿ ಜನಾರ್ಧನನ ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪನಾಗಿದ್ದಾನೆ. ಇವನ ನಂತರದಲ್ಲಿ ಸ್ತ್ರೀಯೊಬ್ಬಳು ಮಗುವನ್ನು ಕಂಕುಳಲ್ಲಿ ಎತ್ತಿಕೊಂಡಿರುವ ಸುಂದರವಾದ ಶಿಲ್ಪವಿದೆ. ಇದರ ಪಕ್ಕದಲ್ಲಿ ಹಂಸಪೀಠದ ಮೇಲೆ ನಾಟ್ಯ ಸರಸ್ವತಿಯ ಶಿಲ್ಪವಿದೆ. ಬಲಭಾಗದ ಕೈಗಳಲ್ಲಿ ಅಕ್ಷಮಾಲೆ, ಬಹುಬೀಜಫಲ, ಅಂಕುಶವಿದ್ದು ಎಡಕೈಗಳಲ್ಲಿ ಪಾಶ, ಪದ್ಮ ಮತ್ತು ಪುಸ್ತಕಗಳನ್ನು ಹಿಡಿದಿದ್ದಾಳೆ. ಮತ್ತೆರಡು ಕೈಗಳು ನಾಟ್ಯಭಂಗಿಯಲ್ಲಿವೆ. ಇಕ್ಕೆಲಗಳಲ್ಲಿ ಮೃದಂಗವನ್ನು ಬಾರಿಸುತ್ತಿರುವ ಸಣ್ಣ ಶಿಲ್ಪಗಳಿವೆ.

ಹದಿನೇಳನೆಯ ಭಾಗದಲ್ಲಿ ಹಯಗ್ರೀವ ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪವಾಗಿದ್ದಾನೆ. ಪೀಠದಲ್ಲಿ ಅಪಸ್ಮಾರ ಪುರುಷನನ್ನು ಕಡೆಯಲಾಗಿದೆ. ಇವನ ಮುಖವು ಅಶ್ವದ ರೀತಿಯನ್ನು ಹೊಂದಿರುವುದರಿಂದ ಇವನನ್ನು ಹಯಗ್ರೀವ ಎಂದು ಕರೆಯಲಾಗುತ್ತದೆ. ಬಲಗೈಯಲ್ಲಿ ಗದೆ, ಬಾಣ, ಚಕ್ರ, ಖಡ್ಗಗಳಿದ್ದು ಎಡಗೈಯಲ್ಲಿ ಪದ್ಮ, ಬಿಲ್ಲು ಖೇಟ, ಶಂಖಗಳು ಕಂಡುಬರುತ್ತವೆ. ನಂತರದಲ್ಲಿ ತ್ರಿಭಂಗಿಯಲ್ಲಿರುವ ಸುಂದರವಾದ ಅಲಂಕರಣಯುಕ್ತ ಸ್ತ್ರೀಯ ಶಿಲ್ಪವಿದೆ. ಇವಳ ಬಲಗೈಯಲ್ಲಿ ಗಿಣಿಯು ಕುಳಿತಿದ್ದು ಎಡಗೈಯಲ್ಲಿ ಬಾಣವನ್ನು ಹಿಡಿದಿದ್ದಾಳೆ. ನಂತರದಲ್ಲಿ ಉಪೇಂದ್ರನ ಶಿಲ್ಪವಿದೆ. ಇವನು ಸಹ ವಿಷ್ಣುವಿನ ರೂಪವಾಗಿದ್ದಾನೆ. ನಂತರದಲ್ಲಿ ಕೋದಂಡರಾಮ, ಲಕ್ಷ್ಮಣ ಮತ್ತು ಸೀತೆಯ ಶಿಲ್ಪಗಳಿವೆ. ರಾಮ ಮತ್ತು ಲಕ್ಷ್ಮಣನ ಕೈಯಲ್ಲಿ ಬಿಲ್ಲುಬಾಣವಿದೆ. ಸೀತೆಯ ಕೈಯಲ್ಲಿ ಫಲವನ್ನು ಹಿಡಿದಿದ್ದಾಳೆ. ನಂತರದಲ್ಲಿ ಹನುಮಂತನು ಕೈಮುಗಿದು ನಿಂತಿರುವಂತೆ ಕಡೆಯಲಾಗಿರುತ್ತದೆ.

ಹದಿನೆಂಟನೆಯ ಭಾಗದಲ್ಲಿ ಹರಿಯ ಶಿಲ್ಪವಿದೆ. ಇದು ವಿಷ್ಣುವಿನ ಲಕ್ಷಣವನ್ನು ಹೊಂದಿದೆ. ಇದರ ಪಕ್ಕದಲ್ಲಿ ಗರುಡ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತ ವಿಷ್ಣುವಿನ ಶಿಲ್ಪವಿದೆ. ಇವನು ಎರಡು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಪಾಯಸದ ಬಟ್ಟಲನ್ನು ಎಡಗೈಯಲ್ಲಿ ಅಮೃತ ಕಳಶವನ್ನು ಹಿಡಿದಿದ್ದಾನೆ. ಶಿಲ್ಪದ ಸುತ್ತಲೂ ವೃತ್ತಾಕಾರದ ಪ್ರಭಾವಳಿಯನ್ನು ಇಲ್ಲಿ ವಿಷ್ಣುವಿನ ಆಯುಧಗಳಾದ ಶಂಖ, ಚಕ್ರಗಳನ್ನು ತೋರಿಸಲಾಗಿದೆ. ಈ ಶಿಲ್ಪವನ್ನು ಕೆತ್ತಿರುವವನು ಮಲ್ಲಿತಮ್ಮ.

ಹತ್ತೊಂಬತ್ತನೆಯ ಹಾಗೂ ದೇವಾಲಯದ ಕೊನೆಯ ಭಾಗದಲ್ಲಿ ಕೃಷ್ಣನನ್ನು ಕೆತ್ತಲಾಗಿದೆ. ಇದು ವಿಷ್ಣುವಿನ ಇಪ್ಪನ್ನಾಲ್ಕು ರೂಪಗಳಲ್ಲಿ ಕೊನೆಯದಾಗಿದೆ. ಇದರ ಪಕ್ಕದಲ್ಲಿ ಲಕ್ಷ್ಮೀ ಮತ್ತು ಕಾಮಧೇನುವಿನ ಬೆನ್ನ ಮೇಲೆ ಛತ್ರಿಯನ್ನು ಸಹ ಕಡೆಯಲಾಗಿದೆ. ಈ ಭಿತ್ತಿ ಶಿಲ್ಪಗಳ ಮೇಲ್ಭಾಗದಲ್ಲಿ ಸಣ್ಣದಾದ ಕಾರ್ನೀಸನ್ನು ಮಾಡಿದ್ದು ಇದು ಮುಂಚಾಚಿದೆ. ಇದರಲ್ಲಿ ಸಣ್ಣದಾದ ಒತ್ತೊತ್ತಾಗಿರುವ ಗುಬುಟುಗಳನ್ನು ಮಾಡಿದ್ದು ಇವುಗಳು ಆ ಭಾಗಕ್ಕೆ ಬಹಳ ಅಲಂಕಾರಿಕವಾಗಿ ಕಾಣುತ್ತದೆ. ಇದರ ಮೇಲ್ಭಾಗದ ಗೋಪುರಗಳಲ್ಲಿ ಸಣ್ಣ ಸಣ್ಣ ಶಿಲ್ಪಗಳಿವೆ. ಕೆಲವು ಶಿಲ್ಪಗಳು ಗೋಪುರ ಗೋಪುರದ ಅಲಂಕರಣೆಯನ್ನು ಹೊಂದಿದ್ದರೆ ಮತ್ತೆ ಕೆಲವು ಕಂಬ ಗೋಪುರಗಳ ಕೆಳಗೆ ಕಡೆಯಲಾಗಿದೆ. ಈ ಸಣ್ಣ ಗೋಪುರಗಳು ಸಹ ದೇವಾಲಯದ ಹೊರ ಇತ್ತಿಗೆ ಬಹಳ ಅಲಂಕಾರಿಕವಾಗಿ ಕಾಣುತ್ತವೆ. ಇಲ್ಲಿ ಸೂರ್ಯ, ಛಾಯ, ನಾಟ್ಯಲಕ್ಷ್ಮೀ, ವಿಷ್ಣುವಿನ ದಶಾವತಾರಗಳ ಕೆತ್ತನೆಗಳು ಸಮುದ್ರ ಮಂಥನ, ಅನಂತಶಾಯಿ, ಋಷಿ ಇನ್ನೂ ಮೊದಲಾದ ಸಣ್ಣ ಸಣ್ಣ ಶಿಲ್ಪಗಳನ್ನು ಕಡೆಯಲಾಗಿದೆ.

ಈ ದೇವಾಲಯದ ಶಿಖರಗಳು ತ್ರಿಕೂಟಾಚಲ ದೇವಾಲವಾಗಿದ್ದು ಇದರಲ್ಲಿ ಮೂರು ಶಿಖರಗಳಿವೆ. ಅದರೆ ಮೂಲ ದೇವಾಲಯವನ್ನು ನಿರ್ಮಿಸುವಾಗ ಪಶ್ಚಿಮ ಭಾಗದ ಗರ್ಭಗುಡಿಯ ಮೇಲ್ಭಾಗದಲ್ಲಿರುವ ಶಿಖರವನ್ನು ಕಟ್ಟಲಾಗಿದೆ. ಇದು ವೇಸರ ಶೈಲಿಯಲ್ಲಿದೆ. ಉತ್ತರ ಮತ್ತು ದಕ್ಷಿಣ ಭಾಗದಲ್ಲಿರುವ ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ಇತ್ತೀಚೆಗೆ ಕಟ್ಟಿದ್ದಾರೆ. ಇದನ್ನು ಕ್ರಿ.ಶ.17ನೇ ಶತಮಾನದಲ್ಲಿ ಕಟ್ಟಲಾಗಿದೆ. ಪಶ್ಚಿಮ ಭಾಗದಲ್ಲಿರುವ ಶಿಖರವನ್ನು ಸೋಪುಗಲ್ಲಿನಿಂದ ಕಟ್ಟಲಾಗಿದ್ದು ಸಂಪೂರ್ಣವಾಗಿ ಹೊಯ್ಸಳ ವಾಸ್ತು ಶೈಲಿಯನ್ನು ಹೊಂದಿದೆ. ಇಲ್ಲಿ ಮೂರು ಹಂತದ ರಚನೆಯನ್ನು ಮಾಡಿದ್ದು ಇದರ ಮೇಲ್ಭಾಗದಲ್ಲಿ ಸ್ತೂಪಿ ಇದೆ. ಇದರ ಮೇಲೆ ಕಲ್ಲಿನ ಕಳಶವಿದೆ. ಇಲ್ಲಿನ ಭದ್ರಶಾಲಾ ಹಾಗೂ ಶಾಲಾಗಳನ್ನು ಬಹಳ ಅಲಂಕರಣಗೊಳಿಸಲಾಗಿದೆ. ಪ್ರತಿಯೊಂದು ಭದ್ರ ಶಾಲಾಗಳಲ್ಲಿಯು ವಿಷ್ಣುವಿನ ನಿರೂಪಣಾ ಶಿಲ್ಪಗಳಿವೆ.

## ನುಗ್ಗ ಹಳ್ಳಿಯ ಸದಾಶಿವ ದೇವಾಲಯ

ಈ ದೇವಾಲಯವು ಲಕ್ಷ್ಮಿನರಸಿಂಹ ದೇವಾಲಯದ ಈಶಾನ್ಯ ಭಾಗದಲ್ಲಿದೆ. ಈ ದೇವಾಲಯವನ್ನು ಹೊಯ್ಸಳ ಅರಸ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಆತನ ಸಂಧಿವಿಗ್ರಹಿಯಾದ ಬೊಮ್ಮಣ್ಣ ದಂಡನಾಯಕನು ಕ್ರಿ.ಶ 1249ರಲ್ಲಿ ಕಟ್ಟಿಸಿದನು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದಂತಹ ಅನೇಕ ದೇವಾಲಯಗಳು ಏನಾದರು ಒಂದು ವಿಶೇಷತೆಯನ್ನು ಹೊಂದಿರುತ್ತದೆ. ಇವುಗಳು ವಾಸ್ತುವಿನ ರೂಪದಲ್ಲಾಗಿರಬಹುದು ಅಥವಾ ಶಿಲ್ಪ ರೂಪದ ಬಳಕೆಯಲ್ಲಾಗಿರಬಹುದು. ಅದೇ ರೀತಿಯಲ್ಲಿ ಇದು ಸಹ ಒಂದು ವಿಶೇಷ ರೂಪವನ್ನು ವಾಸ್ತುಶೈಲಿಯಲ್ಲಿ ಹೊಂದಿದೆ. ಇದು ನಾಗರ ಶಿಖರವುಳ್ಳ ದೇವಾಲಯವಾಗಿದೆ. ಲಕ್ಷ್ಮೀನರಸಿಂಹ ದೇವಾಲಯವು ತ್ರಿಕೂಟಾಚಲವಾಗಿದ್ದು ಹೆಚ್ಚಿನ ಅಲಂಕರಣೆಯನ್ನು ಹೊಂದಿದ್ದು ಭಿತ್ತಿ ಶಿಲ್ಪಗಳನ್ನು ಹೊಂದಿದೆ. ಆದರೆ ಅಲ್ಲಿಯ ವಿಶೇಷತೆ ಎಂದರೆ ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿರುವ ಮುಖ್ಯವಾದ ಮಂಟಪ ಅದೇ ರೀತಿಯಲ್ಲಿ ಈ ದೇವಾಲಯದ ವಾಸ್ತು ಲಕ್ಷಣವು ಸಹ ವಿಶೇಷವಾಗಿ ದ್ರಾವಿಡ ಮಿಶ್ರಿತ ನಾಗರ ವಾಸ್ತುವನ್ನು ಕಾಣಬಹುದಾಗಿದೆ. ದೇವಾಲಯವನ್ನು ಬಳಪದ ಕಲ್ಲಿನಿಂದ ಕಟ್ಟಲಾಗಿದ್ದು ಇದು ಜಗತಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ನಂದಿ ಮಂಟಪವನ್ನು ಒಳಗೊಂಡಿದೆ. ಪಾತಾಳಾಂಕಣ, ದೀಪಸ್ತಂಭ ಹಾಗೂ ಮುಖ್ಯದ್ವಾರ ಮಂಟಪವು ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದೆ. ಕ್ರಿ.ಶ 1435ರ ಶಾಸನದಲ್ಲಿ ವಿಜಯನಗರದ ಅರಸ ಶ್ರೀ ವೀರಪ್ರತಾಪ ದೇವರಾಯ ಮಹಾರಾಜರು ಆಡಳಿತ ನಡೆಸುತ್ತಿದ್ದುದು ತಿಳಿದು ಬರುತ್ತದೆ. ಇದರಲ್ಲಿ ಅವುತಿ ನಾಯಕರ ಮಕ್ಕಳಾದ ಕಟ್ಟಿಗೆಯ ಕಾಲದಲ್ಲಿಯೂ ಲಕ್ಷ್ಮೀನರಸಿಂಹ ಹಾಗೂ ಸದಾಶಿವ ದೇವಾಲಯದ ಮುಂದುವರೆದ ವಾಸ್ತುಶಿಲ್ಪವನ್ನು ಕಟ್ಟಿಸಿದ್ದಾರೆ. (ಚಿತ್ರ ಸಂಖ್ಯೆ 32)

ಈ ದೇವಾಲಯದ ಜಗತಿ ತಳವಿನ್ಯಾಸವು ಅಷ್ಟಮುಖ ಕೋನಗಳುಳ್ಳ ನಕ್ಷತ್ರಾಕಾರವನ್ನು ಹೊಂದಿದೆ. ಇಲ್ಲಿ ಸುಮಾರು ಮೂರು ಅಡಿ ಎತ್ತರ ಹಾಗೂ ಸುಮಾರು ಆರು ಅಡಿ ವಿಶಾಲತೆಯನ್ನು ಹೊಂದಿದೆ. ಇದರಲ್ಲಿ ಹಿಂಬಣಿ ಮತ್ತು ಮುಂಬಣಿಗಳಿಂದ ಕೂಡಿದ ಪಟ್ಟಿಕೆಯೊಂದಿಗೆ ಅಧಿಷ್ಠಾನದಲ್ಲಿರುವ ಕೆಲವು ಲಕ್ಷಣಗಳನ್ನು ಇಲ್ಲಿ ಕಾಣಬಹುದು. ಈ ದೇವಾಲಯವು ನಿರಾಧಾರ ದೇವಾಲಯವಾಗಿರುವುದರಿಂದ ಬಹುಶಃ ಹೊರಗಿನಿಂದಲೇ ದೇವಾಲಯದ ಪ್ರದಕ್ಷಿಣೆಯನ್ನು ಮಾಡಲು ಈ ರೀತಿಯ ಜಗತಿಯನ್ನು ನಿರ್ಮಿಸಿದ್ದಾರೆ ಎನ್ನಬಹುದು.

ಅಧಿಷ್ಠಾನವು ಸುಮಾರು 4 ಅಡಿ ಎತ್ತರವಿದೆ. ಇಲ್ಲಿ ಜಗತಿ, ಉಪಾನ, ಪಟ್ಟಿಕೆ ಮೊನಚಾದ ತ್ರಿಪಟ್ಟಿ ಕುಮುದ ಹಾಗೂ ಪ್ರತಿಗಳನ್ನು ಹೊಂದಿದೆ. ಇದರಲ್ಲಿ ಲಕ್ಷ್ಮೀನರಸಿಂಹ ದೇವಾಲಯದ ರೀತಿಯ ಅಲಂಕರಣ ಪಟ್ಟಿಕೆ ಇರುವುದಿಲ್ಲ. ಹೊರ ಭಿತ್ತಿಯ ಭಾಗದಲ್ಲಿ ಯಾವುದೇ ರೀತಿಯ ಅಲಂಕರಣ ಶಿಲ್ಪವನ್ನು ಹೊಂದಿಲ್ಲ. ಆದರೆ ವಾಸ್ತುವು ಹೊರ ಮತ್ತು ಹೊರ ಚಾಚುಗಳುಳ್ಳ ಅಲಂಕರಣೆಯನ್ನು ಹೊಂದಿದೆ. ಭಿತ್ತಿಯಲ್ಲಿ ಸ್ತಂಭಗಳ ಅಲಂಕರಣವಿದ್ದು ಇವುಗಳು ಅಷ್ಠ ಮುಖಗಳನ್ನು ಹೊಂದಿದೆ. ಅಲ್ಲಲ್ಲಿ ನಕ್ಷತ್ರಾಕಾರದ ಮಾದರಿಯನ್ನು ಹೊಂದಿದೆ. ಇದಕ್ಕೆ ಹೊಂದಿಕೊಂಡಂತೆ ಕಪೋತಬಂಧವು ಸಹ ಸರಳ ವಿನ್ಯಾಸದೊಂದಿಗೆ ಭಿತ್ತಿಯ ಅಲಂಕರಣವನ್ನೇ ಅನುಸರಿಸಿದೆ. ಭಿತ್ತಿಯ ಉತ್ತರ ಭಾಗದಲ್ಲಿ ಮಂಟಪದ ರಚನೆಯೊಳಗೆ ತ್ರಿಮುಖ ಬ್ರಹ್ಮನು ಪದ್ಮಾಸನದಲ್ಲಿ ಕುಳಿತಿರುವ ಶೀಲ್ಪವಿದೆ. ಮೇಲ್ಭಾಗದಲ್ಲಿ ಛತ್ರಿಯ ರೀತಿಯಲ್ಲಿ ಚಿತ್ರಿಸಿದ ಅದರ ಶಿಲ್ಪದ ಮುಖ ಹಾಗೂ ದೇಹದ ಸ್ವಲ್ಪ ಭಾಗವು ಭಗ್ನವಾಗಿದ್ದು ಅಸ್ಪಷ್ಟವಾಗಿ ಕಾಣುತ್ತಿದೆ. ಮಂಟಪದ ರಚನೆಗೆ ಎರಡು ಬದಿಯಲ್ಲೂ ನಕ್ಷತ್ರಾಕಾರದ ಕಂಬಗಳ ರೀತಿಯಲ್ಲಿ ಕಡೆಯಲಾಗಿದೆ ಮೇಲ್ಭಾಗದ ಶಿಖರವು ಸಹ ದೇವಾಲಯದ ಮುಖ್ಯ ಶಿಖರದ ಲಕ್ಷಣವನ್ನು ಹೊಂದಿದೆ.

ಈ ದೇವಾಲಯದ ಶಿಖರವು ಬಳಪದ ಕಲ್ಲಿನಿಂದ ಕಟ್ಟಲಾಗಿದ್ದು ಇದು ಒಂದು ರೀತಿಯಲ್ಲಿ ದ್ರಾವಿಡ ಮತ್ತು ನಾಗರ ಶೈಲಿಯನ್ನು ಹೊಂದಿದೆ. ಶೀಖರವು ಮೂರು ಹಂತಗಳಲ್ಲಿ ಸಣ್ಣದಾದ ಶಿಖರಗಳನ್ನು ಹೊಂದಿದ್ದು ಇದರ ಪ್ರತಿಯೊಂದು ಹೊರಚಾಚುವಿನಲ್ಲಿ ಒಂದೊಂದು ವಿಮಾನವನ್ನು ರಚಿಸಲಾಗಿದೆ. ಪ್ರತಿ ವಿಮಾನದ ಎರಡು ಬದಿಯಲ್ಲಿಯೂ ಊರ್ಧ್ವಮುಖದ ಲತಾಪಟ್ಟಿಕೆಯನ್ನು ಹೊಂದಿದೆ. ಪ್ರತಿಯೊಂದು ವಿಮಾನವನ್ನು ಪ್ರತ್ಯೇಕವಾಗಿ ಅಲಂಕರಿಸಿರುವುದರಿಂದ ಶಿಖರದ ಲಕ್ಷಣವು ಅದ್ಭುತವಾಗಿ ಕಂಡುಬರುತ್ತದೆ. ಮೂರು ಹಂತದ ಶಿಖರದ ಕೊನೆಯ ಭಾಗದಲ್ಲಿ ಕಮಲದ ಮಾದರಿಯ ಸ್ತೂಪಿಯಿದ್ದು ಇದು ಸಹ ಶಿಖರದ ಒಳ ಹಾಗೂ ಹೊರಚಾಚುವಿಗೆ ಅನುಗುಣವಾಗಿ ದಪ್ಪವಾಗಿ ನಿರ್ಮಿಸಲಾಗಿದೆ. ಈ ಅಮಲಕದ ಮೇಲೆ ನಾಲ್ಕು ಮೂಲೆಗಳಲ್ಲಿಯೂ ಶಿವನ ವಾಹನವಾದ ನಂದಿಯ ಶಿಲ್ಪವಿದೆ ನಂತರದಲ್ಲಿ ಪದ್ಮದ ಅಲಂಕರಣೆಯಿದ್ದು ಅದರ ಮೇಲ್ಭಾಗದಲ್ಲಿ ಕಲಶವಿದೆ. ಶಿಖರದ ಮುಂಭಾಗದಲ್ಲಿ ಸುಕನಾಶಿ ಇದ್ದು ಇದು ಶಿಖರದ ಮೂರನೇ ಹಂತದ ಸಮಕ್ಕೆ ಇದೆ. ಇಲ್ಲಿ ಹೊಯ್ಸಳ ಲಾಂಛನವಾದ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವಿದೆ. ಇದರ ಮುಂಭಾಗದಲ್ಲಿ ಶಿವನ ನೃತ್ಯತಾಂಡವ ಶೀಲ್ಪವಿದ್ದು ಇದನ್ನು ವ್ಯಾಳ ಮುಖದಿಂದ ಹರಡಿರುವ ಲತಾ ಬಳ್ಳಿಗಳ ಅಲಂಕರಣದ ಮಧ್ಯದಲ್ಲಿ ಅಲಂಕರಿಸಿದೆ.

ಮೂಲ ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರರದ ಶಿವಲಿಂಗವಿದೆ. ಇಲ್ಲಿಯ ನಾಲ್ಕು ಮೂಲೆ ಕಂಬಗಳು ಭಿತ್ತಿಗೆ ಹೊಂದಿಕೊಂಡಿದ್ದು ಹೊಯ್ಸಳ ಮಾದರಿಯ ನಕ್ಷತ್ರಾಕಾರದ ಕಂಬಗಳಾಗಿದೆ. ಇಲ್ಲಿಯ ಭುವನೇಶ್ವರಿಯು ಪದ್ಮ ರಚನೆಯನ್ನು ಹೊಂದಿದೆ. ಇಲ್ಲಿಯ ದ್ವಾರ ಬಂಧದ ಎರಡು ಬದಿಯಲ್ಲೂ ಐದು ಶಾಖೆಗಳನ್ನು ಕಡೆಯಲಾಗಿದೆ. ಒಂದು ಶಾಖೆಯಲ್ಲಿ ಅರೆಕಂಬವನ್ನು ಉಳಿದ ಪಟ್ಟಿಕೆಗಳಲ್ಲಿ ಲತಾಸುರುಳಿಯ ಅಲಂಕರಣವಿದೆ. ಲಲಾಟಬಿಂಬದಲಿ ಲಕ್ಷ್ಮೀಯನ್ನು ಚಿತ್ರಿಸಿದ್ದು ಅದರ ಮೇಲ್ಭಾಗದಲ್ಲಿ ಪಾರ್ವತಿಯ ಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ಶೈವದ್ವಾರ ಪಾಲಕರನ್ನು ಕಡೆಯಲಾಗಿರುತ್ತದೆ. ನವರಂಗಕ್ಕೆ ಎರಡು ದ್ವಾರಗಳಿದ್ದು ಮುಖ್ಯ ದ್ವಾರವು ದಕ್ಷಿಣ ಭಾಗಕ್ಕಿದೆ. ಪೂರ್ವ ದ್ವಾರವು ನಂದಿ ಮಂಟಪಕ್ಕೆ ಸಂಪರ್ಕವನ್ನು ಕಲ್ಪಿಸುವುದಾಗಿದೆ. ಇದು 9 ಅಂಕಣಗಳನ್ನು ಹೊಂದಿದೆ. ನವರಂಗದ ಮಧ್ಯ ಭಾಗದಲ್ಲಿ ಸುಮಾರು ಅರ್ಧ ಅಡಿ ಎತ್ತರದ ಚೌಕಾಕಾರದ ಜಗತಿ ಇದೆ. ಮಧ್ಯ ಭಾಗದಲ್ಲಿ 4 ಸ್ವತಂತ್ರ್ಯ ಕಂಬಗಳಿದ್ದು ಇವುಗಳ ಕೆಳ ಭಾಗವು ಪೀಠದ ಮೇಲೆ ಚೌಕಾಕಾರವಾಗಿದ್ದು ನಂತರದಲ್ಲಿ ದುಂಡಾಗಿದ್ದು ಹಲವಾರು ಒಳ ಹೊರ ಚಾಚಿದ ಬಳೆಯಾಕಾರದಲ್ಲಿದ್ದು ಕೆಳಮುಖ ಬೋದಿಗೆ ರೀತಿಯಲ್ಲಿದೆ. ಮೇಲ್ಭಾಗದಲ್ಲಿ ಮುಚ್ಚಳ ಚೌಕದ ಬೋಧಿಗೆ ಹಾಗೂ ತೊಲೆಗಳ ಕೆಳಗೆ ಚಾಚು ಪೀಠಗಳನ್ನು ಹೊಂದಿವೆ. ಪ್ರತಿ ತೊಲೆಗಳ ಮಧ್ಯ ಭಾಗದ ಕೆಳ ಭಾಗದಲ್ಲಿ ಪದ್ಮದ ಕೆತ್ತನೆಯನ್ನು ಕಡೆಯಲಾಗಿದೆ. ಭಿತ್ತಿಗೆ ಹೊಂದಿಕೊಂಡಂತೆ ಒಟ್ಟು 14 ಕಂಬಗಳಿವೆ. ಇವು ಸಹ ಹೊಯ್ಸಳ ಕಾಲದ ಲಕ್ಷಣಗಳನ್ನು ಹೊಂದಿದ್ದು ನಕ್ಷತ್ರಾಕಾರದ ರಚನೆಯನ್ನು ಹೊಂದಿದೆ. ಇವುಗಳು ಒಳ ಮುಖಗಳಲ್ಲಿ ಮಾತ್ರ ಅಲಂಕರಣವನ್ನು ಹೊಂದಿದ್ದು ಭಿತ್ತಿಗೆ ಹೊಂದಿಕೊಂಡಂತಿರುವ ಭಾಗವು ಅಲಂಕರಣವನ್ನು ಹೊಂದಿಲ್ಲ. ನವರಂಗದಲ್ಲಿ ಬಿಡಿ ಶಿಲ್ಪಗಳಿದ್ದು ಇವುಗಳು ಸಹ ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ. ಇಲ್ಲಿ ಗಣಪತಿ, ಸಪ್ತಮಾತೃಕೆಯರು, ಮಹಿಷಮರ್ಧಿನಿ, ಸುಬ್ರಹ್ಮಣ್ಯ, ಸೂರ್ಯ ಮತ್ತು ಕುಳಿತ ಭಂಗಿಯಲ್ಲಿರುವ ವೀರಭದ್ರನ ಶಿಲ್ಪವಿದೆ. ಗಣಪತಿಯು 4 ಕೈಗಳನ್ನು ಹೊಂದಿದ್ದು ಬಲಭಾಗದ ಮೇಲು ಕೈಯಲ್ಲಿ ಕೊಡಲಿ, ಕೆಳ ಕೈಯಲ್ಲಿ ಅರ್ಧ ದಂತವನ್ನು ಹಿಡಿದಿದ್ದು ಅಭಯ ಹಸ್ತವನ್ನು ಹೊಂದಿದೆ. ಎಡಭಾಗದ ಮೇಲು ಕೈಯಲ್ಲಿ ಗದೆಯಿದ್ದು ಕೆಳ ಕೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿದ್ದಾನೆ. ಕೆಳ ಭಾಗದಲ್ಲಿ ಗಣೇಶನ ವಾಹನವಾದ ಮೂಷಿಕನನ್ನು ಕಡೆಯಲಾಗಿದೆ. ಚಿಕ್ಕಕಾಲುಗಳು ಮತ್ತು ಚಿಕ್ಕ ಕೈಗಳನ್ನು ಹೊಂದಿದೆ. ಮಹಾರಾಯ ಎಂಬ ಹೆಸರಿಗೆ ತಕ್ಕಂತೆ ದೊಡ್ಡದಾದ ದುಂಡನೆಯ ಹೊಟ್ಟೆ ನೈಜವಾದ ಸೊಂಡಲಿನಿಂದ ಕೂಡಿದ ಆನೆಯ ಮುಖ, ಅಗಲವಾದ ಕಿವಿಗಳು ಹಾಗೂ ಕೋಣದಂತಹ ಕಿರೀಟಗಳು ಕಂಡುಬರುತ್ತದೆ. ಯಜ್ಞೋಪವೀತ, ಉದರಬಂಧ, ಕೇಯೂರ

ಇವುಗಳು ಗಣೇಶನನ್ನು ಅಲಂಕರಿಸಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯನ್ನು ಕೆತ್ತಲಾಗಿದೆ. ಇದೇ ರೀತಿಯ ಲಕ್ಷಣವನ್ನು ಹೊಂದಿರುವ ಮತ್ತೊಂದು ಗಣಪತಿಯು ದೇವಾಲಯದ ಬಲಭಾಗದಲ್ಲಿರುವ ಅಮ್ಮನವರ ಗುಡಿಯ ಬಲಭಾಗದಲ್ಲಿ ಇಡಲಾಗಿದೆ. ಸಪ್ತಮಾತೃಕೆಯರಾದ ಬ್ರಾಹ್ಮಿ ಮಹೇಶ್ವರಿ, ಕಾಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಇವರುಗಳನ್ನು ಕಡೆಯಲಾಗಿದೆ. ಇದರ ಜೊತೆಯಲ್ಲಿ ಗಣಪತಿ ಮತ್ತು ಬೈರವನನ್ನು ಕಡೆಯಲಾಗಿದೆ. ಸಾಮಾನ್ಯವಾಗಿ ಸ್ತ್ರೀ ದೇವತೆಗಳನ್ನು ಶಕ್ತಿ ದೇವತೆಗಳು ಎಂದು ಕರಯುತ್ತಾರೆ. ಇವರುಗಳು ಒಂದೊಂದು ದೇವರ ಶಕ್ತಿ ಎಂದು ಸಹ ಹೇಳುತ್ತಾರೆ. ಒಂದೇ ಪಟ್ಟಿಕೆಗಳಲ್ಲಿ ಇವುಗಳನ್ನು ಕಡೆಯಲಾಗಿರುತ್ತದೆ. ಒಂದು ಪೀಠದಲ್ಲಿ ಬಲಗಾಲನ್ನು ಕೆಳಗೆ ಇಳಬಿಟ್ಟು ಎಡಗಾಲನ್ನು ಮಡಚಿಕೊಂಡು ಕುಳತಂತೆ ಕಂಡು ಬಂದರೂ ಅವರದರ ಕೆಳಗೆ ಅವರದಾರ ಲಾಂಛನಗಳು ಕಂಡುಬರುತ್ತದೆ. ಸ್ತ್ರೀಯರ ಬಗೆಗಿನ ವಿಸ್ಮಯ ಭಯ ಹಾಗೂ ಶ್ರದ್ದೆಗಳು ಭಕ್ತಿಯ ಭಾವೈಕ್ಯತೆಯ ಸಂಕೇತವಾಗಿದೆ. ಇಂತಹ ಭಕ್ತಿಯ ಸ್ತ್ರೀಯರ ಮೇಲೆ ಇದ್ದಿತು. ಆದುದರಿಂದ ಇದರ ರಕ್ಷಣೆಗೆಂದೇ ಗಣಪತಿ, ಭೈರವ, ಸ್ಕಂದ ಇತ್ಯಾದಿ ದೇವತೆಗಳು ಸಪ್ತ ಮಾತೃಕೆಯರ ಜೊತೆಯಲ್ಲಿ ಇರುತ್ತಿದ್ದರು. ಇವರನ್ನು ಮಾತೃದೇವತೆಗಳ ಕುಮಾರರೆಂದು ಪುರಾಣಗಳು ತಿಳಸಿದೆ. ಮಹಿಷಮರ್ಧಿನಿ ಶಿಲ್ಪವು ಅಷ್ಟಭೂಜಗಳನ್ನು ಹೊಂದಿದ್ದಾಳೆ. ಕೈಯಲ್ಲಿ ಖಡ್ಗ, ಬಾಣ, ಘಂಟಾ, ಗುರಾಣಿ ಮತ್ತು ಬಟ್ಟಲುಗಳನ್ನು ಹಿಡಿದಿದ್ದಾಳೆ. ಶಿಲ್ಪದ ಕೆಳಗೆ ಕೋಣನನ್ನು ಕಡೆಯಲಾಗಿದೆ. ಕೋಣನ ಮೇಲಿರುವ ರಾಕ್ಷಸನ ತಲೆಯನ್ನು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಿಂದ ಭರ್ಜಿಯಿಂದ ಅವನ ಎಡೆಗೆ ಚುಚ್ಚಿದ್ದಾಳೆ. ಎಡಕಾಲನ್ನು ಮಹಿಷನ ಮೇಲೆ ಇಟ್ಟಿದ್ದಾಳೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದೆ ಪೀಠದಲ್ಲಿ ವ್ಯಾಘ್ರದ ಚಿತ್ರವನ್ನು ತೋರಿಸಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ.

ಸುಬ್ರಹ್ಮಣ್ಯನು ಮೂರು ತಲೆಯನ್ನು ಹೊಂದಿದ್ದು ನವಿಲಿನ ಮೇಲೆ ಕುಳತಿದ್ದಾನೆ. ಇವನು ನಾಲ್ಕು ಕೈಗಳನ್ನು ಹೊಂದಿದ್ದು ಕೈಯಲ್ಲಿ ಭರ್ಜಿ, ಪಾಶ ಹಾಗೂ ಬಹು ಬೀಜ ಫಲವನ್ನು ಹಿಡಿದಿದ್ದಾನೆ. ಬಲಗೈಯನ್ನು ಅಭಯ ಹಸ್ತವನ್ನು ತೋರಿಸಿದ್ದಾನೆ. ನವಿಲಿನ ಬಾಯಲ್ಲಿ ಹಣ್ಣಿನ ಗೊಂಚಲನ್ನು ಚಿತ್ರಿಸಿರುವುದು ಕಂಡುಬರುತ್ತದೆ. ನವಿಲು ಮತ್ತು ಸುಬ್ರಹ್ಮಣ್ಯನನ್ನು ಒಂದೇ ಅಳತೆಯಲ್ಲಿ ಕಡೆಯಲಾಗಿದೆ ಹಾಗೂ ಸುಬ್ರಹ್ಮಣ್ಯ ಮತ್ತು ನವಿಲನ್ನು ಬಹಳ ಅಲಂಕಾರಿಕವಾಗಿ ಕಡೆಯಲಾಗಿದೆ. ಅಲ್ಲಲ್ಲಿ ಮಣಿಸರಗಳನ್ನು ಸಹ ಕಡೆಯಲಾಗಿದೆ. ತಲೆಯ ಮೇಲೆ ಕಿರೀಟವನ್ನು ಸಹ ಕಡೆಯಲಾಗಿದೆ. ಸೂರ್ಯನು ಸಪ್ತ ಅಶ್ವಗಳ ಕೆತ್ತನೆಯಿರುವ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವುದು ಕಂಡುಬರುತ್ತದೆ. ಇವನು ಎರಡು ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದಾನೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇಕ್ಕೆಲಗಳಲ್ಲಿ

ಬಿಲ್ಲುಬಾಣವನ್ನು ಹಿಡಿದಿರುವ ಉಷೆ ಹಾಗೂ ಪ್ರತ್ಯುಷೆಯರನ್ನು ಕಡೆಯಲಾಗಿದೆ. ಸೂರ್ಯನಿಗೆ ಕಿರೀಟವನ್ನು ಹಾಕಿದ್ದು ಕಂಠಾಭರಣಗಳಿಂದ ಹಾಗೂ ಸೂಕ್ಷ್ಮ ಕೆತ್ತನೆಯಿರುವ ವಸ್ತ್ರದಿಂದ ಅಲಂಕರಿಸಿದ್ದಾನೆ.

ವೀರಭದ್ರನ ಶಿಲ್ಪವು ಚೇಳಿನ ಚಿತ್ರವಿರುವ ಪೀಠದ ಮೇಲೆ ಇದೆ. ಇದು ಕುಳಿತ ಭಂಗಿಯಲಿದ್ದು ಬಲಗಾಲನ್ನು ಕೆಳಗೆ ಇಳಿ ಬಿಟ್ಟು ಎಡಗಾಲನ್ನು ಮಡಿಚಿಕೊಂಡಿದೆ. ಇವನು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಖಡ್ಗ, ಡಮರುವನ್ನು ಹಿಡಿದಿದ್ದು ಮತ್ತೊಂದು ಕೈಯಲ್ಲಿ ರುಂಡವನ್ನು ಹಿಡಿದಿದ್ದಾನೆ. ವೀರಭದ್ರನನ್ನು ಕಂಠಿಹಾರಗಳಿಂದ ಅಲಂಕರಿಸಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯನು ಕೆತ್ತಲಾಗಿದೆ. ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಸಾಮಾನ್ಯವಾಗಿ ವೀರಭದ್ರನ ಶಿಲ್ಪವು ನಿಂತ ಭಂಗಿಯಲ್ಲಿರುತ್ತದೆ. ಆದರೆ ಇಲ್ಲಿ ಕುಳಿತ ಭಂಗಿಯಲ್ಲಿರುವುದು ಒಂದು ವಿಶೇಷ ಎನ್ನಬಹುದು. ಹಾಗೂ ಇಂತಹ ಶೀಲ್ಪಗಳು ದೊರೆಯುವುದು ಬಹಳ ವಿರಳ ಎಂದು ಹೇಳಬಹುದು. ಮೇಲೆ ತಿಳಿಸಿದ ಶಿಲ್ಪಗಳಲ್ಲದೆ ಎಲ್ಲಿ ಎರಡು ನಾಗರ ಕಲ್ಲುಗಳನ್ನು ಸಹ ಇಡಲಾಗಿದೆ.

ನವರಂಗವು ೯ ಅಂಕಣವಿದ್ದು ಪ್ರತಿಯೊಂದು ಅಂಕಣವು ಸಹ ಒಂದೊಂದು ರೀತಿಯ ಅಂಕಣವನ್ನು ಹೊಂದಿದೆ. ಮಧ್ಯದ ಭುವನೇಶ್ವರಿಯ ಮಧ್ಯದಲ್ಲಿ ನೃತ್ಯ ತಾಂಡವ ಶಿವನಿದ್ದಾನೆ. ಸುತ್ತಲು ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಠದಿಕ್ಪಾಲಕರನ್ನು ಕಡೆಯಲಾಗಿರುತ್ತದೆ. ನಂತರದ ಭುವನೇಶ್ವರಿಗಳನ್ನು ದಕ್ಷಿಣದ ಭಾಗದಿಂದ ಗಡಿಯಾರದ ಮುಳ್ಳು ಚಲಿಸುವಂತೆ ವಿವರಿಸಲಾಗಿದೆ. ಎರಡನೇ ಭುವನೇಶ್ವರಿಯಲ್ಲಿ ಅಂದರೆ ಸುಕನಾಶಿಯ ಮುಂಭಾಗದ ಅಂಕಣದಲ್ಲಿರುವ ಭುವನೇಶ್ವರಿಯಲ್ಲಿ ಹದಿನಾರು ಕೋನಗಳುಳ್ಳ ನಕ್ಷತ್ರಾಕಾರದ ವೃತ್ತಗಳು ಮತ್ತು ಅಷ್ಠ ದಿಕ್ಪಾಲಕರ ಶಿಲ್ಪಗಳನ್ನು ಸುತ್ತಲೂ ಕೆತ್ತಲಾಗಿದೆ. ನಾಲ್ಕನೆಯ ಭುವನೇಶ್ವರಿಯೂ ಪದ್ಮದ ಅಲಂಕರಣೆಯನ್ನು ಹೊಂದಿದ್ದು ಇವುಗಳಲ್ಲಿಯೂ ಸಹ ನಕ್ಷತ್ರಾಕಾರದ ತಳಭಾಗವನ್ನು ಹೊಂದಿದೆ. ಐದನೆಯ ಭುವನೇಶ್ವರಿಯು ಚೌಕಾಕಾರವಾದ ಒಂಭತ್ತು ಪಟ್ಟಿಕೆಗಳನ್ನು ಹೊಂದಿದ್ದು ಮಧ್ಯದಲ್ಲಿ ಶಿವನನ್ನು ಉಳಿದ ಭಾಗಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಅಷ್ಠದಿಕ್ಪಾಲಕರನ್ನು ಕಡೆಯಲಾಗಿದೆ. ಇಲ್ಲಿ ಅಷ್ಠದಿಕ್ಪಾಲಕರನ್ನು ಸಣ್ಣದಾಗಿ ಕಡೆಯಲಾಗಿದೆ. ಅದರ ವಾಹನಗಳನ್ನು ದಪ್ಪನಾಗಿ ಕಡೆಯಲಾಗಿದೆ.

ಆರನೆಯ ಭುವನೇಶ್ವರಿಯ ಕೆಳ ಭಾಗವು ನಕ್ಷತ್ರಾಕಾರವನ್ನು ಹೊಂದಿದ್ದು ಒಳಭಾಗದಲ್ಲಿ ವೃತ್ತಾಕಾರವನ್ನು ಹೊಂದಿದೆ. ಮಧ್ಯಭಾಗದಲ್ಲಿ ಪದ್ಮ ಮಂಡಲದ ಪಿತಾನವನ್ನು ಹೊಂದಿದೆ. ಏಳನೆಯ ಭುವನೇಶ್ವರಿಯು ಪದ್ಮ ಮಂಡಲದ ಪಿತಾನವನ್ನು ಹೊಂದಿದ್ದು ಕೆಳಭಾಗವು

ನಕ್ಷತ್ರಾಕಾರವನ್ನು ಹೊಂದಿದ್ದು ಇಳ ಭಾಗಗಳಲ್ಲಿ ಅಷ್ಠಮುಖಗಳನ್ನು ಹೊಂದಿರುವ ವೃತ್ತವನ್ನು ಹೊಂದಿದೆ ಎಂಟು ಮತ್ತು ಒಂಭತ್ತನೆಯ ಭುವನೇಶ್ವರಿಯ ವೃತ್ತ ಮತ್ತು ಚೌಕಾಕಾರದ ಒಳ ವಿನ್ಯಾಸಗಳನ್ನು ಹೊಂದಿದ್ದು ಮಧ್ಯದಲ್ಲಿ ಇಳಿ ಬಿಟ್ಟ ಕಮಲದ ಮೊಗ್ಗನ್ನು ಕಡೆಯಲಾಗಿದೆ. ಇಲ್ಲಿಯ ನಂದಿ ಮಂಟಪವು ದೇವಾಲಯ ನಿರ್ಮಾಣವಾದ ಕಾಲದಲ್ಲಿಯೇ ನಿರ್ಮಾಣವಾಗಿದ್ದು ಕೆಲವು ಭಾಗಗಳು ಮಾತ್ರ ಜೀರ್ಣೋದ್ದಾರವಾಗಿದೆ. ಮಧ್ಯದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ನಂದಿಯ ಶಿಲ್ಪವಿದೆ. ಇದನ್ನು ಸುಂದರವಾಗಿ ಅಲಂಕರಿಸಲಾಗಿದೆ. ಇದನ್ನು ಗರ್ಭಗುಡಿಯಲ್ಲಿರುವ ಲಿಂಗಕ್ಕಕೆ ಎದುರಾಗಿ ಇಡಲಾಗಿದೆ. ಇಲ್ಲಿಯ ದ್ವಾರಬಂಧವು ಸಹ ಅಲಂಕರಣವಾಸಗಿದ್ದು ಐದು ಅಲಂಕರಣ ಪಟ್ಟಿಕೆಯಿಂದ ಕೂಡಿದೆ ಒಂದರಲ್ಲಿ ಅರೆಗಂಬಗಳನ್ನು ಕಡೆಯಲಾಗಿದೆ. ಮತ್ತೆರಡರಲ್ಲಿ ಸಣ್ಣದಾದ ಜಾಲಾಂಧ್ರವನ್ನು ಊರ್ದ್ವಮುಖನಾಗಿ ಕೆತ್ತಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ಸುಂದರವಾಗಿ ಕಡೆಯಲಾಗಿರುತ್ತದೆ. ನಂದಿ ಮಂಟಪದಿಂದ ನವರಂಗಕ್ಕೆ ಪ್ರವೇಶ ದ್ವಾರವಿದ್ದು ಇಲ್ಲಿಯೂ ಸಹ ಸುಕನಾಶಿಯ ರೀತಿಯಲ್ಲಿ ಚಿಕ್ಕದಾದ ಒಂದು ಅಂಕಣವಿದೆ. ನವರಂಗಕ್ಕಿರುವ ದ್ವಾರಬಂಧವು ಏಳು ಅಂಕಣ ಪಟ್ಟಿಕೆಯನ್ನು ಹೊಂದಿದ್ದು ಒಂದರಲ್ಲಿ ಅರೆಗಂಬಗಳನ್ನು ಕಡೆಯಲಾಗಿದೆ. ಉಳಿದವುಗಳನ್ನು ಹೂ ಬಳ್ಳಿಗಳಿಂದ ಅಲಂಕರಿಸಿದ್ದಾರೆ. ಲಲಾಟಬಿಂಬದಲ್ಲಿ ಉಮಾ ಮಹೇಶ್ವರರು ಸುಖಾನಾಸದಲ್ಲಿ ಕುಳಿತಿದ್ದಾರೆ. ಕೆಳ ಭಾಗದಲ್ಲಿ ಶೈವ ದ್ವಾರ ಪಾಲಕರನ್ನು ಕಡೆಯುಲಾಗಿದೆ. ದ್ವಾರಪಾಲಕರನ್ನು ಹೆಚ್ಚಿನ ಅಲಂಕಾರದಿಂದ ಮಾಡಲಾಗಿದೆ. ಮಂಟಪದ ಸುತ್ತಲೂ ಜಾಲಾಂಧ್ರಗಳನ್ನು ಹೊಂದಿದೆ. ಜಾಲಾಂಧ್ರಗಳಿಗೆ ಹೊಂದಿಕೊಂಡಂತೆ ಕಂಬಗಳಿದ್ದು ಇವುಗಳಿಗೆ ಹೊಂದಿಕೊಂಡಂತೆ ಕಕ್ಷಾಸನವು ಇದೆ. ಬಹುಶಃ ನಂತರದ ಕಾಲದಲ್ಲಿ ಇದು ಸೇರ್ಪಡೆಯಾಗಿರಬಹುದು. ಈ ರೀತಿಯ ನಂದಿ ಮಂಟಪಗಳನ್ನು ಬಸರಾಳು ಹಾಗೂ ಅರಸೀಕೆರೆಯ ದೇವಾಲಗಳಲ್ಲಿ ಕಾಣಬಹುದಾಗಿದೆ. ಮೂಲ ದೇವಾಲಯದ ಮುಖ್ಯದ್ವಾರವು ದಕ್ಷಿಣಕ್ಕಿದೆ. ಇಲ್ಲಿನ ದ್ವಾರಬಂಧದಲ್ಲಿ ಐದು ಶಾಖೆಗಳಿದ್ದು ಇವುಗಳಲ್ಲಿ ಒಂದನ್ನು ಅರೆಗಂಬಗಳಿಂದ ಕಡೆಯಲಾಗಿದೆ. ಉಳಿದವುಗಳನ್ನು ಲತಾಬಳ್ಳಿ ಸುರಳಿಗಳಿಂದ ಅಲಂಕರಿಸಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಕೆತ್ತನೆಗಳಿವೆ. ಮುಂಭಾಗದಲ್ಲಿ ಹೊಯ್ಸಳರ ಕಾಲದ 32 ಅಲಗುಗಳಿಂದ ಕಡೆಯಲಾಗಿರುವ ಎರಡು ಕಂಬಗಳಿದ್ದು ಇಲ್ಲಿ ಮಂಟಪದ ರಚನೆಯನ್ನು ಮಾಡಿದ್ದಾರೆ. ಇದರ ಭುವನೇಶ್ವರಿಯಲ್ಲಿ ಪದ್ಮಮಂಡಲ ವಿತಾನವನ್ನು ಕೆತ್ತಲಾಗಿದೆ. ಭುವನೇಶ್ವರಿಯ ಉತ್ತರ ಭಾಗದ ಕೆಳ ಪಟ್ಟಿಕೆಯಲ್ಲಿ ಹಾಗೂ ದೇವಾಲಯದ ಬಲಭಾಗದ ಭಿತ್ತಿಯಲ್ಲಿ ಶಾಸನವನ್ನು ಕೆತ್ತಲಾಗಿದೆ.

ದೇವಾಲಯದ ಮೂಲ ಭಾಗವನ್ನು ಹೊಯ್ಸಸಳರ ಕಾಲದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ನೈರತ್ಯ ಭಾಗದಲ್ಲಿ ಪಾರ್ವತಿಯ ಗುಡಿ ಇದೆ. ಇಲ್ಲಿ ಚತುರ್ಭುಜೆಯರಾದ

ಪಾರ್ವತಿಯ ಶಿಲ್ಪವಿದೆ. ಸಾಮಾನ್ಯವಾಗಿ ಸ್ತ್ರೀ ದೇವತೆಗಳಿಗೆ ಹೊಯ್ಸಳರ ಕಾಲದಲ್ಲಿ ಪ್ರತ್ಯೇಕವಾಗಿ ಗುಡಿಯನ್ನು ಕಟ್ಟುವ ಪದ್ಧತಿ ಇರಲಿಲ್ಲ. ಇದು ವಿಜಯನಗರ ಅರಸರ ಕಾಲದಲ್ಲಿ ರೂಢಿಯಲ್ಲಿದ್ದಿತು. ದೇವಾಲಯದ ಮುಂಭಾಗದಲ್ಲಿ ಪಾತಾಳಾಂಕಣವಿದ್ದು ಇಲ್ಲಿ ಹದಿನಾರು ಸ್ವತಂತ್ರ್ಯ ಅಂಕಣಗಳಿವೆ. ಇಲ್ಲಿ ಎರಡು ಕಂಬಗಳು ವಿಶೇಷವಾಗಿದ್ದು ಇವು ವಿಜಯನಗರ ಕಾಲದ ವಾಸ್ತು ಲಕ್ಷಣಗಳನ್ನು ಹೊಂದಿದೆ. ಈ ಎರಡು ಕಂಬಗಳು ನಾಲ್ಕು ಮೂಲೆಗಳಲ್ಲು ಉಪಕಂಬಗಳನ್ನು ಹೊಂದಿದೆ. ಇಲ್ಲಿ ದೇವಾಲಯಕ್ಕಕೆ ಹೋಗಲು ಸೋಪಾನವಿದ್ದು ಎರಡು ಬದಿಯಲ್ಲೂ ಹೊಯ್ಸಳರ ಕಾಲದ ಎರಡು ಗಜಗಳ ಬಿಡಿಶಿಲ್ಪಗಳಿದೆ. ಇವುಗಳನ್ನು ಸೋಪುಗಲ್ಲಿನಿಂದ ಮಾಡಲಾಗಿದ್ದು ಮೂಲ ದೇವಾಲಯದ ಮುಂದಿದ್ದ ಇವುಗಳನ್ನು ತಂದು ಇಲ್ಲಿ ಇಡಲಾಗಿದೆ. ದೇವಾಲಯಕ್ಕೆ ಮುಖದ್ವಾರ ಮಂಟಪವಿದ್ದು ಇದು ವಿಜಯನಗರ ಅರಸರ ಕಾಲದಲ್ಲಿ ಕಟ್ಟಲಾಗಿದೆ. ಇದನ್ನು ಒರಟು ಗ್ರಾನೈಟ್ ಶಿಲಕೆಯಿಂದ ಕಟ್ಟಲಾಗಿದ್ದು ಸುಮಾರು ಆರು ಅಡಿ ಎತ್ತರದ ಒಳಜಗತಿಯನ್ನು ಹೊಂದಿದೆ. ಇಲ್ಲಿಯ ಕಂಬಗಳ ಮೇಲೆ ವಿವಿಧ ಮಾದರಿಯ ವಾಸ್ತುಶಿಲ್ಪಗಳಿವೆ. ಮೇಲ್ಕಭಾಗದ ಚಪ್ಪಡಿಯಲ್ಲಿ ಹುಲಿಯು ಹಸುವನ್ನು ಕೊಂದಿರುವುದು ಹಾಗೂ ಸೂರ್ಯ ಮತ್ತು ಅದರ ಪಕ್ಕದಲ್ಲಿ ಸರ್ಪವನ್ನು ಕೆತ್ತಲಾಗಿದೆ. ಬಹುಶಃ ಇದು ಸೂರ್ಯಗ್ರಹಣವನ್ನು ತೋರಿಸುವ ಶಿಲ್ಪವಾಗಿದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಸೂರ್ಯಗ್ರಹಣ ಮತ್ತು ಚಂದ್ರಗ್ರಹಣದ ಪರಿಕಲ್ಪನೆಯು ಸೂರ್ಯ ಚಂದ್ರರನ್ನು ಹಾವು ನುಂಗುತ್ತದೆ ಎಂದು ನಂಬಲಾಗಿತ್ತು. ದೇವಾಲಯದ ಮಧ್ಯದಲ್ಲಿ ಸುಮಾರು ಐದು ಅಡಿ ಎತ್ತರದ ಶೈವ ದ್ವಾರಪಾಲಕರ ಬಿಡಿಶಿಲ್ಪಗಳಿವೆ.

### ಚಂದ್ರಮೌಳೇಶ್ವರ ದೇವಾಲಯ

ಈ ದೇವಾಲಯವು ಸದಾಶಿವ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಹಳೆಯ ಪುಷ್ಕರಣಿ (ಕೊಳ) ದಡದಲ್ಲಿದೆ. ಇದು ಪೂರ್ವಾಭಿಮುಖವಾಗಿದ್ದು ದೇವಾಲಯದ ಕೆಲವು ಭಾಗಗಳು ಶಿಥಿಲವಾಗಿದೆ. ಇದು ದ್ವಿಕೂಟಚಲ ದೇವಾಲಯವಾಗಿದೆ. (ಚಿತ್ರ ಸಂಖ್ಯೆ-33) ಇದನ್ನು ಸಂಪೂರ್ಣವಾಗಿ ಸೋಪುಗಲ್ಲಿನಿಂದ ಕಟ್ಟಲಾಗಿದೆ. ಇದರ ಮೂಲ ಭಿತ್ತಿಯು ಶಿಥಿಲವಾಗಿದ್ದು ಇತ್ತೀಚೆಗೆ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲಾಗಿದೆ. ಅದು ಸಹ ಶಿಥಿಲವಾಗಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಪೀಠದ ಮೇಲೆ ಅರ್ಧ ಅಡಿ ಎತ್ತರದ ಶಿವಲಿಂಗವಿದೆ. ಇದಕ್ಕೆ ಹೊಂದಿಕೊಂಡಂತೆ ತೆರೆದ ಸುಕನಾಸಿಯಿದೆ. ಇಲ್ಲಿ ಸುಮಾರು ಮೂರು ಅಡಿ ಎತ್ತರದ ಗಣಪತಿ, ಎರಡು ಅಡಿ ಎತ್ತರದ ಭೈರವ ಶಿಲ್ಪವಿದೆ. ನವರಂಗದ ಮೇಲ್ಭಾಗದಲ್ಲಿ ಎರಡು ಅಡಿ ಎತ್ತರದ ನಂದಿ ಶಿಲ್ಪವಿದೆ. ನವರಂಗದಲ್ಲಿ 5.5 ಅಡಿ ಎತ್ತರದ ಹನ್ನೆರಡು ಸ್ವತಂತ್ರ್ಯ ಕಂಬಗಳಿವೆ. ಇದು

ಒಟ್ಟು 20 ಅಂಕಣವಿದ್ದು ಪ್ರತಿಯೊಂದು ಅಂಕಣವು ಒಂದೇ ಅಳತೆಯನ್ನು ಹೊಂದಿದೆ. ಇವು ಸುಮಾರು ಐದು ಅಡಿ ಉದ್ದ ಐದು ಅಡಿ ಅಗಲವನ್ನು ಹೊಂದಿದೆ. ದಕ್ಷಿಣ ಭಾಗದಲ್ಲಿ ಒಂದು ಗರ್ಭಗುಡಿಯಿದ್ದು ಇದರಲ್ಲಿ ಯಾವುದೇ ಶಿಲ್ಪವಿರುವುದಿಲ್ಲ. ಇದಕ್ಕೆ ಹೊಂದಿಕೊಂಡಂತೆ ಗರ್ಭಗುಡಿಯಷ್ಟೇ ಅಳತೆಯ ಸುಕನಾಸಿಯಿದೆ. ನವರಂಗದ ಮಧ್ಯದ ಅಂಕಣದ ಸುತ್ತ ಒಟ್ಟು 9 ಅಂಕಣದ ಭುವನೇಶ್ವರಿಗಳಲ್ಲಿ ಪದ್ಮದ ಕೆತ್ತನೆಯನ್ನು ಕಡೆಯಲಾಗಿದೆ. ಎಲ್ಲಾ ಭುವನೇಶ್ವರಿಗಳಲ್ಲಿಯೂ ಸಾಮಾನ್ಯವಾಗಿ ಒಂದೇ ತೆರನಾದ ಪದ್ಮದ ಅಲಂಕರಣವನ್ನು ಹೊಂದಿದೆ. ನವರಂಗದ ಉತ್ತರ ಭಾಗದ ಸುಮಾರು ಮೂರು ಅಂಕಣದಷ್ಟು ಛಾವಣಿಯು ಕುಸಿದಿದೆ. ವಾಯುವ್ಯ ಭಾಗದಲ್ಲಿ ಸುಮಾರು 3 ಅಡಿ ಎತ್ತರದ ಶಿವಲಿಂಗವಿದೆ. ಇದರ ಪಕ್ಕದಲ್ಲಿ ಹೆಚ್ಚಿನ ಅಲಂಕರಣವಿಲ್ಲದೆ ಒಂದು ಅಡಿ ಎತ್ತರದ ನಂದಿ ಶಿಲ್ಪವಿದೆ. ದೇವಾಲಯದ ಎರಡು ಗರ್ಭಗುಡಿ ಹಾಗೂ ಸುಕನಾಶಿಗಳ ದ್ವಾರಬಂಧಗಳಲ್ಲಿ ಯಾವುದೇ ರೀತಿಯ ಅಲಂಕರಣವಿಲ್ಲದೆ ಸಾಮಾನ್ಯ ಲಕ್ಷಣವನ್ನು ಹೊಂದಿದೆ. ಇಲ್ಲಿ ಯಾವುದೇ ರೀತಿಯ ಶಿಲ್ಪಗಳು ಇಲ್ಲದಿದ್ದರೂ ವಾಸ್ತು ರಚನೆಯು ಮಾತ್ರ ಚೆನ್ನಾಗಿದೆ. ಈ ದೇವಾಲಯವನ್ನು ಯಾವ ಕಾಲದಲ್ಲಿ ನಿರ್ಮಿಸಿದ್ದು ಎಂಬುದನ್ನು ತಿಳಿಯಲು ಇದಕ್ಕೆ ಸಂಬಂಧಿಸಿದ್ದ ಶಾಸನಗಳಿಲ್ಲ ಆದರೆ ಇದರ ವಾಸ್ತು ಲಕ್ಷಣವನ್ನು ಅವಲೋಕಿಸಿದಾಗ ಇದು ಪ್ರಾಯಶಃ ಪೂರ್ವ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರಬಹುದು. ದೇವಾಲಯವು ಎತ್ತರದಲ್ಲಿ ಕುಳ್ಳಾಗಿದ್ದು ಹಾಗೂ ನವರಂಗದಲ್ಲಿರುವ ಕಂಬಗಳು ಕೆಳಭಾಗ ಚೌಕಾಕಾರವಾಗಿದ್ದು ಮೇಲ್ಭಾಗವು ದುಂಡಾಗಿದೆ. ಯಾವುದೇ ಲಕ್ಷಣಗಳಿಲ್ಲ ಈ ಎರಡು ವಾಸ್ತು ಲಕ್ಷಣಗಳನ್ನು ಗಂಗರ ಕಾಲದ ವಾಸ್ತು ಶೈಲಿಯ ಹೋಲಿಕೆ ಕಂಡುಬಂದರೂ ದೇವಾಲಯದ ನಿರ್ಮಾಣಕ್ಕೆ ಬಳಸಿರುವ ಮಧ್ಯಮ ಸೋಪುಗಲ್ಲು ಆದುದರಿಂದ ಇದು ಪೂರ್ವ ಹೊಯ್ಸಳ ಕಾಲದಲ್ಲಿ ನಿರ್ಮಿಸಿರಬಹುದು. ಈ ರೀತಿಯ ಕಂಬಗಳು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ಕೆಲವೊಂದು ದೇವಾಲಯಗಳನ್ನು ಉದಾಹರಣೆ ಸಹಿತ ನೀಡಬಹುದು. ಬಹುಶಃ ಇಲ್ಲಿ ಆಡಳಿತ ನಡೆಸುತ್ತಿದ್ದ ಹೊಯ್ಸಳರು ಪೂರ್ವ ಭಾಗದಲ್ಲಿ ಅಂದರೆ ಲಕ್ಷ್ಮಿನರಸಿಂಹ ಮತ್ತು ಸದಾಶಿವ ದೇವಾಲಯವನ್ನು ನಿರ್ಮಿಸುವುದಕ್ಕೂ ಮುಂಚಿತವಾಗಿಯೇ ನಿರ್ಮಿಸಲಾಗಿದೆ ಎಂದು ಹೇಳಬಹುದನ್ನ

**ಚನ್ನಕೇಶವ ದೇವಾಲಯ–ಆನೆಕೆರೆ**

ಚನ್ನರಾಯಪಟ್ಟಣದಿಂದ ಸುಮಾರು ಮೂರು ಕಿಲೋ ಮೀಟರ್ ದೂರದಲ್ಲಿ ಹಾಸನಕ್ಕೆ ಹೋಗುವ ಮಾರ್ಗದ ಕಡೆಗೆ ಅನೆಕೆರೆ ಇದೆ. ಅನೆಕೆರೆ ಅಥವಾ ಅನೆಗಳ ಕೆರೆ ಮತ್ತು ಶಾಸನಗಳಲ್ಲಿ ಕೇಶವಪುರ ಎಂದು ಕರೆಯಲಾಗಿದೆ. ಈ ಗ್ರಾಮದ ಮಧ್ಯದಲ್ಲಿ ಎತ್ತರವಾದ

ದಿಣ್ಣೆಯ ಮೇಲೆ ಕೇಶವ ದೇವಾಲಯವಿದೆ. (ಚಿತ್ರ ಸಂಖ್ಯೆ–34) ಈ ದೇವಾಲಯವು ಪೂರ್ವಾಭಿಮುಖವಾಗಿ ನಿರ್ಮಿಸಲ್ಪಟ್ಟಿದೆ. ಕೇಶವ ದೇವಾಲಯಕ್ಕೆ ಆ ಕಾಲದಲ್ಲಿಯೇ ನಿರ್ಮಿಸಿದ ಪ್ರಾಕಾರ ಗೋಡೆಯಿದ್ದು ಸುತ್ತಲೂ ಒಳಭಾಗದಲ್ಲಿ ಮಂಟಪವನ್ನು ಹೊಂದಿಕೊಂಡಂತೆ ಪೂರ್ವಾಭಿಮುಖವಾಗಿ ದ್ವಾರ ಮಂಟಪವು ಹೊರಚಾಚಿಕೊಂಡಿದೆ. (ಚಿತ್ರ 35, 36) ಈ ದೇವಾಲಯವು ಕ್ರಿ.ಶ. 1191ರಲ್ಲಿ ನಿರ್ಮಣವಾಗಿರಬಹುದೆಂದು ಹೇಳಲಾಗಿದೆ. ಏಕೆಂದರೆ ಆ ಕಾಲದ ಶಾಸನ ಒಂದರಲ್ಲಿ ಇಲ್ಲಿನ ಭೈರಪ್ಪನಾಯಕ ಎಂಬುವವನು ಹಲವಾರು ದೇವಾಲಯಕ್ಕೆ ಸಂಬಂಧಿಸಿದ ಜೀರ್ಣೋದ್ಧಾರ ಕಾರ್ಯವನ್ನು ಮಾಡಿಸಿದನೆಂದು ತಿಳಿದುಬರುತ್ತದೆ. ಆದುದರಿಂದಲೇ ದೇವಾಲಯವು ಕ್ರಿ.ಶ. 1191ರ ಮೊದಲೇ ನಿರ್ಮಾಣವಾದಂತೆ ತಿಳಿದುಬರುತ್ತದೆ. [15, 16]ಆನೆಕೆರೆಯ ಕೇಶವ ದೇವಾಲಯವು ಚನ್ನರಾಯಪಟ್ಟದ ಕೇಶವ ದೇವಾಲಯದಂತೆಯೇ ಒಂದು ಸರಳವಾದ ಹಾಗೂ ನಿರಾಡಂಬರವಾದ ದೇವಾಲಯವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಚನ್ನಕೇಶವ ಶಿಲ್ಪವಿದೆ. ಮೇಲ್ಭಾಗದಲ್ಲಿ ಸುಂದರವಾದ ಭುವನೇಶ್ವರಿ ಇದೆ. ಇದರ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಕೇಶವನ ಉಬ್ಬುಶಿಲ್ಪವಿದೆ.

ಸುಕನಾಸ ಅಂಕಣದಲ್ಲಿ ಯಾವುದೇ ಶಿಲ್ಪವಾಗಲಿ ಕಂಡು ಬರುವುದಿಲ್ಲ. ಗರ್ಭಗೃಹದ ಮಾದರಿಯಲ್ಲಿಯೇ ಸುಕನಾಸಿಯ ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ಸುಂದರವಾಗಿ ಕಡೆಯಲಾಗಿದೆ. ಸುಕನಾಸಿಯ ದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ನವರಂಗದ ಭಾಗದಲ್ಲಿ ಮಧ್ಯದಲ್ಲಿ ನಾಲ್ಕು ಹೊಯ್ಸಳರ ಶೈಲಿಯ ಕಂಬಗಳಿವೆ. (ಚಿತ್ರ ಸಂಖ್ಯೆ 37, 38) ಗೋಡೆಯ ಸುತ್ತಲೂ ಸುಮಾರು 12 ಗೋಡೆ ಕಂಬಗಳಿವೆ. ಮುಂಭಾಗದಲ್ಲಿ ಮುಖಮಂಟಪವಿದ್ದು ಮುಖಮಂಟಪಕ್ಕೆ ಪ್ರವೇಶದ್ವಾರವನ್ನು ಸೇರಿಸಲಾಗಿರುತ್ತದೆ. ಇಲ್ಲಿಯೂ ಸಹ ಎರಡು ಕಂಬಗಳಿವೆ. ಏರು ವಿನ್ಯಾಸದಲ್ಲಿ ಅಧಿಷ್ಠಾನ, ಅಧಿಷ್ಠಾನದಲ್ಲಿ ಉಪಾನ, ಕುಮುದ, ಚಾಚು ಕುಮುದ, ದಂಥಪಕ್ತಿ ಹಾಗೂ ಜಗತಿಗಳನ್ನು ಹೊಂದಿದ್ದು ಭಿತ್ತಿಯು ನಿರಾಡಂಬರವಾದ ಹಾಗೂ ತೆಳು ಕಳಶಗಳನ್ನು ಹೊಂದಿದೆ. ದೇವಾಲಯದ ಹೊರ ಮೂಲೆಗಳಲ್ಲಿ ಮಾತ್ರ ತುಸು ದಪ್ಪವೆನಿಸಿದ ಆಕರ್ಷಕ ಕಂಬಗಳನ್ನು ಹೊಂದಿದೆ. ಭಿತ್ತಿಯ ಮೇಲ್ಭಾಗದಲ್ಲಿ ಕಪೋತವಿದ್ದು ಗರ್ಭಗೃಹದ ಮೇಲ್ಭಾಗಕ್ಕೆ ತ್ರಿಕಾಲ ನಿರಾಡಂಬರ ದ್ರಾವಿಡ ಮಾದರಿಯ ಅಮೃತ ಕಳಸದ ಶಿಖರವಿವೆ. ಅಮೃತಕಳಸ ಹೆಚ್ಚು ಪ್ರಮುಖವಾದದ್ದು ಆಗಿದೆ, ಶಿಖರದ ಮೊದಲನೆಯ ಭಾಗಕ್ಕೆ ಅನುಗುಣವಾಗಿಯೇ ಭಿತ್ತಿಯ ಹಾಗೂ ಮುಖಮಂಟಪದವರೆಗೂ ಹಾರದ ನಿರ್ಮಿತಿ ಇದೆ. ಇನ್ನೂ ಸುಕನಾಸಿಯ ಎರಡನೆಯ ಭಾಗಕ್ಕೆ ಸೀಮಿತವಾಗಿದ್ದು ಹೊರ ಚಾಚಿದ ಶಾಲ ಮಾದರಿಯ ವಿನ್ಯಾಸವನ್ನು ಹೊಂದಿದೆ. ಶಿಖರದ ತಲಗಳಲ್ಲಿ ಪಂಥ ಪಂಕ್ತಿಗಳು ಇಲ್ಲಿ

ಬಂದಿರುವುದು ವಿಶೇಷವೆನಿಸುತ್ತದೆ. ಆದರೆ ಯಾವುದೇ ತರಹದ ಅಲಂಕಾರಿಕ ಕೆತ್ತನೆಗಳು ಇಲ್ಲದೆ ಇರುವುದು ವಿಶೇಷವೆನ್ನಬಹುದು. ಈ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದ್ದು ಇದಕ್ಕೆ ಮಂಟಪವನ್ನು ಸಹ ಸೇರಿಸಲಾಗಿದೆ.

ಪ್ರಾಕಾರಕ್ಕೆ ಪಶ್ಚಿಮ ದಿಕ್ಕಿನಲ್ಲಿ 10 ಕಂಬಗಳಿವೆ. ಉತ್ತರ ದಿಕ್ಕಿಗೆ 10 ಕಂಬಗಳಿವೆ ಹಾಗೂ ದಕ್ಷಿಣ ದಿಕ್ಕಿಗೆ 11 ಕಂಬಗಳೀವೆ ಪ್ರಾಕಾರಕ್ಕೆ ಹೊಂದಿಕೊಂಡಂತೆ ಮತ್ತೊಂದು ಮಂಟಪವನ್ನು ಸಹ ಸೇರಿಸಲಾಗಿದೆ. ಒಟ್ಟಾರೆ ಆನೆಕೆರೆಯ ಈ ದೇವಾಲಯವನ್ನು ನೋಡಿದರೆ ಇದು ಕೂಡ ಸುಮಾರು ಕ್ರಿ.ಶ. 1180ರ ಆಸುಪಾಸಿನಲ್ಲಿಯೇ ನಿರ್ಮಾಣವಾಗಿದ್ದು 1191ರಲ್ಲಿ ಕೆಲವು ಜೀರ್ಣೋದ್ಧಾರ ಕೆಲಸಗಳು ನಡೆದಿರಬಹುದೆಂದು ಹೇಳಬಹುದಾಗಿದೆ. ಇದಕ್ಕೆ ಪೂರಕವಾಗಿ ಚನ್ನರಾಯಪಟ್ಟಣದ ಕೇಶವ ದೇವಾಲಯವನ್ನು ತೆಗೆದುಕೊಳ್ಳಬಹುದು. ಈ ದೇವಾಲಯದ ಗರ್ಭಗೃಹದಲ್ಲಿದ್ದ ಕೇಶವನ ಮೂಲಶಿಲ್ಪ ಈಗ ಉಳಿದುಕೊಂಡು ಬಂದಿಲ್ಲ. ಆದರೆ ಅದರ ಸ್ಥಾನದಲ್ಲಿ ಕಳೆದ ಶತಮಾನದ ಕೊನೆಯ ದಶಕದಲ್ಲಿ ನಿರ್ಮಾಣಮಾಡಿದ ಜನಾರ್ಧನನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ.

## ಚೆನ್ನರಾಯಪಟ್ಟಣ ನಗರದ ಚೆನ್ನಕೇಶವ ಮತ್ತು ಶಾಂತಲೇಶ್ವರ ದೇವಾಲಯಗಳು

ಚೆನ್ನರಾಯಪಟ್ಟಣ ಪಟ್ಟಣದ ನವರಂಗ ಮಧ್ಯಭಾಗದಲ್ಲಿರುವ ಚೆನ್ನಕೇಶವ ದೇವಾಲಯ ಮತ್ತು ಶಾಂತಲೇಶ್ವರ ದೇವಾಲಯಗಳು ಕ್ರಿ.ಶ.1132 ರಲ್ಲಿ ನಿರ್ಮಾಣವಾಗಿದೆ. ಇವುಗಳಲ್ಲಿ ಚೆನ್ನಕೇಶವ ದೇವಾಲಯವು ವಿಶಾಲವಾದ ದೇವಾಲಯವಾಗಿದ್ದು ಅತ್ಯಂತ ಸರಳ ವಾಸ್ತು ವಿನ್ಯಾಸವನ್ನು ಹೊಂದಿದೆ. ದೇವಾಲಯವು ಪೂರ್ವಾಭಿಮುಖವಾಗಿದೆ. ಸರಳ ದಂಥಪಕ್ತಿ ಇರುವ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಇದೊಂದು ದ್ರಾವಿಡ ಮಾದರಿಯ ಏಕಕೂಟ ಅಮೃತಕಳಶ ಮಾದರಿಯ ದೇವಾಲಯವಾಗಿದೆ. (ಚಿತ್ರ ಸಂಖ್ಯೆ 39) ತಳವಿನ್ಯಾಸದಲ್ಲಿ ಚತುರಸವಾದ ವಿನ್ಯಾಸವನ್ನು ಹೊಂದಿದ್ದು, ಹಲವಾರು ಹೊಸ ಮತ್ತು ಒಳಚಾಚುಗಳಿಂದ ಕೂಡಿದೆ. ಈ ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದ್ದು ಮುಖಮಂಟಪದ ಭಾಗಕ್ಕೆ ನಂತರದಲ್ಲಿ ಹಲವಾರು ಜೋಡಣೆಗಳನ್ನು ಸೇರಿಸಲಾಗಿದೆ. ಏರುವಿನ್ಯಾಸದಲ್ಲಿ ಉಪಾನ, ಕಪೋತ, ಕುಮುದ, ಪ್ರತಿ, ದಂಥಪಂಕ್ತಿ, ಜಗತಿಗಳನ್ನು ಹೊಂದಿದೆ. ಭಿತ್ತಿಯಲ್ಲಿ ಯಾವುದೇ ತರಹದ ಶಿಲ್ಪಗಳು ಅಥವಾ ಕೋಷ್ಠ ಪಂಜರ ವಿನ್ಯಾಸಗಳಾಗಲಿ ಕಂಡುಬರುವುದಿಲ್ಲ. ಭಿತ್ತಿಯ ಹೊರಚಾಚುಗಳಿಗೆ ಅನುಗುಣವಾಗಿ ನೀಳವಾದ ಕಂಬಗಳು ಕಂಡುಬರುತ್ತವೆ. ದೇವಾಲಯದ ಒಳಚಾಚುವಿನ ಭಾಗದಲ್ಲಿ ಮಾತ್ರ ದಪ್ಪವಾಗಿರುವ ಅಲಂಕಾರಿಕ ಕಂಬಗಳು ಕೆತ್ತಲ್ಪಟ್ಟಿದೆ. ದೇವಾಲಯದ ಶಿಖರ ಮತ್ತು ಸುಕನಾಸಿಯೂ ಅತ್ಯಂತ

ಸರಳ ನಿರಾಡಂಬರ ಕೆತ್ತನೆಗಳಿಂದ ಕೂಡಿದ್ದು, ಸ್ತೂಪಿಯ ಮೇಲೆ ಅಮೃತ ಕಳಶ ಜೋಡಣೆ ಕಂಡುಬರುತ್ತದೆ. ದೇವಾಲಯದ ಒಳಭಾಗದಲ್ಲಿ ವಿಶೇಷವಾಗಿ ನವರಂಗದಲ್ಲಿ ನಾಲ್ಕು ಸುಂದರ ಕಂಬಗಳಿವೆ. ಇವು ಸಹ ಲೇತ್ ಯಂತ್ರದಲ್ಲಿ ತಯಾರಿಸಿದ ಕಂಬಗಳೇ ಆಗಿದ್ದು ಕಂಬವು ಕಂಠದಲ್ಲಿ ಕುಂಭ ಮಾದರಿಯ ಬಾಹ್ಯವಿನ್ಯಾಸವನ್ನು ಹೊಂದಿದೆ. ಕುಷನ್ ಬೋದಿಗೆ, ಪಾಲಗೈ ಅಭ್ಯಾಕಸ್ ಹಾಗೂ ಮೇಲ್ಭಾಗದಲ್ಲಿ ಅಲಂಕೃತ ಉಪಬೋದಿಗೆ ಕಂಬದ ಅಂದವನ್ನು ಮತ್ತಷ್ಟು ಹೆಚ್ಚಿಸುತ್ತದೆ. ನವರಂಗದ ಒಳಗೋಡೆಗಳು ಸಾಕಷ್ಟು ಜೀರ್ಣೋದ್ಧಾರವಾಗಿದ್ದು, ಸುಣ್ಣಬಣ್ಣಗಳಿಂದ ಕೂಡಿದೆ. ಹೀಗಾಗಿ ಅವುಗಳ ಮೂಲರಚನೆಯ ಸ್ಪಷ್ಟತೆ ಇಲ್ಲಿ ಅಸಾಧ್ಯ. ಆದರೆ ಸುಕನಾಸಿಯ ದ್ವಾರಬಂಧದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರಾದ ಜಯ–ವಿಜಯ ಶಿಲ್ಪಗಳಿರುವುದು ಕಂಡುಬರುತ್ತದೆ. ದೇವಾಲಯದ ನವರಂಗದ ಭುವನೇಶ್ವರಿಗಳು ಸಾಧಾರಣ ಅಲಂಕರಣಗಳನ್ನು ಹೊಂದಿದೆ. ಭುವನೇಶ್ವರಿಗಳಲ್ಲಿ ಶಿಖರ ಮಾದರಿ ಇದ್ದು ಇವುಗಳಿಗೆ ಪೂರಕವಾಗಿ ಅರಳಿದ ಕಮಲದ ಮಾದರಿ ಆಕೃತಿಗಳು ನಿರ್ಮಾಣವಾಗಿವೆ. ಮಧ್ಯದಲ್ಲಿ ಕೆಳಮುಖವಾಗಿ ಇಳಿಬಿದ್ದ ಕಮಲದ ಮೊಗ್ಗು ನೋಡಲು ಶಂಖಾಕೃತಿಯ ಜ್ಞಾಪಕವನ್ನು ತರುತ್ತದೆ. ಮುಖಮಂಟಪ ಮೂಲತಃ ಎರಡು ಕಂಬಗಳನ್ನು ಹೊಂದಿದ್ದು, ನಂತರದಲ್ಲಿ ಹೊಸ ಜೋಡಣೆಗಳಾಗಿವೆ. ಮುಖಮಂಟಪ ಕಂಬಗಳು ಸಹ ನವರಂಗದಲ್ಲಿನ ಕಂಬಗಳಂತೆಯೇ ಆಕರ್ಷಕವಾಗಿದ್ದು, ಇಲ್ಲಿ ಕಂಬದ ದಿಂಡಿನಲ್ಲಿ ಘಂಟಾಕೃತಿ ಹಾಗೂ ಕುಂಭಾಕೃತಿಗಳನ್ನು ಗಮನಿಸಬಹುದು. ಕುಷನ್ ಬೋದಿಗೆಯು ಇಲ್ಲಿ ಇಲ್ಲ, ಬದಲಾಗಿ ಅದನ್ನು ಕುಂಭಾಕೃತಿಗೆ ಸೇರಿಸಲಾಗಿದೆ. ಪಾಲಗೈ ಅಬಾಕಸ್ ಕೂಡ ತುಸು ಚಿಕ್ಕದಾಗಿಯೇ ಇದೆ. ಇನ್ನೂ ದ್ವಾರಬಂಧವು ಅತ್ಯಂತ ಸರಳ ರೀತಿಯದಾಗಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಹಾಗೂ ಲಲಾಟಪಟ್ಟಿಕೆಯ ಮೇಲೆ ಪಂಚವಿಮಾನಗಳ ಕೆತ್ತನೆಯು ಕಂಡುಬರುತ್ತದೆ. ಈ ದೇವಾಲಯಕ್ಕೆ ಆ ಕಾಲದಲ್ಲಿಯೇ ನಿರ್ಮಿಸಿದ ಪ್ರಕಾರ ಇಂದು ಅದು ಸಹಜ ಜೀರ್ಣೋದ್ಧಾರವಾಗಿ ಇತ್ತೀಚಿಗೆ ಹೊಸದಾದ ಗೋಡೆಗಳನ್ನು ಹಾಗೂ ಮುಖದ್ವಾರವನ್ನು ಸೇರಿಸಲಾಗಿದೆ.

ಚೆನ್ನರಾಯಪಟ್ಟಣದ ಕೆರೆಯ ಹತ್ತಿರದಲ್ಲಿಯೇ ಇರುವ ಶಾಂತೇಶ್ವರ ದೇವಾಲಯ ಆ ಕಾಲದಲ್ಲಿ ಪ್ರಾಯಶಃ ಅತ್ಯಂತ ಪ್ರಮುಖವಾದ ದೇವಾಲಯವಾಗಿತ್ತೆಂದು ತೋರುತ್ತದೆ. ವಿನ್ಯಾಸದಲ್ಲಿ ತುಂಬಾ ಚಿಕ್ಕದಾದ ದೇವಾಲಯವಾಗಿದ್ದು, ಈಗ ಇದರ ಹೊರ ಭಾಗವನ್ನು ಸಂಪೂರ್ಣವಾಗಿ ಸಿಮೆಂಟು ಗಾರೆಯಿಂದ ಹೊಸದಾಗಿ ಪುನರ್ ನಿರ್ಮಾಣ ಮಾಡಿದ್ದಾರೆ. ಹೀಗಾಗಿ ದೇವಾಲಯದ ಬಾಹ್ಯ ವಿನ್ಯಾಸ ಸಂಪೂರ್ಣವಾಗಿ ಅಸ್ಪಷ್ಟವಾಗಿದೆ. ದೇವಾಲಯದ ಒಳಭಾಗದಲ್ಲಿ ಗರ್ಭಗೃಹದಲ್ಲಿ ಶಿವಲಿಂಗ ಚಿಕ್ಕದಾದ ಸುಕನಾಸಿ, ಸುಕನಾಸಿಗೆ ಹೊಂದಿಕೊಂಡಂತೆ ಕಿರಿದಾದ ನವರಂಗ ಮತ್ತು ನವರಂಗದಲ್ಲಿ ಕಂಡುಬರುವ ಕಿರಿದಾದ ನಾಲ್ಕು

ಕಂಬಗಳು ಇವೆ. ಸುಕನಾಸಿಯು ಜಾಲಂಧ್ರಗಳನ್ನು ಹೊಂದಿದ್ದು, ಲಲಾಟಪಟ್ಟಿಕೆ ಸರಳವಾಗಿದ್ದು ಮೇಲ್ಭಾಗದಲ್ಲಿ ಸಣ್ಣಸಣ್ಣ ಶಿಖರಗಳ ಉಬ್ಬುಕೆತ್ತನೆಗಳಿವೆ. ನವರಂಗದಲ್ಲಿರುವ ನಾಲ್ಕು ಕಂಬಗಳ ಮಧ್ಯದಲ್ಲಿರುವ ಭುವನೇಶ್ವರಿಯೂ ಚೌಕಾಕರವನ್ನು ಹೊಂದಿದ್ದು, ಮಧ್ಯದಲ್ಲಿ ನಾಭಿಶ್ವರದ ಹೂವನ್ನು ಕಡೆಯಲಾಗಿದೆ. ದೇವಾಲಯದ ಮುಂಭಾಗ ಈಗ ಸಂಪೂರ್ಣವಾಗಿ ಬದಲಾವಣೆಯನ್ನು ಹೊಂದಿದೆ. ಅದರ ವಾಸ್ತು ಕಲ್ಪನೆಯೂ ಕೂಡ ಅಸ್ಪಷ್ಟವಾಗಿದೆ.

### ಮಲ್ಲೇಶ್ವರ ದೇವಾಲಯ–ಕಬ್ಬಳ್ಳಿ

ಚನ್ನರಾಯಪಟ್ಟಣ ತಾಲ್ಲೂಕು ಕಬ್ಬಳ್ಳಿಯಲ್ಲಿ ಊರಿನಿಂದ ಹೊರಗೆ ಕ್ರಿ.ಶ.1186ರ ಒಂದು ಶಾಸನವಿದೆ. ಈ ಶಾಸನದಲ್ಲಿ ಮಲ್ಲೇಶ್ವರ ದೇವಾಲಯಕ್ಕೆ ಪೂರಕವಾಗಿ ದಾನ ಧರ್ಮ ನೀಡಿರುವ ವಿಚಾರ ತಿಳಿದುಬರುತ್ತದೆ.[17] ಅಲ್ಲದೆ ಕ್ರಿ.ಶ.1598 ರ ಮತ್ತೊಂದು ಶಾಸನವಿದೆ. ಇದು ಸಹ ದೇವರಿಗೆ ಸೇರಿದ ವಿಚಾರ ತಿಳಿಸುವ ಶಾಸನವಾಗಿದೆ. [18] ಈ ಊರಿನಿಂದ ಹೊರಗೆ ಒಂದು ಏರಿಯ ಕೆಳಗೆ ದುಃಸ್ಥಿತಿಯಾಗಿರುವ ಮಲ್ಲೇಶ್ವರ ದೇವಾಲಯವಿದೆ. ಈಗ ಇದರ ವಾಸ್ತು ಯಾವುದು ಉಳಿದುಕೊಂಡು ಬಂದಿಲ್ಲ. ಇದು ಗರ್ಭಗೃಹ ಮತ್ತು ಶುಕನಾಸವನ್ನು ಮಾತ್ರ ಹೊಂದಿದೆ. ಇದೊಂದು ಶೈವ ದೇವಾಲಯವಾಗಿದೆ.

### ನಾಗೇಶ್ವರ ದೇವಾಲಯ–ಬಾಗೂರು

ಚನ್ನರಾಯಪಟ್ಟಣದ ಪ್ರದೇಶದಲ್ಲಿನ ಬಾಗೂರು ಗ್ರಾಮದಲ್ಲಿ ಊರಿನಿಂದ ಹೊರಗೆ ಗ್ರಾಮದ ಕೆರೆಯ ಏರಿಯ ಹಿಂದೆ ನಾಗೇಶ್ವರ ದೇವಾಲಯವಿದೆ. ಇದು ಹೊಯ್ಸಳರ ಕಾಲಕ್ಕೆ ಸೇರಿದ್ದು ಒಂದನೇ ನರಸಿಂಹ ಕ್ರಿ.ಶ.1142 ರ ಶಾಸನ ಕಂಡು ಬಂದಿದೆ. [19] ನಾಗೇಶ್ವರ ದೇವಾಲಯವು ಪ್ರಾಚೀನ ಕಾಲದ ದೇವಾಲಯವಾಗಿದ್ದು, ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗವನ್ನು ಹೊಂದಿದೆ. ಮೂಲ ಗರ್ಭಗೃಹದಲ್ಲಿ ಶಿವಲಿಂಗ ಇರಿಸಲಾಗಿದೆ. ಶುಕನಾಸಿಯ ಭಾಗದಲ್ಲಿ ನಂದಿ ಶಿಲ್ಪವಿದೆ. ಶುಕನಾಸಿಯ ಇಕ್ಕೆಲಗಳ ದ್ವಾರದ ನಿಲುವು ಕಂಬಗಳ ಪಕ್ಕದಲ್ಲಿ ಸಣ್ಣ ಸಣ್ಣ ಜಾಲೇಂದ್ರಗಳಿದ್ದು, ಪಕ್ಕದಲ್ಲಿಯೇ ಅರೆಕಂಬಗಳನ್ನು ಸೇರಿಸಲಾಗಿರುತ್ತದೆ. ಇಲ್ಲಿರುವ ನಂದಿಯು ಅಲಂಕೃತವಾಗಿ ಕೆತ್ತನೆಯನ್ನು ಮಾಡಲಾಗಿರುತ್ತದೆ.

ನವರಂಗದ ಭಾಗದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಕಂಬಗಳ ಮಧ್ಯದಲ್ಲಿ ಇನ್ನೊಂದು ನಂದಿ ಶಿಲ್ಪವಿದೆ. ನವರಂಗ ಅಂಕಣದಲ್ಲಿ 9 ಭುವನೇಶ್ವರಿಗಳನ್ನು ಕಡೆಯಲಾಗಿರುತ್ತದೆ.

ದೇವಾಲಯವು ದಕ್ಷಿಣಾಭಿಮುಖವಾಗಿದೆ. ದೇವಾಲಯದ ಮುಖ್ಯ ಪ್ರವೇಶದ್ವಾರವು ಸರಳವಾಗಿದೆ. ಇದರ ಮುಂದೆ ಒಂದು ಬಲಿಪೀಠವನ್ನು ಸಹ ಇರಿಸಲಾಗಿರುತ್ತದೆ. ಈ ದೇವಾಲಯ ಸಂಪೂರ್ಣವಾಗಿ ದುಃಸ್ಥಿತಿ ಹೊಂದಿದೆ ಹಾಗೂ ಕೆಲವೊಂದು ಭಾಗಗಳು ಇಟ್ಟಿಗೆಯಿಂದ ನಿರ್ಮಿತಗೊಂಡಿದೆ. ಕಾರಣವೇನೆಂದರೆ, ಈ ದೇವಾಲಯವು ದುಃಸ್ಥಿತಿ ಹೊಂದಿದ ಕಾರಣ ನಂತರ ಕಾಲದಲ್ಲಿ ಇಟ್ಟಿಗೆಯನ್ನು ಬಳಸಿರುವುದು ಕಂಡುಬರುತ್ತದೆ. ದೇವಾಲಯದ ಮೇಲೆ ಅಂದರೆ ಗರ್ಭಗುಡಿಗೆ ಸೇರಿದಂತೆ ಇಟ್ಟಿಗೆಯಿಂದ ನಿರ್ಮಿಸಿದ ದ್ರಾವಿಡ ವಿಮಾನವಿದೆ. ಇದೊಂದು ಹೊಯ್ಸಳರ ಕಾಲದಲ್ಲಿ ಒಂದು ಪ್ರಮುಖ ಶೈವ ದೇವಾಲಯವಾಗಿತ್ತು.

ದೇವಾಲಯದ ದ್ವಾರದ ಪಕ್ಕದಲ್ಲಿಯೇ ಒಂದು ಶಾಸನವಿರುವ ಚಪ್ಪಡಿಯನ್ನು ನಿಲ್ಲಿಸಲಾಗಿದೆ. ಇದು ಸಹ ಶೈವಪರಂಪರೆಯನ್ನು ತಿಳಿಸುವಂತಹ ಶಾಸನ ಚಪ್ಪಡಿಯಾಗಿದೆ ಎನ್ನಬಹುದು. ಈ ಚಪ್ಪಡಿಯಲ್ಲಿ ಸೂರ್ಯ ಚಂದ್ರರ ಸಾಕ್ಷಿಯಾಗಿ ಶಾಸನ ಹೊರಡಿಸಿದ್ದು, ಶಿವಭಕ್ತ, ಪೂಜೆ ಮಾಡುತ್ತಿರುವುದು ನಂದಿಯಿದ್ದು, ಕರುವಿಗೆ ಹಾಲು ಕುಡಿಸುತ್ತಿರುವುದನ್ನು ಸಹ ಚಿತ್ರದಲ್ಲಿ ತೋರಿಸಲಾಗಿದೆ.

**ವೇಣುಗೋಪಾಲ ಸ್ವಾಮಿ ದೇವಾಲಯ-ಬಾಗೂರು**

ಬಾಗೂರು ಗ್ರಾಮದಲ್ಲಿ ವೇಣುಗೋಪಾಲ ಸ್ವಾಮಿ ದೇವಾಲಯವಿದೆ. ಈ ದೇವಾಲಯವು ಗರ್ಭಗೃಹ, ಶುಕನಾಸ, ತೆರೆದ ಶುಕನಾಸ, ನವರಂಗ, ಮುಖಮಂಟಪವನ್ನು ಹೊಂದಿದೆ ಹಾಗೂ ಬಲಿಪೀಠ ಗರುಡಗಂಬ ಅಲ್ಲದೆ ದ್ವಾರ ಮಂಟಪವನ್ನು ಒಳಗೊಂಡಿದೆ. ಮೂಲಗರ್ಭಗುಡಿಯಲ್ಲಿ ಏಳುತಲೆಯ ಸರ್ಪವುಳ್ಳ ವೇಣುಗೋಪಾಲನ ಶಿಲ್ಪವಿದೆ. ಇದು ನರ್ತನ ಭಂಗಿಯಲ್ಲಿದ್ದ ಶುಕನಾಸಿಯ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ನವರಂಗದಲ್ಲಿ ಒಟ್ಟು ಆರು ಕಂಬಗಳಿವೆ. ನವರಂಗಕ್ಕೆ ಹೊಂದಿಕೊಂಡಂತೆ ಮಹಾಲಕ್ಷ್ಮಿ ಗುಡಿಯನ್ನು ಸಹ ಸ್ಥಾಪಿಸಲಾಗಿದೆ. ಮುಖಮಂಟಪದಲ್ಲಿ ನಾಲ್ಕು ಕಂಬಗಳಿದ್ದು, ಮೂರು ಕಡೆ ದ್ವಾರಗಳಿವೆ, ಮೂರು ಕಡೆಯೂ ಆನೆಯ ಮುಖವನ್ನು ಹೊಂದಿರುವ ಚಪ್ಪಡಿಗಳಿದ್ದು, ದೇವಾಲಯದ ಸೊಬಗನ್ನು ಹೆಚ್ಚಿಸುತ್ತದೆ. ಅಲ್ಲದೆ ದ್ವಾರಪಾಲಕರ ಶಿಲ್ಪಗಳಿವೆ. ಮುಖಮಂಟಪದಲ್ಲಿರುವ ನಾಲ್ಕು ಕಂಬಗಳಲ್ಲಿಯೂ ಸಿಂಹ ಮುಖವನ್ನು ಕಡೆಯಲಾಗಿರುತ್ತದೆ. ಅದರ ಮುಂದೆ ಮತ್ತೊಂದು ದ್ವಾರಮಂಟಪವನ್ನು ಸಹ ನಿರ್ಮಿಸಲಾಗಿದೆ. ಇಲ್ಲಿರುವ ಗರುಡಗಂಭ ವಿಶೇಷತೆಯನ್ನು ಹೊಂದಿದೆ. (ಚಿತ್ರ-46) ದೇವಾಲಯದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ವಿಮಾನವನ್ನು ಹೊಂದಿದೆ. ವೇಣುಗೋಪಾಲಸ್ವಾಮಿ ದೇವಾಲಯವು ಪ್ರಾಯಶಃ ಪ್ರಾಚೀನತೆಯನ್ನು ಹೊಂದಿದೆ.

ಈ ದೇವಾಲಯಕ್ಕೆ ಪೂರಕವಾಗಿ ಕ್ರಿ.ಶ.1650 ರ ಒಂದು ಶಿಲಾಶಾಸನವಿದೆ. [20] ಈ ಶಾಸನವು ವೈಷ್ಣವ ಧರ್ಮಕ್ಕೆ ಪೂರಕವಾಗಿ ಕಡೆಯಲಾಗಿದೆ ಎಂಬುದನ್ನು ತಿಳಿಸುತ್ತದೆ. (ಚಿತ್ರ 47)

**ಬಾಗೂರು ಕೊಳ**

ಬಾಗೂರು ಗ್ರಾಮದಲ್ಲಿ ಒಂದು ಪ್ರಾಚೀನ ಕೊಳವಿದೆ. ಇದು ದುಃಸ್ಥಿತಿ ಹೊಂದಿ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಇಲ್ಲಿ ತಲಕಾಡಿನ ಗಂಗರ ಕಾಲಕ್ಕೆ ಸೇರಿದ ಕಂಬ ಕಂಡುಬಂದಿದೆ. ಆದ ಕಾರಣ ಈ ಊರು ತಲಕಾಡಿನ ಗಂಗರ ಕಾಲದಿಂದಲೂ ಹೆಸರುವಾಸಿಯಾಗಿತ್ತೆಂಬುದನ್ನು ದೃಢಪಡಿಸುತ್ತದೆ. ಕೊಳದಲ್ಲಿ ಕೇಶವನ ಒಂದು ಬಿಡಿ ಶಿಲ್ಪವಿದೆ. (ಚಿತ್ರ-48)

**ಪಾಲು ಶಂಭುಲಿಂಗ ದೇವಾಲಯ-ಬಳಗಟ್ಟೆ**

ಬಳಗಟ್ಟಿಯ ಊರಿನಿಂದ ಹೊರಗೆ ಪ್ರಾಚೀನ ಕಾಲದ ಶಂಭುಲಿಂಗ ದೇವಾಲಯ ಈಗ ಸಂಪೂರ್ಣವಾಗಿ ನಾಶವಾಗಿದೆ. ಆದರೆ ಈಗ ಅದರ ಅವಶೇಷಗಳು ಮಾತ್ರ ಉಳಿದುಬಂದಿದೆ. ಈ ದೇವಾಲಯಕ್ಕೆ ಪೂರಕವಾಗಿ ಹೊಯ್ಸಳರ ಅರಸ ಎರಡನೇ ಬಲ್ಲಾಳನ ಸುಮಾರು 59 ಸಾಲುಗಳನ್ನು ಹೊಂದಿರುವ ಶಿಲಾಶಾಸನವಿದೆ. [21] ಈ ನೆಲೆಯಲ್ಲಿ ಒಂದು ಆಲದ ಮರದ ಕೆಳಗೆ ದೇವಾಲಯವಿತ್ತೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಈಗ ಕೆಲವೊಂದು ಚಪ್ಪಡಿಗಳು ಶಿವಲಿಂಗ ದುಃಸ್ಥಿತಿಯಾಗಿರುವ ನಂದಿ ಶಿಲ್ಪವಿದೆ. ಹೊಯ್ಸಳರ ಕಾಲಕ್ಕೆ ಸೇರಿಸಬಹುದಾದ ದುಃಸ್ಥಿತಿ ಹೊಂದಿರುವ ಕಂಬಗಳಿವೆ.(ಚಿತ್ರ -49, 50) ಅಲ್ಲದೆ ಹುಲಿಯನ್ನು ಕೊಲ್ಲುತ್ತಿರುವ ದುಃಸ್ಥಿತಿ ಹೊಂದಿರುವ ಶಿಲ್ಪವನ್ನು ಕಾಣಬಹುದಾಗಿದೆ. (ಚಿತ್ರ-51) ಹೊಯ್ಸಳರ ಲಾಂಛನ ಸಳ ಹುಲಿಯನ್ನು ಕೊಲ್ಲುತ್ತಿರುವ ಚಿಹ್ನೆಯಾಗಿರುವುದರಿಂದ ಇದು ಈ ನೆಲೆಯಲ್ಲಿ ದೊರೆತಿರುವುದರಿಂದ ಅಲ್ಲದೆ ಕ್ರಿ.ಶ.1178 ರ ಕಾಲಕ್ಕೆ ಸೇರಿದ ಹೊಯ್ಸಳ ಎರಡನೆಯ ಬಲ್ಲಾಳನ ಶಾಸನವಿರುವುದರಿಂದ ಪಾಳು ಶಂಭುಲಿಂಗ ದೇವಾಲಯ ಇದೆ ಎಂಬುದು ತಿಳಿದು ಬರುತ್ತದೆ.

**ಈಶ್ವರ ದೇವಾಲಯ-ಬಸವನಪುರ**

ಈಶ್ವರ ದೇವಾಲಯ ಬಸವನಪುರ ಇಲ್ಲಿ ಗಂಗರ ಕಾಲಕ್ಕೆ ಸೇರಿದ ದೇವಾಲಯವಿದೆ. ಈ ದೇವಾಲಯವನ್ನು ಬಸವೇಶ್ವರ ದೇವಾಲಯವೆಂದೂ ಸಹ ಕರೆಯುತ್ತಾರೆ. ಈ ದೇವಾಲಯಕ್ಕೆ ಪೂರಕವಾಗಿ ಕ್ರಿ.ಶ.10ನೇ ಶತಮಾನಕ್ಕೆ ಸೇರಿದ ಒಂದು ಶಿಲಾಶಾಸನವಿದೆ.(ಚಿತ್ರ-52) ಈ ಶಾಸನವು 16 ಸಾಲುಗಳನ್ನು ಹೊಂದಿದೆ. ಇದು ಸತ್ಯವಾಕ್ಯ ಪೆರ್ಮಾಡಿಯ ಬಗ್ಗೆ

ತಿಳಿಸುವ ಶಾಸನವು ಹೌದು. [22] ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ನವರಂಗವನ್ನು ಮಾತ್ರ ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಇರಿಸಲಾಗಿದೆ. ತೆರೆದ ನವರಂಗದಲ್ಲಿ ನಂದಿ ಶಿಲ್ಪವಿದ್ದು, ನಾಲ್ಕು ಕಂಬಗಳನ್ನು ಸೇರಿಸಲಾಗಿದೆ. ಈ ದೇವಾಲಯ ಸಂಪೂರ್ಣವಾಗಿ ಹೊಸ ನಿರ್ಮಿಸಲ್ಪಟ್ಟಿದೆ. ಮೇಲ್ಭಾಗದಲ್ಲಿ ಮೂರು ಕೋಷ್ಠಗುಡಿಯನ್ನು ನಿರ್ಮಿಸಲಾಗಿರುತ್ತದೆ.

## ಸೋಮೇಶ್ವರ ದೇವಾಲಯ ಅಥವಾ ಅಕ್ಕನಹಳ್ಳಿ

ಅಕ್ಕನಹಳ್ಳಿ ಕೆರೆಯ ಹಿಂದೆ ಸೋಮೇಶ್ವರ ದೇವಾಲಯ ಇದೆ. ಈ ದೇವಾಲಯಕ್ಕೆ ಪೂರಕವಾಗಿ ಕ್ರಿ.ಶ.1281–1282 ಕ್ಕೆ ಸೇರಿದ ಶಿಲಾಶಾಸನವಿದೆ. ಇದು ಹೊಯ್ಸಳ ತ್ರಿಭುವನಮಲ್ಲನ ಬಗ್ಗೆ ತಿಳಿಸುವ ಶಾಸನವಾಗಿದೆ. [23] ಸೋಮೇಶ್ವರ ದೇವಾಲಯವು ಸಂಪೂರ್ಣವಾಗಿ ಹೊಸದಾಗಿ ಜೀರ್ಣೋದ್ಧಾರಗೊಂಡಿದೆ. ಊರಿನ ಒಳಗೆ ಒಂದು ಮಂಟಪವಿದೆ. ಅದು ಸಹ ಈಗ ದುಃಸ್ಥಿತಿಯನ್ನು ಹೊಂದಿದೆ. ಇದರ ಮುಂದೆ ದೇವಾಲಯವಿತ್ತೆಂದು ಕಂಡುಬಂದರೂ ಈಗ ಈ ನೆಲೆ ಸಂಪೂರ್ಣವಾಗಿ ನಾಶವಾಗಿದೆ. (ಚಿತ್ರ–53) ಅದರ ಪಕ್ಕದಲ್ಲಿಯೇ ಒಂದು ಗರುಡಗಂಭವಿದೆ. ಈ ಗರುಡಗಂಭಕ್ಕೆ ದ್ವಾರವನ್ನು ನಿರ್ಮಿಸಲಾಗಿತ್ತೆಂದು ತೋರುತ್ತದೆ. ಆದರೆ ಅದು ಸಹ ದುಃಸ್ಥಿತಿಯನ್ನು ಹೊಂದಿದೆ. ಈ ದ್ವಾರಕ್ಕೆ ಸುತ್ತಲೂ ಕಲ್ಲು ಚಪ್ಪಡಿಯನ್ನು ಕೂರಿಸಲಾಗಿರುತ್ತದೆ. ಇದು ಸ್ಥಳೀಯರ ನಂಬಿಕೆಗೆ ಪೂರಕವಾಗಿ ಪೂಜೆಪುನಸ್ಕಾರಗಳು ನಡೆಯುತ್ತಿವೆ. (ಚಿತ್ರ–54) ಈ ಊರಿನಲ್ಲಿ ಒಂದು ಪ್ರಾಚೀನ ದೇವಾಲಯವಿದ್ದು, ಅದು ಸಹ ದುಃಸ್ಥಿತಿಯಾಗಿ ಒಂದು ಮನೆಯ ರೀತಿಯಲ್ಲಿ ಪರಿವರ್ತನೆಯಾಗಿದೆ. ಆ ಮನೆಯಲ್ಲಿ ಭೈರವನ ಶಿಲ್ಪವಿದೆ. ಇದು ಭೈರವ ಮತ್ತು ವೀರಭದ್ರನನ್ನು ಹೋಲುತ್ತದೆ. ಇದು ಅತ್ಯಂತ ಪ್ರಾಚೀನ ಕಾಲದ ಶಿಲ್ಪವಾಗಿದೆ. ಆದರೆ ದೇವಾಲಯಗಳು ಮಾತ್ರ ಈ ಊರಿನಲ್ಲಿ ನಾಶವಾಗಿವೆ. (ಚಿತ್ರ–55)

## ಗಂಜಿಗೆರೆ (ಗಂಜಲ ಘಟ್ಟ) ಲಿಂಗದೇವರ ಪಾಳು ಶಿವಾಲಯ

ಗಂಜಿಗೆರೆ (ಗಂಜಲ ಘಟ್ಟ) ಗ್ರಾಮದಲ್ಲಿ ಒಂದು ಲಿಂಗದೇವರ ದೇವಾಲಯವಿತ್ತು ಎಂದು ತಿಳಿದುಬರುತ್ತದೆ. ಆದರೆ ಈಗ ಈ ದೇವಾಲಯ ಸಂಪೂರ್ಣ ನಾಶವಾಗಿದೆ. ಈ ದೇವಾಲಯದ ಬಗ್ಗೆ ತಿಳಿಯಬೇಕಾದರೆ ಚಾಲುಕ್ಯ ತ್ರಿಭುವನ ಮಲ್ಲನ ಆದೇಶದ ಮೇರೆಗೆ ಹೊಯ್ಸಳ ಅರಸ ಒಂದನೇ ನರಸಿಂಹನು ಕ್ರಿ.ಶ.1153 ರಲ್ಲಿ ಶಾಸನ ಬರೆಸಿರುವುದು ತಿಳಿದುಬರುತ್ತದೆ. [24] ಆದರೆ ಇಲ್ಲಿ ವೀರಭದ್ರನ ಶಿಲ್ಪವಿದೆ. ಇದು ಕೆಂಪು ಶಿಲೆಯಿಂದ ಕೂಡಿದೆ.

## ಮೊದಲಗೆರೆ: ಈಶ್ವರ ದೇವಾಲಯ

ಮೊದಲಗೆರೆಯ ಈಶ್ವರ ದೇವಾಲಯ ಈಗ ಸಂಪೂರ್ಣ ನಾಶವಾಗಿದೆ. ಈಗ ಹೊಸದಾಗಿ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯದ ಬಳಿ ವೀರಗಲ್ಲಿದ್ದು, ಆ ವೀರಗಲ್ಲಿನ ಶಾಸನದ ಪ್ರಕಾರ ಇದು 12–13ನೇ ಶತಮಾನದ ವೀರಗಲ್ಲಾಗಿದೆ. [25] ದೇವಾಲಯದ ಮೂಲಗರ್ಭಗೃಹದಲ್ಲಿ ಶಿವಲಿಂಗವಿದೆ. ನವರಂಗದಲ್ಲಿ ಯಾವುದೇ ರೀತಿಯ ಶಿಲ್ಪವಾಗಲಿ ಕಂಬವಾಗಲಿ ಕಂಡುಬಂದಿಲ್ಲ. ಮುಂಭಾಗದಲ್ಲಿ ದೇವಾಲಯದ ಮೇಲೆ ಮೂರು ಕೋಷ್ಠಗುಡಿಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ ಶಿವ ಪಾರ್ವತಿ, ಗಣೇಶ ಮತ್ತು ಕುಮಾರನ ಗಾರೆ ಶಿಲ್ಪಗಳಿವೆ. ಪ್ರಾಯಶಃ ಈ ದೇವಾಲಯ ಗಂಗರ ಕಾಲದಲ್ಲಿ ನಿರ್ಮಿಸಿರಬೇಕು. ತದನಂತರ ಸಂಪೂರ್ಣ ದುಃಸ್ಥಿತಿ ಹೊಂದಿ ಈಗ ಮತ್ತೆ ಜೀರ್ಣೋದ್ಧಾರಗೊಂಡಿದೆ.

## ಸುಬ್ರಹ್ಮಣ್ಯ ದೇವಾಲಯ–ಕುಂದೂರು

ಚನ್ನರಾಯಪಟ್ಟಣ ಕುಂದೂರು ಗ್ರಾಮದಲ್ಲಿ ಸುಬ್ರಹ್ಮಣ್ಯ ದೇವಾಲಯವಿದೆ. ಈ ದೇವಾಲಯವು ಒಂದೇ ಅಂಕಣವನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಬ್ರಹ್ಮಣ್ಯಸ್ವಾಮಿಯನ್ನು ಕುಳಿರಿಸಲಾಗಿದೆ. ಅದರ ಮುಂದೆರಡು ಕಂಬಗಳನ್ನು ನಿರ್ಮಿಸಿದ್ದು, ಗಾರೆಯಿಂದ ಮೇಲ್ಭಾಗವನ್ನು ಮುಚ್ಚಲಾಗಿದೆ. ಗರ್ಭಗೃಹ ಮೇಲ್ಭಾಗದಲ್ಲಿ ದ್ರಾವಿಡ ಹಾಗೂ ನಾಗರ ಶೈಲಿಯ ವಿಮಾನವನ್ನು ಹೊಂದಿದೆ. ವಿಮಾನವು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟಿದ್ದು ಕೆಳ ಭಾಗ ದ್ರಾವಿಡ ಮಾದರಿಯನ್ನು ಮೇಲೆ ಹೋದಂತೆ ವೃತ್ತಾಕಾರವಾಗಿದೆ. ಇದರ ಮೇಲೆ ಸ್ತೂಪಿ ಇದೆ. (ಚಿತ್ರ–57) ಈ ದೇವಾಲಯದ ಮುಂದೆ ಒಂದು ಗರುಡಗಂಬವಿದೆ. ಈ ಕಂಬದಲ್ಲಿ ಕ್ರಿ.ಶ.16–17ನೇ ಶತಮಾನಕ್ಕೆ ಸೇರಿದ ಶಾಸನವಿದೆ. ಈ ಶಾಸನವು 19 ಸಾಲುಗಳನ್ನು ಹೊಂದಿದ್ದು, ದೇವಾಲಯಕ್ಕೆ ಸೇರಿದ ಭೂಮಿ ಮತ್ತು ಧರ್ಮದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

## ಚನ್ನಕೇಶವ ದೇವಾಲಯ

ಕುಂದೂರು ಗ್ರಾಮದಲ್ಲಿ ಇನ್ನೊಂದು ದೇವಾಲಯವಿದೆ. ಇದನ್ನು ಚನ್ನಕೇಶವ ದೇವಾಲಯವೆಂದು ಕರೆಯಲಾಗಿದ್ದು, ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ ಮತ್ತು ನವರಂಗವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಚನ್ನಕೇಶವನ ಶಿಲ್ಪವನ್ನು ಇಡಲಾಗಿದೆ. ಶುಕನಾಸಿ ಅಂಕಣವೂ ಖಾಲಿ ಇದೆ. ನವರಂಗದಲ್ಲಿ ಎರಡು ಚೌಕಕಾಕಾರದ ಕಂಬಗಳನ್ನು

ಸೇರಿಸಲಾಗಿದೆ. ವಾಸ್ತು ಕಲೆಯಿಂದ ಅಷ್ಟೇನು ಪ್ರಾಮುಖ್ಯತೆಯನ್ನು ಹೊಂದಿಲ್ಲವೆಂದು ಹೇಳಬಹುದಾಗಿದೆ.

**ಈಶ್ವರ ದೇವಾಲಯ**

ಕುಂದೂರು ಗ್ರಾಮದಲ್ಲಿ ಮತ್ತೊಂದು ಶೈವ ದೇವಾಲಯವಿದೆ. ಈ ದೇವಾಲಯಕ್ಕೆ ಈಶ್ವರ ದೇವಾಲಯವೆಂದು ಕರೆಯುತ್ತಾರೆ. ಈ ದೇವಾಲಯಕ್ಕೆ ಪೂರಕವಾಗಿ ಯಾವುದೇ ಶಾಸನವಿಲ್ಲ. ಆದರೆ ಗ್ರಾಮದ ತೋಟವೊಂದರಲ್ಲಿರುವ ಕಲ್ಲು ಚಪ್ಪಡಿಯ ಶಾಸನದ ಪ್ರಕಾರ, ಎರಡನೇ ವೀರಬಲ್ಲಾಳನ ಕಾಲದಲ್ಲಿ ಶಾಸನವನ್ನು ಬರೆಸಲಾಗಿದೆ. ಈ ಶಾಸನದ ಕಾಲ ಕ್ರಿ.ಶ.1168[27]ಮತ್ತೊಂದು ಮಠದ ಶ್ರೀ ನಂಜಯ್ಯ ಪರದೇಶಿ ಸ್ವಾಮಿಗಳ ವಶದಲ್ಲಿದ್ದ ತಾಮ್ರಶಾಸನದ ಪ್ರಕಾರ ಹೊಯ್ಸಳ ಎರಡನೆಯ ವೀರಬಲ್ಲಾಳನ ಶಾಸನವಾಗಿದ್ದು, ಇದರ ಕಾಲ 1911 ಎರಡು ಶಾಸನಗಳಲ್ಲಿಯೂ ದೇವಾಲಯಕ್ಕೆ ಬಿಟ್ಟ ದಾನಧರ್ಮಗಳ ಬಗ್ಗೆ ಜಮೀನಿನ ಬಗ್ಗೆ ತಿಳಿಸುತ್ತದೆ. ಅದು ಅಲ್ಲದೆ ಈ ಕುಂದೂರು ಗ್ರಾಮದಲ್ಲಿ ಹೊಯ್ಸಳರ ವಾಸ್ತುಶೈಲಿಯನ್ನು ಹೊಂದಿರುವ ಶಿವ ದೇವಾಲಯವಿದೆ. ಈ ದೇವಾಲಯವು ಗರ್ಭಗುಡಿ ಮತ್ತು ತೆರೆದ ನವರಂಗವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ ಶಿವಲಿಂಗಕ್ಕೆ ಎದುರಾಗಿ ನಂದಿ ಶಿಲ್ಪವನ್ನು ಕುಳಿರಿಸಲಾಗಿದೆ. ಗರ್ಭಗೃಹದ ದ್ವಾರದಲ್ಲಿ ಅನೇಕ ವಿನ್ಯಾಸಗಳನ್ನು ಹೊಂದಿರುವ ಕೆತ್ತನೆಗಳು ಕಂಡುಬರುತ್ತವೆ. ನವರಂಗದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. ಈ ದೇವಾಲಯ ಜೀರ್ಣೋದ್ಧಾರಗೊಂಡಿದೆ.

**ಶಿವ ದೇವಾಲಯ**

ಕುಂದೂರು ಗ್ರಾಮದಲ್ಲಿ ಮತ್ತೊಂದು ಶಿವಾಲಯವಿದೆ. ಇದು ಮೂರು ಗರ್ಭಗುಡಿಯನ್ನು ಹೊಂದಿದ್ದು, ಮಧ್ಯದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಒಂದು ಗರ್ಭಗುಡಿಯಲ್ಲಿ ಪಾರ್ವತಿ ಶಿಲ್ಪವನ್ನು ಮತ್ತೊಂದು ಗರ್ಭಗುಡಿಯಲ್ಲಿ ಗಣಪತಿ ಶಿಲ್ಪವನ್ನು ಇಡಲಾಗಿದೆ. ಮಧ್ಯದ ಗರ್ಭಗುಡಿಯ ದ್ವಾರವು ಬಳ ಸುರುಳಿಯಿಂದ ಕೂಡಿದ್ದು ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಗರ್ಭಗುಡಿಗೆ ಎದುರಾಗಿ ನಂದಿಯ ಶಿಲ್ಪವನ್ನು ಇರಿಸಲಾಗಿದೆ. ನವರಂಗದ ಮಧ್ಯದಲ್ಲಿ ಎರಡು ಕಂಬಗಳಿವೆ. ಮುಂಭಾಗಕ್ಕೆ ಹೊಂದಿಕೊಂಡಂತೆ ಎರಡು ಕಂಬಗಳಿವೆ.

### ಕುಂದೂರು ಮಠ

ಕುಂದೂರಿನಲ್ಲಿ ಮತ್ತೊಂದು ಮಠವಿದ್ದು, ಇದನ್ನು ಕುಂದೂರು ಮಠವೆಂದೇ ಹೆಸರುಗಳಿಸಿದೆ. ಈ ಮಠವು ತಳವಿನ್ಯಾಸದಲ್ಲಿ ಗರ್ಭಗೃಹ, ನವರಂಗ ಮುಖಮಂಟಪವನ್ನು ಹೊಂದಿದೆ. ಈ ಮಠವು ಮೂರು ಗರ್ಭಗೃಹವನ್ನು ಹೊಂದಿದೆ. ಮಧ್ಯದಲ್ಲಿ ರಾಮ, ಬಲಕ್ಕೆ ಲಕ್ಷ್ಮಣ, ಎಡಕ್ಕೆ ಸೀತೆಯನ್ನು ಇರಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಮುಖಮಂಟಪಕ್ಕೆ ನಾಲ್ಕು ಕಂಬಗಳನ್ನು ಸೇರಿಸಲಾಗಿದ್ದು, ಮೇಲ್ಭಾಗದಲ್ಲಿ ಗಾರೆಯಿಂದ ಮಾಡಿದ ಕೋಷ್ಠಗುಡಿಗಳಿವೆ. ಗುಡಿಯಲ್ಲಿ ಶಿಲ್ಪಗಳನ್ನು ಕಡೆಯಲಾಗಿದೆ (ಚಿತ್ರ-57)

ಕುಂದೂರಿನಲ್ಲಿ ಒಂದು ವಿಷ್ಣು ಶಿಲ್ಪವಿದೆ. ಈ ಶಿಲ್ಪವು ಹೊಯ್ಸಳರ ಕಾಲಕ್ಕೆ ಸೇರಿದ ಶಿಲ್ಪವಾಗಿದ್ದು, ತುಮ್ಬಾ ಸೊಗಸಾಗಿ ಮೂಡಿಬಂದಿದೆ. ವಿಷ್ಣುವು ಚತುರ್ಭುಜವನ್ನು ಹೊಂದಿದ್ದು, ಶಂಖ, ಚಕ್ರ, ಅಭಯ ಮತ್ತು ಫಲವನ್ನು ಹಿಡಿದಿರುವುದು ಕಂಡುಬರುತ್ತದೆ. ಕಂಠದಲ್ಲಿ ಹಾರವನ್ನು ಧರಿಸಲಾಗಿದೆ. ತಲೆಯಮೇಲೆ ಸೊಗಸಾದ ಕಿರೀಟವನ್ನು ಧರಿಸಿದ್ದಾರೆ. ವಸ್ತ್ರವು ಸಹ ಉತ್ತಮ ರೀತಿಯಲ್ಲಿ ಮೂಡಿಬಂದಿದೆ. ಶಿಲ್ಪದ ಹಿಂದೆ ಪ್ರಭಾವಳಿಯು ಸಹ ಸಿಂಹಮುಖ ಮತ್ತು ಬಳ್ಳಿ ಸುರುಳಿ ಕೆತ್ತನೆಯಿಂದ ಅಲಂಕೃತಗೊಂಡಿದೆ. (ಚಿತ್ರ-57)

### ಶಂಭುಲಿಂಗೇಶ್ವರ ದೇವಾಲಯ-ಮರಗೂರು

ಮರಗೂರು ಗ್ರಾಮದಲ್ಲಿ ವಿಜಯನಗರ ಅರಸರ ಕಾಲಕ್ಕೆ ಸೇರಿದ ಎರಡು ಶಾಸನಗಳಿವೆ. ಎರಡನೇ ಹರಿಹರ ಕಾಲದ ಕ್ರಿ.ಶ.1398 ರಲ್ಲಿ ದೇವಾಲಯಕ್ಕೆ ದಾನ ನೀಡಿರುವುದರ ಬಗ್ಗೆ ತಿಳಿದುಬರುತ್ತದೆ. [28] ಮರಗೂರಿನಲ್ಲಿ ಶಂಭುಲಿಂಗೇಶ್ವರ ದೇವಾಲಯವಿದ್ದು, ಅದು ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಮೇಲ್ಭಾಗದಲ್ಲಿ ಭುವನೇಶ್ವರಿ ಇದೆ. ಶುಕನಾಸಿ ಅಂಕಣದಲ್ಲಿ ಕೂಡ ಭುವನೇಶ್ವರಿಯನ್ನು ಹೊಂದಿದೆ. ನವರಂಗದ ಭಾಗದಲ್ಲಿ ನಾಲ್ಕು ಕಂಬಗಳಿದ್ದು, ಕೆಲವೊಂದು ಬಿಡಿ ಶಿಲ್ಪಗಳು ಸಹ ಕಂಡುಬರುತ್ತವೆ. ಅವುಗಳಲ್ಲಿ ಭೈರವ, ಗಂಗಮಾಳಮ್ಮ ಶಿಲ್ಪಗಳಾಗಿವೆ. ಅಲ್ಲದೆ ಒಂದು ಶಾಸನವನ್ನು ಹೊಂದಿರುವ ಕಲ್ಲು ಸಹ ಇದೆ. ದ್ವಾರದ ಇಕ್ಕೆಲಗಳಲ್ಲಿ ಜಯ ಮತ್ತು ವಿಜಯ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ಮುಖಮಂಟಪಕ್ಕೆ ಹೊಂದಿಕೊಂಡಂತೆ ನಾಲ್ಕು ಕಂಬಗಳಿದ್ದು, ಅದರ ಮುಂದೆ ಒಂದೇ ನೇರವಾಗಿ ಸಾಲಾಗಿ ನಾಲ್ಕು ಕಂಬಗಳಿವೆ. ಮಧ್ಯದಲ್ಲಿರುವ ಒಂದು ಕಂಬದಲ್ಲಿ ಭಕ್ತ (ಸೇವಕ) ಇರುವುದನ್ನು ಗಮನಿಸಬಹುದಾಗಿದೆ. ಇದರ ಮುಂದೆ ದೀಪ ಸ್ತಂಭವನ್ನು ನಿಲ್ಲಿಸಲಾಗಿದೆ.

**ಈಶ್ವರ ದೇವಾಲಯ-ಬಿದಿರೆ (ಬಿದರೆ)**

ಬಿದರೆಯಲ್ಲಿರುವ ಈಶ್ವರ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಈ ಊರಿನ ಕಣಿಗಲನಾಥ ದೇವಾಲಯದ ಮುಂದೆ ನೆಟ್ಟ ಕಲ್ಲು ಶಾಸನದ ಪ್ರಕಾರ ಹೊಯ್ಸಳ ಮೊದಲನೆಯ ನರಸಿಂಹನ ಕಾಲದ ಕ್ರಿ.ಶ.1165 ರ ಶಾಸನವಿದೆ. ಈ ಶಾಸನವು 70 ಸಾಲುಗಳನ್ನು ಹೊಂದಿದೆ. ಆದರೆ ಈಶ್ವರ ದೇವಾಲಯದ ಬಗ್ಗೆ ಉಲ್ಲೇಖವಿಲ್ಲ. [29]

ಬಿದರೆಯ ಈಶ್ವರ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸಿ, ನವರಂಗವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಶುಕನಾಸಿ ಅಂಕಣದಲ್ಲಿ ನಂದಿಶಿಲ್ಪವನ್ನು ಇಡಲಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು, ಸುತ್ತಲೂ 12 ಗೋಡೆ ಕಂಬಗಳಿವೆ. ನವರಂಗದಲ್ಲಿ ಭೈರವ ಮತ್ತು ವಿಷ್ಣುವಿನ ಬಿಡಿ ಶಿಲ್ಪಗಳಿವೆ.

**ಸೋಮೇಶ್ವರ ದೇವಾಲಯ – ಅಣತಿ**

ಅಣತಿ ಗ್ರಾಮದ ಕೆರೆಯ ಹಿಂದೆ ಸೋಮೇಶ್ವರ ದೇವಾಲಯವಿದೆ. ಈ ದೇವಾಲಯದ ದಕ್ಷಿಣದಲ್ಲಿರುವ ಕಲ್ಲು ಚಪ್ಪಡಿ ಶಾಸನದ ಪ್ರಕಾರ ಮೈಸೂರು ಒಡೆಯರ ಕಾಲಕ್ಕೆ ಸೇರಿದ ನಂಜರಾಜಯ್ಯ ಒಡೆಯರ್ ಮೈಸೂರು ಅವರ ಆದೇಶ ಮೇರೆಗೆ ಚನ್ನರಾಯಪಟ್ಟಣ ಪ್ರಾಂತ್ಯದ ಲಕ್ಕಣ್ಣಯ್ಯ ಮತ್ತು ಚಂದನಯ್ಯ ಎಂಬುವವರು ಶಾಸನ ಹಾಕಿಸಿರುವುದು ತಿಳಿದುಬರುತ್ತದೆ.[30] ಆದರೆ ಅಣತಿಯ ಸೋಮೇಶ್ವರ ದೇವಾಲಯದ ಬಗ್ಗೆ ತಿಳಿದು ಬರುವುದಿಲ್ಲ. ಇಲ್ಲಿರುವ ಸೋಮೇಶ್ವರ ದೇವಾಲಯವು ಗರ್ಭಗೃಹ, ನವರಂಗ ಮತ್ತು ಮುಕಮಂಟಪವನ್ನು ಹೊಂದಿದೆ.

ಗರ್ಭಗುಡಿಯಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳ ಮಧ್ಯದಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ. ಅಲ್ಲದೆ ಗಣಪತಿ ಮತ್ತು ಸೂರ್ಯ ಶಿಲ್ಪಗಳಿವೆ. ನವರಂಗದ ಕಂಬಗಳು ಚೌಕ ಮತ್ತು ವೃತ್ತಾಕಾರವಾಗಿ ಮೂಡಿಬಂದಿದೆ. ಮುಖಮಂಟಪದಲ್ಲಿ ಗಂಗರ ಕಾಲದ ಮಾದರಿಯ ಕಂಬಗಳನ್ನು ಸೇರಿಸಲಾಗಿದೆ. ದೇವಾಲಯ ಮೇಲ್ಭಾಗದಲ್ಲಿ ಮೂರು ಕೋಷ್ಠಗುಡಿಗಳಿವೆ. ಗರ್ಭಗೃಹ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ವಿಮಾನವನ್ನು ನಿರ್ಮಿಸಲಾಗಿದೆ. ಈ ದೇವಾಲಯದ ಪಕ್ಕದಲ್ಲಿಯೇ ಒಂದು ಕೊಳವಿದ್ದು, ಇಲ್ಲಿ ಗಂಗರ ಕಾಲದ ಕಂಬಗಳನ್ನು ಕಾಣಬಹುದು. ಇದರಿಂದ ಈ ಭಾಗದಲ್ಲಿ ಗಂಗರ ಕಾಲಕ್ಕೆ ಸೇರಿದ ದೇವಾಲಯವಿದ್ದಿರಬಹುದು. ಪ್ರಾಯಶಃ ನಂತರ ಕಾಲಮಾನದಲ್ಲಿ ದೇವಾಲಯ ದುಃಸ್ಥಿತಿ ಹೊಂದಿ ಈ ರೀತಿಯ ಬೆಳವಣಿಗೆಗೆ ಕಾರಣವಾಗಿರಬಹುದೆಂದು ಗಮನಿಸಲಾಗಿದೆ.

**ಲಕ್ಷ್ಮೀಕಾಂತ ದೇವಾಲಯ–ಅಣತಿ**

ಚನ್ನರಾಯಪಟ್ಟಣ ಪ್ರಾಂತ್ಯದ ಅಣತಿ ಗ್ರಾಮದಲ್ಲಿ ಲಕ್ಷ್ಮೀಕಾಂತಸ್ವಾಮಿ ದೇವಾಲಯವಿದೆ. ಈ ದೇವಾಲಯದ ಗರ್ಭಂಕಣದ ಬಾಗಿಲ ಮೇಲೆ ದಕ್ಷಿಣೋತ್ತರ ತೋಲೆಗಳ ಮೇಲೆ ವಿಷ್ಣುವರ್ಧನನ ಆಡಳತದ ಕಾಲದ ಕ್ರಿ.ಶ.1139 ರ ಶಾಸನವಿದೆ. ಈ ಶಾಸನದಲ್ಲಿ ಹೊಯ್ಸಳರ ವಿಷ್ಣುವರ್ಧನನ ಬಿರುದುಗಳು ಕಂಡುಬರುತ್ತವೆ. [31] ಅಲ್ಲದೆ ಅದೇ ಬಾಗಿಲ ಪೂರ್ವಪಶ್ಚಿಮ ತೋಲೆಗಳ ಮೇಲೆ ಹೊಯ್ಸಳ ವಿಷ್ಣುವರ್ಧನ ಆಡಳತ ಕುರಿತು ಮತ್ತೊಂದು ಶಾಸನವಿದೆ. ಇದು ಸಹ ಬಿರುದು ಬಾವಳಿಗಳನ್ನು ತಿಳಸುತ್ತದೆ.[32] ಈ ದೇವಾಲಯವು ಗರ್ಭಗೃಹ, ಶುಕನಾಸ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಮೂಲಗರ್ಭಗೃಹದಲ್ಲಿ ಲಕ್ಷ್ಮೀನರಸಿಂಹನ ಮೂರ್ತಿ ಶಿಲ್ಪವಿದೆ. ಇಲ್ಲಿಯ ಲಲಾಟ ಬಿಂಬದಲ್ಲಿ ನರಸಿಂಹನ ಉಬ್ಬು ಶಿಲ್ಪವಿದೆ. ಶುಕನಾಸಿಯ ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ಕಡೆಯಲಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ಮಾದರಿಯನ್ನು ಹೊಂದಿರುವ ನಾಲ್ಕು ಕಂಬಗಳಿವೆ. ನವರಂಗಕ್ಕೆ ಹೊಂದಿಕೊಂಡಂತೆ ಮುಖಮಂಟಪದಲ್ಲಿಯೂ ನಾಲ್ಕು ಕಂಬಗಳಿವೆ. ಮುಂದೆ ದ್ವಾರಮಂಟಪವು ಕೂಡಿದ್ದು, ದ್ವಾರಮಂಟಪಕ್ಕೆ ನಾಲ್ಕು ಕಂಬಗಳನ್ನು ಸೇರಿಸಲಾಗಿದ್ದು, ಪ್ರವೇಶದ್ವಾರದ ಮೆಟ್ಟಿಲುಗಳನ್ನು ಸಹ ಸೇರಿಸಲಾಗಿದೆ.

**ನಾಗೇಶ್ವರ ದೇವಾಲಯ –ನವಿಲೆ**

ನವಿಲೆ ಗ್ರಾಮದಲ್ಲಿ ನಾಗೇಶ್ವರ ಶಿವದೇವಾಲಯವಿದೆ. ಈ ದೇವಾಲಯಕ್ಕೆ ಪೂರಕವಾಗಿ ಇಲ್ಲಿಯ ಕೆರೆಯ ಕೆಳಗೆ ನಾಗೇಶ್ವರ ದೇವಾಲಯದ ಮುಂದೆ ಇರುವ ಒಂದು ಕಲ್ಲುಕಂಬದ ಮೇಲೆ ಹೊಯ್ಸಳ ವಿಷ್ಣುವರ್ಧನನ ಕಾಲದ ಶಾಸನವಾಗಿದೆ. ಇದು ಸಹ ಬಿರುದುಬಾವಳಿಯನ್ನು ತಿಳಸುವಂತಹ ಶಾಸನವಾಗಿರುತ್ತದೆ. ಅಲ್ಲದೆ ನಾಗೇಶ್ವರ ದೇವರಿಗೆ ಪೂಜೆ ಪುನಸ್ಕಾರಕ್ಕೋಸ್ಕರ ಭೂಮಿಯನ್ನು ದಾನ ನೀಡಿರುವುದರ ಬಗ್ಗೆ ತಿಳಸುತ್ತದೆ. [33]

ಅದೇ ದೇವಾಲಯಕ್ಕೆ ಸಂಬಂಧಿಸಿದ ಕ್ರಿ.ಶ.16–17ನೇ ಶತಮಾನಕ್ಕೆ ಸೇರಿದ ಶಾಸನವಿದೆ. ಇದು ಇಲ್ಲಿನ ಎಲ್ಲಾ ಜನರಿಗೂ ಒಳ್ಳೆಯದು ಆಗಲಿ ಎಂಬ ವಿಚಾರವನ್ನು ವ್ಯಕ್ತಪಡಿಸುತ್ತದೆ. [34]

ನಾಗೇಶ್ವರ ದೇವಾಲಯದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಶುಕನಾಸಿಯ ಅಂಕಣದಲ್ಲಿ ನಂದಿಶಿಲ್ಪವನ್ನು ಇರಿಸಲಾಗಿದೆ. ಇಲ್ಲಿಯ ದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳನ್ನು ಕೊರೆದು ನಿಲ್ಲಿಸಲಾಗಿದೆ. ನವರಂಗವು ವಿಶಾಲವಾಗಿದ್ದು, ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಅಲ್ಲದೆ ನವರಂಗಕ್ಕೆ ಹೊಂದಿಕೊಂಡಂತೆ ಒಂದು ಗುಡಿಯಿದ್ದು,

ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ ಗಣಪತಿ, ಸೂರ್ಯ, ನಾಗದೇವತೆ, ಕುಮಾರ ಅಥವಾ ಸುಬ್ರಹ್ಮಣ್ಯ ಬಿಡಿ ಶಿಲ್ಪಗಳಿವೆ. ದೇವಾಲಯದ ಮುಖಮಂಟಪವು ಚೆನ್ನಾಗಿದ್ದು, ನಾಲ್ಕು ಕಂಬಗಳು ಸೇರಿದ್ದು ಎರಡು ಗೋಡೆ ಕಂಬಗಳನ್ನು ಸಹ ಸೇರಿಸಲಾಗಿದೆ. ಇದರ ಮುಂದೆ ಒಂದು ಗರುಡ ಕಂಬವಿದೆ.

**ಪಾರ್ವತಿ ದೇವಾಲಯ–ನವಿಲೆ**

ಪಾರ್ವತಿ ದೇವಾಲಯವು ಗರ್ಭಗೃಹ ತೆರೆದ ಶುಕನಾಸಿ ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಮುಖಮಂಟಪಕ್ಕೆ ಎದುರಾಗಿ ನಾಲ್ಕು ಕಂಬಗಳಿವೆ. ಮೂಲಗರ್ಭಗುಡಿಯಲ್ಲಿ ಪೀಠದ ಮೇಲೆ ಪಾರ್ವತಿ ಶಿಲ್ಪವನ್ನು ಇರಿಸಲಾಗಿದೆ. ಇದೇ ರೀತಿಯ ವಾಸ್ತು ಮಾದರಿಯನ್ನು ಸೋಮೇಶ್ವರ ದೇವಾಲಯ ಹೊಂದಿದೆ.

**ಲಕ್ಷ್ಮೀಕಾಂತ ದೇವಾಲಯ–ನವಿಲೆ**

ಚನ್ನರಾಯಪಟ್ಟಣ ಪ್ರದೇಶದಲ್ಲಿನ ನವಿಲೆ ಗ್ರಾಮದಲ್ಲಿರುವ ಲಕ್ಷ್ಮೀಕಾಂತ ದೇವಾಲಯದ ಮುಂದೆ ಇರುವ ಕಲ್ಲಿನ ಶಾಸನದ ಪ್ರಕಾರ ಹೊಯ್ಸಳ ಅರಸ ಎರಡನೆಯ ಬಲ್ಲಾಳ ಕಾಲದ ಶಾಸನವಿದೆ. ಇದರ ಕಾಲ ಕ್ರಿ.ಶ.1218[35] ಈ ದೇವಾಲಯವು ಉತ್ತರಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ, ನವರಂಗವನ್ನು ಹೊಂದಿದೆ.(ಚಿತ್ರ–59) ಮೂಲಗರ್ಭಗೃಹದಲ್ಲಿ ಲಕ್ಷ್ಮೀಕಾಂತ ದೇವರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಶುಕನಾಸಿ ಭಾಗದಲ್ಲಿ ಯಾವುದೇ ರೀತಿಯ ಶಿಲ್ಪವಾಗಲಿ ಕಂಡುಬರುವುದಿಲ್ಲ. ಆದರೆ ಶುಕನಾಸಿಯ ದ್ವಾರದ ನಿಲುವು ಕಂಬದ ಮೇಲ್ಭಾಗದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ನವರಂಗವು ವಿಶಾಲವಾಗಿದ್ದು, ಮಧ್ಯದಲ್ಲಿ ಸುಂದರವಾದ ನಾಲ್ಕುಕಂಬಗಳಿವೆ. ಈ ನಾಲ್ಕು ಕಂಬಗಳ ಮೇಲ್ಭಾಗದಲ್ಲಿರುವ ಭುವನೇಶ್ವರಿಯನ್ನು ಕಡೆಯಲಾಗಿದೆ. ನವರಂಗದ ಒಳಭಾಗದ ಗೋಡೆಯ ಸುತ್ತಲೂ 12 ಗೋಡೆಗಂಬಗಳನ್ನು ಸೇರಿಸಲಾಗಿರುತ್ತದೆ.

**ಮಲ್ಲೇಶ್ವರ ದೇವಾಲಯ–ಸಂತೆಶಿವರ**

ಸಂತೆ ಶಿವರ ಗ್ರಾಮದಲ್ಲಿ, ಅಮೃತೇಶ್ವರ ದೇವಾಲಯ, ಮಲ್ಲೇಶ್ವರ ದೇವಾಲಯ, ಗಂಗದೇಶ್ವರ ದೇವಾಲಯಗಳಿವೆ. ಅವುಗಳಲ್ಲಿ ಮಲ್ಲೇಶ್ವರ ದೇವಾಲಯವು ಸಹ ಒಂದು ಪ್ರಾಚೀನ ಕಾಲದ ದೇವಾಲಯವಾಗಿದೆ. ಸಂತೆಶಿವರದ ಕೆರೆಯ ಬಳಿ ಇರುವ ಮಲ್ಲೇಶ್ವರ

ದೇವಾಲಯದ ಮುಂದೆ ಇರುವ ಶಾಸನದ ಪ್ರಕಾರವಾಗಿ ನೋಡುವುದಾದರೆ ಕ್ರಿ.ಶ.1236ರ ಡಿಸೆಂಬರ್ 25 ರ ಪ್ರಕಾರ ಹೊಯ್ಸಳರ ದೊರೆ ಸೋಮೇಶ್ವರ ದೇವಾಲಯಕ್ಕೆ ದಾನಧರ್ಮ ನೀಡಿರುವುದರ ಬಗ್ಗೆ ತಿಳಿಸುತ್ತದೆ. [36] ಮಲ್ಲೇಶ್ವರ ದೇವಾಲಯವು ಶುದ್ಧ ದ್ರಾವಿಡ ಶೈಲಿಯ ದೇವಾಲಯವಾಗಿದೆ. ಇದು ಗರ್ಭಗೃಹ, ಶುಕನಾಸ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶುಕನಾಸಿಯಲ್ಲಿ ನಂದಿಯ ಶಿಲ್ಪವನ್ನು ಕೂರಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳನ್ನು ಸೇರಿಸಲಾಗಿದ್ದು, ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ಕಡೆಯಲಾಗಿದೆ. ನವರಂಗದಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿವೆ. ಗಣಪತಿ, ವೀರಭದ್ರ, ಭೈರವ, ಸೂರ್ಯ ಶಿಲ್ಪಗಳಿವೆ. ಇಲ್ಲಿರುವ ಗಂಗದೇಶ್ವರ ದೇವಾಲಯವು ಸಹ ಹೊಯ್ಸಳರ ಕಾಲದ ದೇವಾಲಯವಾಗಿದೆ.

**ಬಸದಿಗಳು**

**ಶ್ರವಣಬೆಳಗೊಳ**

ಶ್ರವಣಬೆಳಗೊಳವು ಕ್ರಿ.ಪೂರ್ವ ಮೂರನೇ ಶತಮಾನದಿಂದ ಇಂದಿನವರೆಗೆ ಭಾರತದ ಧಾರ್ಮಿಕ ಪರಂಪರೆಯ ಉಜ್ವಲತೆಯನ್ನು ಎತ್ತಿ ಹಿಡಿರುವ ಕ್ಷೇತ್ರವಾಗಿದೆ. ಶ್ರವಣಬೆಳಗೊಳದಲ್ಲಿ ಒಬ್ಬ ಮುನಿಯು ಮರಣವನ್ನಪ್ಪಿದ ದಿನದಿಂದ ಬೆಳ್ಗೊಳದ ಇತಿಹಾಸ ಪ್ರಾರಂಭವಾಗುತ್ತದೆ. ಸಮಾಧಿ ನಿಶಿಧಿ, ಸಲ್ಲೇಖನ, ಸನ್ಯಾಸ, ಆರಾಧನಾ, ಪಂಚನಮಸ್ಕಾರ, ಇಂಗಿಣೀ ಮುಂತಾದ ಹೆಸರುಗಳಿಂದ ಕರೆಸಿಕೊಂಡಿರುವ ಮರಣದ ವಿಧಿಗಳಿವೆ. ನಿಶಿಧಿ ಎಂದರೆ ಸ್ಮಾರಕವೆಂದರ್ಥ. ಶಾಸನಗಳಲ್ಲಿ ಶ್ರವಣ ಬೆಳಗೊಳವನ್ನು ಕಟವಸ್ತ್ರ, ಕಟಪ, ಕಟ್ವಿಪ್ಪು, ವೆಳ್ಗೊಳ, ಬೆಳ್ಗೊಳ, ದವಳತೀರ್ಥ, ಶ್ವೇತ ಸರೋವರ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಶ್ರವಣಬೆಳಗೊಳವು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿಗೆ ಸೇರಿದ ಒಂದು ಪ್ರಾಚೀನ ಊರು. ದಕ್ಷಿಣ ಭಾರತದ ಜೈನರ ಕೇಂದ್ರಗಳಲ್ಲಿ ಇದು ಅತ್ಯಂತ ಪ್ರಮುಖವಾದ ನೆಲೆಯಾಗಿದೆ. ಶ್ರವಣ ಬೆಳಗೊಳವು ಪ್ರಕೃತಿಯ ಹಿನ್ನೆಲೆಯಿಂದ ಎರಡು ಬೆಟ್ಟಗಳಿವೆ. ಈ ಬೆಟ್ಟಗಳಿಗೆ ಇಂದ್ರಗಿರಿ (ವಿಂದ್ಯಗಿರಿ) ಮತ್ತು ಚಂದ್ರಗಿರಿ (ಚಿಕ್ಕಬೆಟ್ಟ) ಎಂದು ಕರೆಯಲಾಗಿದೆ. ದೊಡ್ಡಬೆಟ್ಟವು ಸಮುದ್ರ ಮಟ್ಟದಿಂದ ಸುಮಾರು 3347 ಅಡಿ ಎತ್ತರವಿದೆ. ಚಿಕ್ಕಬೆಟ್ಟವು ಸಮುದ್ರಮಟ್ಟದಿಂದ 3052 ಅಡಿಗಳಷ್ಟು ಎತ್ತರವಾಗಿದೆ.

ಶ್ರವಣಬೆಳಗೊಳ ಚಾವುಂಡರಾಯನ ಕಾಲದಲ್ಲಿ ಕೆತ್ತಿದ ಗೊಮ್ಮಟನಿಂದ ಹೆಸರು ಪಡೆದಿದೆ ಎಂದಾದರೂ ಸಹ ಅದಕ್ಕೂ ಹಿಂದೆ ಇದು ಮೋಕ್ಷ ಭೂಮಿಯಾಗಿತ್ತು. ಬಹುದೂರದ ಪ್ರದೇಶದಿಂದ ವ್ರತ ಸ್ವೀಕರಣೆ ಮಾಡಿ ದೇಹ ತ್ಯಾಗಕ್ಕಾಗಿಯೇ ಮುನಿಗಳು ಶ್ರಾವಕರು ಇಲ್ಲಿಗೆ

ಬರುತ್ತಿದ್ದರು. ಹೀಗಾಗಿ ಚಾವುಂಡರಾಯನಿಗಿಂತಲೂ ಹಿಂದಿಗಿಂತಲೂ ಇದು ಜನ ಸಂಪರ್ಕ ಹೊಂದಿದ್ದ ನೆಲೆಯಾಗಿತ್ತು. ಚಿಕ್ಕಬೆಟ್ಟ, ದೊಡ್ಡಬೆಟ್ಟ ಹಾಗೂ ಶ್ರವಣಬೆಳಗೊಳ ಗ್ರಾಮದಲ್ಲಿರುವ ಬಸದಿಗಳ ಬಳ್ಳಿ, ಹಾಗೂ ಬಂಡೆಗಳ ಮೇಲೆ ದೊರೆತಿರುವ ಶಾಸನಗಳು ಬೇರೆ ಎಲ್ಲೂ ಕಂಡುಬಂದಿಲ್ಲ. ಕ್ರಿ.ಶ. ಸುಮಾರು 5ನೇ ಶತಮಾನದಿಂದ ಕ್ರಿ.ಶ.19ನೇ ಶತಮಾನದವರೆಗೆ ನಿರಂತರವಾದ ಶಾಸನಗಳು ಕಂಡುಬಂದಿವೆ. ಸುಮಾರು 525 ಶಾಸನಗಳು ದೊರೆತಿವೆ. ಶ್ರವಣಬೆಳಗೊಳದ ಇತಿಹಾಸ ನಮಗೆ ತಿಳಿದುಬರುವುದು ಚಿಕ್ಕಬೆಟ್ಟದಲ್ಲಿ ಕೆತ್ತಿರುವ ಕ್ರಿ.ಶ.6ನೇ ಶತಮಾನದ ಶಾಸನದಿಂದ ಚಿಕ್ಕಬೆಟ್ಟ ಅಥವಾ ದೊಡ್ಡಬೆಟ್ಟದ ಮಧ್ಯೆ ನೀರಿನ ಮೊರಡಿಗಳು ಇದ್ದವು.[37]

ಶ್ರುತಕೇವಲಿಯಾದ ಭದ್ರಬಾಹು ಮುನಿಗಳು ಉಜ್ಜೈಯಿನಿಯಲ್ಲಿದ್ದಾಗ ಉತ್ತರ ಭಾರತದಲ್ಲಿ 12 ವರ್ಷಗಳ ಕಾಲ ಭೀಕರ ಕ್ಷಾಮಬರುವುದಾಗಿ ತಿಳಿದಿತ್ತು. ಆಗ ಭದ್ರಬಾಹುಮುನಿಯು ಮುನಿ ಸಂಘದೊಂದಿಗೆ ದಕ್ಷಿಣಕ್ಕೆ ಬರುತ್ತಾರೆ. ಶ್ರವಣಬೆಳಗೊಳದಲ್ಲಿ ನೆಲೆನಿಂತಾಗ ಉಳಿದ ಮುನಿ ಸಮುದಾಯ ಮತ್ತು ದಕ್ಷಿಣಕ್ಕೆ ಸಾಗಿ ಮಧುರೆ ಬಳಿ ಸೇವೆ ನಿಲ್ಲುತ್ತಾರೆ. ಭದ್ರಬಾಹು ಮುನಿ ಶ್ರವಣಬೆಳಗೊಳದ ಕಲ್ಬಪ್ಪುವಿನಲ್ಲಿ ನೆಲೆ ನಿಂತ ಮೇಲೆ ಅಲ್ಲೇ ದೇಹಾವಸಾನವಾಗುತ್ತದೆ. ಈ ಭದ್ರಬಾಹುವಿನೊಂದಿಗೆ ಚಂದ್ರಗುಪ್ತ ಮುನಿ ನಿಲ್ಲುತ್ತಾನೆ. ತನ್ನ ಗುರು ಅರ್ಹತ್ ಪದವಿ ಪಡೆದ ಮೇಲೆ ಚಂದ್ರಗುಪ್ತ ಮುನಿಯು ಚಿಕ್ಕಬೆಟ್ಟದಲ್ಲಿಯೇ ನೆಲೆ ನಿಂತು ಸಲ್ಲೇಖನ ವ್ರತ ಸ್ವೀಕರಿಸಿ ದೇಹತ್ಯಾಗ ಮಾಡುತ್ತಾನೆ. ಇಲ್ಲಿಂದಾಚೆಗೆ ಈ ಬೆಟ್ಟ ಜೈನರಿಗೆ ಬಹು ಪವಿತ್ರ ಸ್ಥಳವಾಗಿ ಹೆಸರುವಾಸಿಯಾಗಿದೆ.

ಭದ್ರಬಾಹುವಿನ ನಂತರ ಅನೇಕ ವ್ಯಕ್ತಿಗಳು ಈ ಸ್ಥಳದ ಪಾವಿತ್ರತೆಗೆ ಕಾರಣರಾಗಿದ್ದಾರೆ. ಪರಂಪರಾಗತರಾಗಿ ಬಂದಿರುವ ನಂಬಿಕೆಯಂತೆ ಭದ್ರಬಾಹುಮುನಿಗಳು ಇಲ್ಲಿ ಬಂದು ನೆಲೆಸಿ ಈ ಕ್ಷೇತ್ರ ತೀರ್ಥಕ್ಷೇತ್ರವಾಗಲು ಕಾರಣರಾಗಿರುತ್ತಾರೆ. ಇದರ ನಂತರ ಅವರ ಶಿಷ್ಯ ಚಂದ್ರಗುಪ್ತ ಮುನಿ ಇಲ್ಲೇ ಇದ್ದು, ದೇಹತ್ಯಾಗ ಮಾಡಿದ್ದು ಈ ಕ್ಷೇತ್ರಕ್ಕೆ ಮುನಿಗಳು ಬಂದು ಹೋಗಲು ಕಾರಣವಾಯಿತು.

## ಚಿಕ್ಕಬೆಟ್ಟದ ಮೇಲಿರುವ ಬಸದಿಗಳು

1. ಭದ್ರಬಾಹು ಗುಹೆ
2. ಚಂದ್ರಗುಪ್ತ ಬಸದಿ
3. ಚಂದ್ರಪ್ರಭ ಬಸದಿ
4. ಎರಡು ಕಟ್ಟೆ ಬಸದಿ
5. ಮಜ್ಜಿಗಣ ಬಸದಿ
6. ಸುಪಾರ್ಶ್ವನಾಥ ಬಸದಿ
7. ಸವತಿ ಗಂಧವಾರಣ ಬಸದಿ
8. ಕತ್ತಲೆ ಬಸದಿ
9. ತೇರಿನ ಬಸದಿ
10. ಚಾವುಂಡರಾಯ ಬಸದಿ
11. ಶಾಸನ ಬಸದಿ
12. ಇರುವ ಬ್ರಹ್ಮದೇವರ ಗುಡಿ
13. ಶಾಂತೀಶ್ವರ ಬಸದಿ
14. ಪಾರ್ಶ್ವನಾಥ ಬಸದಿ
15. ಶಾಂತನಾಥ ಬಸದಿ
16. ಕೊಗೆ ಬ್ರಹ್ಮದೇವರ ಕಂಬ
17. ಮಾನಸ್ತಂಭ
18. ಕಂಚಿನ ದೋಣಿ
19. ಲಕ್ಕಿ ದೋಣಿ
20. ಈನನ ದೋಣಿ
21. ಗಂಗರಾಜನ ಮಂಟಪ
22. ಮಹಾನವಮಿ ಮಂಟಪ

### 1. ಭದ್ರಬಾಹು ಗುಹೆ

ಎರಡು ಸ್ಮಾರಕಗಳನ್ನುಳಿದ ಚಿಕ್ಕಬೆಟ್ಟದ ಎಲ್ಲಾ ಕಟ್ಟಡಗಳು ಕೋಟೆಯ ಒಳಗೆ ಕಂಡುಬರುತ್ತದೆ. ಭದ್ರಬಾಹು ಮುನಿಗಳು ಕಳ್ವಪ್ಪಿನ್ ಅಂದರೆ (ಚಿಕ್ಕಬೆಟ್ಟದ) (ಚಂದ್ರಗಿರಿಬೆಟ್ಟದ) ಮೇಲೆ ನೆಲೆ ನಿಂತಾಗ ಅದರ ಶಿಷ್ಯವರ್ಗ, ಧರ್ಮ ಅನುಯಾಯಿಗಳು ಭದ್ರಬಾಹು ಮುನಿಗಳ

ಪ್ರಭಾವಕ್ಕೆ ಒಳಗಾದ ಸ್ಥಳೀಯರು ಕಳ್ವಪ್ಪಿನ್ ಬೆಟ್ಟದಲ್ಲಿ ಸ್ಥಳವತ್ತ ಬಂದು ಹೋಗುತ್ತಾರೆ. ಈ ಸ್ಥಳ ಸಹಜ ಗುಹೆಯಾಗಿದ್ದು, ದಕ್ಷಿಣ ಮತ್ತು ಪಶ್ಚಿಮಕ್ಕೆ ಮುಖಮಾಡಿ ನಿಂತಿದೆ. ಭದ್ರಬಾಹು ಮತ್ತು ಚಂದ್ರಗುಪ್ತ ಮುನಿಗಳು ಕ್ರಿಶ.3ನೆಯ ಶತಮಾನದಲ್ಲಿ ಇಲ್ಲಿದ್ದು, ಸಮಾಧಿ ಮರಣ ಹೊಂದಿದರೆಂದು ಐತಿಹ್ಯದಿಂದ ತಿಳಿದುಬರುತ್ತದೆ. ಗುಹೆಯಲ್ಲಿ ಕಂಡುಬರುವ ಪಾದ ಮುದ್ರಿಕೆಗಳು ಭದ್ರಬಾಹು ಮುನಿಯ ಸಾಂಕೇತಿಕ ಚಿಹ್ನೆಗಳಾಗಿವೆ. ಅವುಗಳ ಬಳಿ ಇರುವ ಶಾಸನವನ್ನು ಕ್ರಿ.ಶ.11ನೆಯ ಶತಮಾನದಲ್ಲಿ ಜಿನಚಂದ್ರ ಮುನಿ ಕೆತ್ತಿಸಿದನೆಂದು ತಿಳಿಸಲಾಗಿದೆ. ಈಗ ಜನಸಾಮಾನ್ಯರು ಭದ್ರಬಾಹು ಗುಹೆಯೆಂದು ಮುನಿಗಳು ತಪಸು ಮಾಡಿದ ಸ್ಥಳವೆಂದು ಗುಹೆಯ ದ್ವಾರವು ಕ್ರಿ.ಶ.16ನೆಯ ಶತಮಾನದಲ್ಲಿ ನಿರ್ಮಿಸಿರಬೇಕೆಂದು ಹೇಳಬಹುದಾಗಿದೆ. ಇದಕ್ಕೆ ಪೂರಕವಾಗಿ ಕ್ರಿ.ಶ.6ನೇ ಶತಮಾನದಲ್ಲಿ ಕರ್ಣ್ಣಾಕರ್ಣಿತವಾಗಿದ್ದ ಭದ್ರಬಾಹು ಕಥೆಗೆ ರೂಪ ನೀಡಿ ಕಳ್ವಪ್ಪುವಿನಲ್ಲಿ ಪ್ರಭಾಚಂದ್ರಮುನಿಯ ವಿಷಯವನ್ನು ತಿಳಿಸುವ ಹಿನ್ನೆಲೆಯಿಂದ ಭದ್ರಬಾಹುವಿನ ವಿಚಾರವನ್ನು ಸೇರಿಸಿ ಶಾಸನವನ್ನು ಬರೆಸಲಾಗಿದೆ. ಶ್ರವಣಬೆಳಗೊಳದಲ್ಲಿ ಇದು ಅತ್ಯಂತ ಪ್ರಾಚೀನ ಶಾಸನವಾಗಿದೆ. ಗುಹೆಯ ಮೇಲ್ಭಾಗದಲ್ಲಿರುವ ಮುಂಭಾವಣಿಯನ್ನು ಗಮನಿಸಿದರೆ ಇದು ಕ್ರಿ.ಶ.17ನೇ ಶತಮಾನಕ್ಕೆ ಸೇರಿಸಬಹುದಾಗಿದೆ.

## 2. ಚಂದ್ರಗುಪ್ತ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ಚಂದ್ರಗುಪ್ತನು ಇಲ್ಲವೆ ಅವನ ನೆನಪಿಗಾಗಿ ಆತನ ಶಿಷ್ಯರು ನಿರ್ಮಿಸಿದ್ದರೆಂದು ಸ್ಥಳಪುರಾಣಗಳಿಂದ ತಿಳಿದುಬರುತ್ತದೆ. ಇದರಿಂದ ಇದನ್ನು ಚಂದ್ರಗುಪ್ತ ಬಸದಿ ಎಂದು ಕರೆಯಲಾಗಿದೆ. ಇದರ ವಾಸ್ತು ಲಕ್ಷಣಗಳನ್ನು ಗಮನಿಸಿದರೆ, ಇದು ಕ್ರಿ.ಶ9ನೇ ಶತಮಾನಕ್ಕೆ ಸೇರಿರುತ್ತದೆ ಎಂದು ಹೇಳಬಹುದು. ಪ್ರಾಯಶಃ ಇದನ್ನು ಗಂಗರ ಮನೆತನದ ಇಮ್ಮಡಿ ಶಿವಮಾರನ ಪುತ್ರ ಶ್ರೀಪುರುಷನು ನಿರ್ಮಿಸಿದ್ದನೆಂದು ಸಹ ತಿಳಿದುಬರುತ್ತದೆ. ತಳವಿನ್ಯಾಸದಲ್ಲಿ ಮೂರು ಗರ್ಭಗೃಹಗಳನ್ನು ಹೊಂದಿದ್ದು, ಶುಕನಾಸ, ಆಯತಾಕಾರದ ಸಭಾಮಂಟಪ, ಮುಖಮಂಟಪವನ್ನು ಹೊಂದಿದೆ. ಮಧ್ಯದ ಗರ್ಭಗೃಹದಲ್ಲಿ ಪಾರ್ಶ್ವನಾಥ ತೀರ್ಥಂಕರನ ಪರ್ಯಂಕಾಸೀನ ಶಿಲ್ಪವಿದೆ. ಈ ಮಂಟಪದಲ್ಲಿ ಪದ್ಮಕಾಂತ ಪ್ರಕಾರದ ಕಂಬಗಳು ಗಮನಾರ್ಹವಾಗಿವೆ. ಈ ಬಸದಿಯ ಪ್ರಮುಖ ಆಕರ್ಷಣೆ ಕೈಸಾಲೆಗೆ ಹಾಕಿರುವ ಜಾಲಂಧ್ರ ಹಾಗೂ ಬಾಗಿಲವಾಡ ಜಾಲಂಧ್ರದ ಬಲಗಡೆ ದಾಸೋಜ ಎಂಬ ಹೊಯ್ಸಳ ಕಾಲದ ಶಿಲ್ಪಿಯ ಹೆಸರಿದೆ. ಈ ಜಾಲಂಧ್ರವು ಜೈನ ಕಥೆಯನ್ನು ಹೇಳುವುದಾಗಿದ್ದು, ಚಿಕಣಿ ಶಿಲ್ಪಗಳಿಂದ ತುಂಬಿದೆ. ಡಾ.ಆರ್.ಸುಂದರವರು ಚಂದ್ರಗುಪ್ತ ಬಸದಿ ಗರ್ಭಗೃಹವನ್ನು ಕ್ರಿ.ಶ.10–11ನೇ ಶತಮಾನದಲ್ಲಿ ಮೂರು ಗರ್ಭಗೃಹಗಳಾಗಿ ವಿಂಗಡಿಸಿರುತ್ತಾರೆಂದು ಹೇಳಿರುತ್ತಾರೆ.[1]

ಬಸದಿಯ ಒಳಗೆ ಇರುವ ಮೂರು ಗರ್ಭಗೃಹಗಳಲ್ಲಿ ಮಧ್ಯದಲ್ಲಿರುವುದು ದೊಡ್ಡದಾಗಿದೆ. ಶುಕನಾಸದ ಬಾಗಿಲವಾಡ ಕೆಲಸೂರ ಚಂದ್ರಪ್ರಭ ಬಸದಿಯ ಸಪ್ತಮಾತೃಕಾ ದೇವಾಲಯದ ಬಾಗಿಲವಾಡವನ್ನು ಹೋಲುತ್ತದೆ. ಇಲ್ಲಿ ಕಂಬಗಳ ಮೇಲೆ ವಲ್ಲಭಿಕಪೋತ ಬಂದಿದ್ದು ಬಹು ಅಲಂಕೃತವಾಗಿದೆ. ಇದಕ್ಕೆ ಹೊಂದಿಕೊಂಡಂತೆ ಇರುವ ಜಾಲಂಧ್ರವನ್ನು ಅಲ್ಲಿನ ದಾಸೋಜ ಎಂಬ ಹೆಸರನ್ನು ಗಮನಿಸಿದರೆ ಹೊಯ್ಸಳರ ಕಾಲಕ್ಕೆ ಸೇರುತ್ತದೆ. [2]

## ೩. ಚಂದ್ರಪ್ರಭ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯು ಗಂಗ ಮನೆತನದ ಶ್ರೀಪುರಷನ ಪುತ್ರ ಶಿವಮಾರನ ಕಾಲದಲ್ಲಿ ಅಂದರೆ ಕ್ರಿ.ಶ.ಸುಮಾರು ೮ನೆಯ ಶತಮಾನದ ನಿರ್ಮಾಣವಾಗಿದೆ. ಈ ಬಸದಿಯ ಪಶ್ಚಿಮಕ್ಕೆ ಶಿವಮಾರನ ಬಸದಿಯೆಂಬ ಶಾಸನ ದೊರೆತಿದೆ. ಇದನ್ನು ವಕ್ರಗಚ್ಛದ ಬಸದಿ ಎಂದು ಸಹ ಕರೆಯಲಾಗಿದೆ. ಕ್ಷ.ಶೆಟ್ಟರ್‌ರವರು ಶಾಸನಕ್ಕೂ ಬಸದಿಗೂ ಸಂಬಂಧವಿಲ್ಲ ಎಂದು ಹೇಳಿದ್ದಾರೆ. ಆ ಸುಂದರವರು 11ನೇ ಶತಮಾನದ ಕೊನೆಯ ಕಾಲಕ್ಕೆ ಸೇರಿಸಬಹುದು ಎಂದಿದ್ದಾರೆ. ಎಂ.ಎಚ್.ಕೃಷ್ಣರವರು ಇದರ ಕಾಲವನ್ನು ಕ್ರಿ.ಶ. ಸುಮಾರು ೮೦೦ ಎಂದಿದ್ದಾರೆ. ಈ ಬಸದಿ ಗಂಗರ ಕಾಲದ ಅನೇಕ ಲಕ್ಷಣಗಳನ್ನು ಪಡೆದುಕೊಂಡಿರುವುದರಿಂದ ಇದನ್ನು ಗಂಗರ ಕಾಲದ ಬಸದಿಗಳಲ್ಲಿ ಒಂದು ಎಂದು ಹೇಳಬಹುದಾಗಿದೆ. [3] ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಚಂದ್ರಪ್ರಭನಾಥ ತೀರ್ಥಂಕರನ ಪರ್ಯಂಕಾಸೀನ ಶಿಲ್ಪವಿದೆ. ನವರಂಗದಲ್ಲಿ ಬ್ರಹ್ಮಕಾಂತ ಪ್ರಕಾರದ ಸ್ತಂಭಗಳಿವೆ. ಅಧಿಷ್ಠಾನ ಭಾಗ ಈಗ ಉಳಿದು ಬಂದಿಲ್ಲ. ಗೋಡೆಗಳು ಇಂದಿಗೂ ಇಟ್ಟಿಗೆಯದಾಗಿದೆ. ಇದರ ಬಾಗಿಲುವಾಡವು ಮೂಲ ರೂಪದಲ್ಲ. ನವರಂಗದ ಕಂಬಗಳು ಬ್ರಹ್ಮಕಾಂತ ರೀತಿಯ ಕಂಬಗಳಂತಿದ್ದು, ಚೌಕಾಕಾರದ ಪಿಂಡಿ, ವೃತ್ತಾಕಾರದ ಶಲಾಕ, ಕುಂಭ ಮುಚ್ಚಳವನ್ನು ಹೊಂದಿದೆ. ಈ ಬಸದಿಯ ಬೋದಿಗೆ ಗಂಗರ ಕಾಲದ ಸರಳ ಬೋದಿಗೆಯಾಗಿದೆ. ನವರಂಗದಲ್ಲಿ ಶ್ಯಾಮಾಯಕ್ಷ ಮತ್ತು ಜ್ವಾಲಿನೀ ಯಕ್ಷಿಯೆಂದಿರುತ್ತಾರೆ. ಎರಡು ಶಿಲ್ಪಗಳೂ ಸಹ ಆಭರಣಗಳ ಹೆಚ್ಚಿನ ಅಲಂಕಾರವಿದೆ. ಇಬ್ಬರು ಕುಳಿತಿದ್ದು ಯಕ್ಷಿಯ ವೈಭವವನ್ನು ಸಾರುವಂತೆ ವಿಸ್ಮಯ ಹಸ್ತವನ್ನು ಹೊಂದಿರುತ್ತಾಳೆ.

## 4. ಎರಡುಕಟ್ಟೆ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ಗಂಗರಾಜ ಹೆಂಡತಿ ಲಕ್ಷ್ಮೀಮತಿ ಎಂಬುವವಳು ಕ್ರಿ.ಶ.1117 –18 ರಲ್ಲಿ ಕಟ್ಟಿಸಿದಳು. ಗರ್ಭಗೃಹದಲ್ಲಿ ಆದಿನಾಥ ತೀರ್ಥಂಕರನ

ಶಿಲ್ಪವನ್ನು ಇಡಲಾಗಿದೆ. ಈ ಬಸದಿಗೆ ಆದಿನಾಥ ಬಸದಿ ಎಂತಲೂ ಸಹ ಕರೆಯುತ್ತಾರೆ. ಡಾ.ದೇವರಕೊಂಡರೆಡ್ಡಿರವರ ಪ್ರಕಾರವಾಗಿ ಗಂಗ ಶ್ರೀಪುರುಷನ ಮಗನಾದ ದುಗ್ಗ ಮಾರನು ಕಟ್ಟಿಸಿರಬೇಕೆಂದು ತಿಳಿಸಿದ್ದಾರೆ. ಬಸದಿಯ ನವರಂಗ ಕಂಬವೊಂದರಲ್ಲಿ ಅಪ್ರಕಟಿತ ಶಾಸನದ್ಲಲಿ 'ನವಒಣ್ಣದ ನಾಲ್ಕು ಕಮ್ಮಮನ್ ಗುಗ್ಗಮಾರೋವಜ– ಮಾಡಿದೋನ್' ಎಂದು ಬರೆದಿದೆ. ಈ ಶಾಸನದ ಬಗ್ಗೆ ಷ–ಶೆಟ್ಟರ್‌ರವರು ಇದರ ಲಿಪಿ ಹಿನ್ನೆಲೆಯಿಂದ 9–10ನೆಯ ಶತಮಾನಕ್ಕೆ ಸೇರಿದ್ದೆಂದು ತಿಳಿಸುತ್ತಾನೆ. ದುಗ್ಗಮಾರನ ಕಾಲ ಕ್ರಿ.ಶ.ಸುಮಾರು 770 ಈ ಶಾಸನದ ಲಿಪಿ ಆ ಕಾಲಕ್ಕೆ ಸೇರಿರುವಂತಿದೆ. ಆದ ಕಾರಣ ಈ ಕಂಬಗಳನ್ನು 8ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿಸಬಹುದಾಗಿದೆ. ಈ ಎರಡು ಕಟ್ಟೆಬಸದಿ ಬಳಿಯಿರುವ ಶಾಸನದಲ್ಲಿ ಗಂಗರಾಜ ತನ್ನ ಪತ್ನಿ ಹಾಗೂ ತಾಯಿ ಕಟ್ಟಿಸಿದ ಬಸದಿಗೆ ಪರಮ ಎಂಬ ಗ್ರಾಮವನ್ನು ದಾನ ನೀಡಿದ ವಿಚಾರ ತಿಳಿದುಬರುತ್ತದೆ. ಆದರೆ ಇಲ್ಲಿ ಕಟ್ಟಿಸಿದ ಎಂಬ ಪದಕ್ಕಿಂತಲೂ ಜೀರ್ಣೋದ್ಧಾರ ಎಂದು ತಿಳಿಯುವುದು ಒಳ್ಳೆಯದು. ಈ ಬಸದಿಯು ಉತ್ತರಾಭಿಮುಖವಾಗಿದ್ದು, ಇದರ ತಳವಿನ್ಯಾಸದಲ್ಲಿ ಶುಕನಾಸ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಗರ್ಭಗೃಹ ಮತ್ತು ಶುಕನಾಸ ಒಂದೇ ಅಳತೆಯನ್ನು ಹೊಂದಿದೆ. ನವರಂಗ ಆಯತಾಕಾರವಾಗಿದ್ದು, ಮಧ್ಯದಲ್ಲಿ ಆರು ಕಂಬಗಳನ್ನು ಸೇರಿಸಲಾಗಿರುತ್ತದೆ. ಈ ನಾಲ್ಕು ಕಂಬಗಳು ದಪ್ಪವಾಗಿದ್ದು, ಗಂಗರ ಕಾಲದ ಸ್ತಂಭಗಳ ವಾಸ್ತು ರಚನೆಗಳನ್ನು ಹೊಂದಿದೆ. ಉಳಿದ ಎರಡು ಕಂಬಗಳು ಆಕಾರದಲ್ಲಿ ಚಿಕ್ಕದಾಗಿದೆ. ಗರ್ಭಗೃಹದಲ್ಲಿ ದೇವರ ಪೀಠ ಹಳೆಯದಾಗಿದ್ದು, ಯಕ್ಷ–ಯಕ್ಷಿಯರ ಶಿಲ್ಪಗಳು ಸಹ ನಂತರದ ಕಾಲದ್ದು, ಹಿಂಬದಿಯ ಚಪ್ಪಡಿಗಲ್ಲಿನ ಪೀಠಕ್ಕೆ ಹೊಂದಿಕೊಳ್ಳುವಂತೆ ಮುಂದಿನ ಪೀಠವನ್ನು ಕೆತ್ತಿ ಜೋಡಿಸಲಾಗಿದೆ. ಗರ್ಭಗೃಹದಲ್ಲಿ ಆದಿನಾಥನ ಶಿಲ್ಪವಿದೆ. ಇದಕ್ಕೆ ಪ್ರಭಾವಳಿಯಿದ್ದು ಇಕ್ಕೆಲಗಳಲ್ಲಿ ಚಾಮರಧಾರಿಯರನ್ನು ಕಡೆಯಲಾಗಿದೆ. ಇದು ಅಲ್ಲದೆ ಕೂಷ್ಮಾಂಡಿನಿಯ ಶಿಲ್ಪವಿದೆ.

## 5. ಮಜ್ಜಿಗಣ ಬಸದಿ

ಚಂದ್ರಗಿರಿ ಬೆಟ್ಟದ ಮೇಲೆ ಮಜ್ಜಿಗಣ ಬಸದಿ ಇದೆ. ಈ ಬಸದಿ ಕ್ರಿ.ಶ.11ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಕಾಲಾನಂತರದಲ್ಲಿ ಜೀರ್ಣೋದ್ಧಾರಗೊಂಡಿದೆ. ಸ್ಥಳೀಯ ಶಾಸನವೊಂದರ್ಲಲಿ ಉಲ್ಲೇಖಿತ ನವಿಲೂರಾಸಿರಿ ಸಂಘ ರಾಜಿಗಣದಾ ಎಂಬ ಪದದೊಳಗಿನ ಅಜಿಗಣವೇ ಈ ಬಸದಿಯ ಹೆಸರಿನ ಮೂಲವಾದೆ. ಶ್ರೀಮತ್ ಮತ್ತು ಅಜಿಗಣ ಎಂಬೆರಡು ಪದಗಳ ಸಂಯೋಗದಿಂದ ಮಜ್ಜಿಗಣವಾದಂತೆ ತಿಳಿದುಬರುತ್ತದೆ. ನವಿಲೂರ ಸಂಘ ಪರಂಪರೆಯ ಹಲವು ಮುನಿಗಳು ಈ ಬಸದಿಯಲ್ಲಿ ಸಲ್ಲೇಖನದಿಂದ ಸಮಾಧಿ ಮರಣವನ್ನಪ್ಪಿದ

ಕುರಿತು ಕೆಲವು ಶಾಸನಗಳಲ್ಲಿ ಪ್ರಸ್ತಾಪಗಳಿವೆ. ಪ್ರಾಯಶಃ ಆ ಸಂಘದ ಆಜಿಗಣ ಪರಂಪರೆಯ ಶಿಶ್ಯರು ಈ ಬಸದಿಯನ್ನು ನಿರ್ಮಿಸಿರಬಹುದು. ಈಗಿನ ಮಜ್ಜಗಣ ಬಸದಿಯು ಹಲವಾರು ಬಾರಿ ಜೀರ್ಣೋದ್ಧಾರಗೊಂಡಿರಬಹುದು. ಕ್ರಿ.ಶ.15ನೆಯ ಶತಮಾನದ ಮಂಗಾಯಿ ಬಸದಿಯ ಶಾಸನದಂತೆ ಚಿಕ್ಕಬೆಟ್ಟದಲ್ಲಿ ಚಿಕ್ಕಬಸ್ತಿಯನ್ನು ಕಲ್ಲುಕಟ್ಟಿಸಿ ಜೀರ್ಣೋದ್ಧಾರ ಮಾಡಿಸಿದಂತೆ, ತಿಳಿದುಬರುತ್ತದೆ. ಈ ಬಸದಿಯೂ ಗರ್ಭಗೃಹ, ತೆರೆದ ಶುಕನಾಸ, ನವರಂಗಗಳನ್ನು ಒಳಗೊಂಡಿದೆ. ಸಣ್ಣಮುಖ ಮಂಟಪವನ್ನು ಹೊಂದಿದೆ. ಮೂಲಗರ್ಭಗೃಹದಲ್ಲಿ ಅನಂತನಾಥನ ಶಿಲ್ಪವನ್ನು ಇಡಲಾಗಿದೆ. ಇದು ಹೊಯ್ಸಳರ ಕಾಲದ್ದು, ಬಾಗಿಲವಾಡದ ಎರಡು ಕಡೆಯ ನಿಲುವು ಕಂಬಗಳು ಪದ್ಮದಳಾಲಂಕಾರಗಳಿಂದ ಅಲಂಕೃತಗೊಂಡಿದೆ. ಮೇಲ್ಭಾಗದಲ್ಲಿ ಲಲಾಟ ಕಲ್ಲು ಬೇರೆಯದಾಗಿದೆ. ಪ್ರಾಯಶಃ ಜೀರ್ಣೋದ್ಧಾರ ಸಮಯದಲ್ಲಿ ಬೇರೆ ಸೇರಿಸಿರಬಹುದು. ಇದರ ಕಾಲವನ್ನು ಗಂಗರ ಅಂತ್ಯ ಹಾಗೂ ಹೊಯ್ಸಳರ ಆರಂಭದ ಕಾಲದೆಂದು ತಿಳಿಯಬಹುದಾಗಿದೆ. ಷ.ಶೆಟ್ಟರ್‌ರವರು ಇದನ್ನು 11ನೆಯ ಶತಮಾನದ ಕಾಲಕ್ಕೆ ಸೇರಿಸಬಹುದು ಎಂದಿದ್ದಾನೆ. ಅ. ಸುಂದರರವರು 12ನೆಯ ಶತಮಾನವೆಂದಿರುತ್ತಾರೆ. ಆದರೆ ಮೊದಲೇ ಹೇಳಿರುವಂತೆ ಆಜಿಗಣದ ಶಾಸನಗಳು ಈ ಬಸದಿಯ ಬಳಿ ಇರುವುದರಿಂದ ಇದನ್ನು ಆಜಿಗಣದ ಬಸದಿ ಎಂದು ಕರೆಯಲಾಗಿದೆ.

## 6. ಸುಪಾರ್ಶ್ವನಾಥ ಬಸದಿ

ಸುಪಾರ್ಶ್ವನಾಥ ಬಸದಿಯು ಪೂರ್ವಾಭಿಮುಖವಾಗಿದ್ದು, ಇದನ್ನು ಯಾರು ಕಟ್ಟಿಸಿದರೆಂಬ ವಿಚಾರ ತಿಳಿದುಬಂದಿಲ್ಲ. ಎಂ.ಎಚ್. ಕೃಷ್ಣರವರ ಪ್ರಕಾರ ಈ ಬಸದಿಯ ಹತ್ತಿರ ಕ್ರಿ.ಶ.10ನೆಯ ಶತಮಾನಕ್ಕೆ ಸೇರಿದ ಶಾಸನದ ಲಿಪಿಗಳು ಇರುವುದರಿಂದ ಇದನ್ನು ಕ್ರಿ.ಶ.10ನೆಯ ಶತಮಾನಕ್ಕೆ ಸೇರಿಸಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಬಸದಿಯ ಗೋಡೆಗಳು ಇಟ್ಟಿಗೆ ಗಾರೆಯಿಂದ ಕೂಡಿದೆ. ಗೋಡೆಗಳಲ್ಲಿ ಯಾವುದೇ ರೀತಿಯ ಅಲಂಕಾರ ಕಂಡುಬರುವುದಿಲ್ಲ, ಸರಳವಾಗಿದೆ. ಇದು ಗರ್ಭಗೃಹ, ಶುಕನಾಸ ಮತ್ತು ಮುಖಮಂಟಪವನ್ನು ಹೊಂದಿದೆ. ಮೂಲಗರ್ಭಗೃಹದಲ್ಲಿ ಕ್ರಿ.ಶ.10ನೆಯ ಶತಮಾನಕ್ಕೆ ಸೇರಿಸಬಹುದಾದ ಪಾರ್ಶ್ವನಾಥನ ಶಿಲ್ಪವಿದೆ. ಕುಳಿತಿರುವ ಪಾರ್ಶ್ವನಾಥನ ತಲೆಯ ಮೇಲೆ ಏಳು ಹೆಡೆಯ ಸರ್ಪವಿದ್ದು, ಇದರ ಕಲೆ ಬಹು ಸುಂದರವಾಗಿ ಕೆತ್ತಲ್ಪಟ್ಟಿದೆ. ಸರ್ಪದ ಇಕ್ಕೆಲಗಳಲ್ಲಿ ಚಾಮರದಾರಿಯರು ಇದ್ದಾರೆ. ಇದರ ಒಂದು ಕೈಯಲ್ಲಿ ಚಾಮರವನ್ನು ಇನ್ನೊಂದು ಕೈಯಲ್ಲಿ ಕಟೀ ಹಸ್ತವನ್ನು ಉಳ್ಳವರಾಗಿರುತ್ತಾರೆ. ಚಾಮರಧಾರಿಯರ ವಸ್ತ್ರಾಲಂಕಾರವು ಕ್ರಿ.ಶ.10ನೆಯ ಶತಮಾನದ ಗಂಗರ ಕಾಲದ ಶಿಲ್ಪಗಳ ಹೋಲಿಕೆಯನ್ನು ಹೊಂದಿರುತ್ತದೆ. ತೀರ್ಥಂಕರರ ಪೀಠವು ಕಲಾತ್ಮಕವಾಗಿ ಮೂಡಿಬಂದಿದೆ.

ಹಾವಿನ ಶರೀರದ ಇಕ್ಕೆಲಗಳಲ್ಲಿ ನಿಂತ ಸಿಂಹದ ಅಲಂಕಾರ ಸೊಗಸಾಗಿದೆ. ಇದರ ಮೇಲೆ ವ್ಯಾಳಗಳ ಕೆತ್ತನೆಯನ್ನು ಸುಂದರವಾಗಿ ಕೆತ್ತಲಾಗಿರುತ್ತದೆ. ಸುಪಾರ್ಶ್ವನಾಥ ತಪಸ್ಸಿಗೆ ಕುಳಿತ ಶಾಂತ ಭಾವದಿಂದ ಮೂಡಿಬಂದಿದೆ. ಈ ಬಿಂಬದ ಸಿಂಹಪೀಠ ಅತ್ಯಂತ ಗಮನಾರ್ಹವಾದದ್ದು, ಸಿಂಹಗಳಿಂದ ಅಲಂಕೃತವಾಗಿದ್ದು, ಇದು ಪಲ್ಲವರ ಕಾಲದ ದೇವಾಲಯಗಳಲ್ಲಿ ಕಂಡುಬರುವ ಮಾದರಿಯಲ್ಲಿ ಇಲ್ಲಿಯೂ ಕಂಡುಬರುತ್ತದೆ. ಆದರೆ ಮುಖಮಂಟಪ ಚಿಕ್ಕದಾಗಿದ್ದು, ಗಂಗರ ಕಾಲದ ಕಂಬಗಳು ಹೋಲುತ್ತದೆ. ಇಲ್ಲಿಯ ಬಾಗಿಲವಾಡವು ಹೊಯ್ಸಳರ ಕಾಲದ್ದಾಗಿದ್ದು ಸುಂದರವಾಗಿದೆ.

### 7. ಸವತಿಗಂಧವಾರಣ ಬಸದಿ

ಚಂದ್ರಗಿರಿಬೆಟ್ಟದ ಮೇಲಿರುವ ಈ ಬಸದಿಯನ್ನು ಹೊಯ್ಸಳ ರಾಜ ವಿಷ್ಣುವರ್ಧನನ ಪಟ್ಟದರಾಣಿ (ಪಟ್ಟದರಸಿ) ಶಾಂತಲಾದೇವಿ ಕ್ರಿ.ಶ.1123ರಲ್ಲಿ ಕಟ್ಟಿಸಿರುತ್ತಾಳೆ. ಶಾಂತಲಾದೇವಿಯ ಕೆಲವು ಬಿರುದುಗಳಲ್ಲೊಂದಾದ ಸವತಿಗಂಧಾವಾರಣ ಎಂಬ ಬಿರುದಿನಿಂದಲೇ ಈ ಬಸದಿಯನ್ನು ಕರೆಯಲಾಗಿದೆ. ಇದು ಉತ್ತರಾಭಿಮುಖವಾಗಿದೆ. ಇದರ ಕೆಲವು ಆಂತರಿಕ ವಾಸ್ತು ಲಕ್ಷಣಗಳನ್ನು ಪರಿಶೀಲಿಸಿದರೆ, ಇದು ಕ್ರಿ.ಶ. ಸುಮಾರು 12ನೇ ಶತಮಾನದ ಪೂರ್ವದಲ್ಲಿಯೇ ನಿರ್ಮಿಸಿರುವಂತೆ ಕಂಡುಬರುತ್ತದೆ. ಶಾಂತಲಾದೇವಿಯು ಪ್ರಭಾಚಂದ್ರ ಮುನಿಗಳ ಶಿಷ್ಯೆಯಾಗಿದ್ದು, ಆದ ಕಾರಣ ಇಲ್ಲಿರುವ ಶಿಲ್ಪವನ್ನು ಈಕೆ ಮಾಡಿಸಿದ್ದಾಳೆ. ಇನ್ನೊಂದು ಶಾಸನದ ಪ್ರಕಾರವಾಗಿ ಈಕೆ ಕಟ್ಟಿಸಿರುವ ಬಸದಿಯಲ್ಲಿ ಆಹಾರ ಧಾನ್ಯ ಇತ್ಯಾದಿಗಳ ಏರ್ಪಾತಿಗೆ ಮೊಟ್ಟೆನವಿಲೆ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದಳೆಂದು ತಿಳಿದುಬರುತ್ತದೆ. ಕ್ರಿ.ಶ.15ನೆಯ ಶತಮಾನದಲ್ಲಿ ಗೇರುಸೊಪ್ಪೆಯ ಗುಂಮಟಣನು ಈ ಬಸದಿಯನ್ನು ಜೀರ್ಣೋದ್ಧಾರ ಮಾಡಿರಬೇಕು. ಹಾಗಾಗಿ ಇದರ ಮೂಲರೂಪ ಯಾವ ರೀತಿ ಇತ್ತೆಂದು ಹೇಳುವುದು ಸಾಧ್ಯವಿಲ್ಲ. ಈ ಬಸದಿಯನ್ನು ಶಾಂತಲೆ ಕಟ್ಟಿಸಿದಳು ಎಂದು ಹೇಳುವುದಕ್ಕಿಂತ ಈಕೆ ಜೀರ್ಣೋದ್ಧಾರ ಮಾಡಿಸಿದಳೆಂದು ಹೇಳುವುದು ಒಳ್ಳೆಯದು. ಇದು ಕ್ರಿ.ಶ.10ನೆಯ ಶತಮಾನದ ಆದಿಯಲ್ಲಿ ನಿರ್ಮಿತವಾದ ಬಸದಿಯೆನ್ನಬಹುದಾಗಿದೆ.

ತಳವಿನ್ಯಾಸದಲ್ಲಿ ಬಸದಿಯು ಗರ್ಭಗೃಹ, ಸುಕನಾಸಿ, ನವರಂಗ ಅಥವಾ ಸಭಾಮಂಟಪ ಮತ್ತು ಮುಖಮಂಟಪವನ್ನು ಹೊಂದಿದೆ. ಮೂಲಗರ್ಭಗುಡಿಯಲ್ಲಿ ಶಾಂತಿನಾಥ ತೀರ್ಥಂಕರನ ಶಿಲ್ಪವಿದೆ. ಮುಂಭಾಗದಲ್ಲಿ ಎತ್ತರವಾದ ವೇದಿಕೆಯಿದೆ. ದೇವಾಲಯದ ಗೋಡೆ ಇಟ್ಟಿಗೆ ಗಾರೆಯಾಗಿದ್ದು, ಬ್ರಹ್ಮಾಕಾಂತ ಮಾದರಿಯ ಉಬ್ಬುಕಂಬಗಳಿವೆ. ಇಲ್ಲಿನ ದೇವಕೋಷ್ಠಗಳು ಅಲಂಕಾರಿಕವಾಗಿಲ್ಲ. ಗರ್ಭಗೃಹದ ಮೇಲ್ಭಾಗದಲ್ಲಿ ತ್ರಿತಳವಿಮಾನವಿದೆ. ಗರ್ಭಗೃಹವು ಚಿಕ್ಕದಾಗಿ

ಆಯತಾಕಾರವಾಗಿದೆ. ಇದಕ್ಕಿಂತ ಚಿಕ್ಕದಾಗಿ ಶುಕನಾಸಿ ಇದೆ. ನವರಂಗವು ಆಯತಾಕಾರವಾಗಿದ್ದು ಎಂಟು ಕಂಬಗಳಿಂದ ಕೂಡಿದೆ. ಹೊಯ್ಸಳರ ಪೂರ್ವಕಾಲದ ಮಾದರಿಯಲ್ಲಿರುವ ಮೊದಲ ಎರಡು ಕಂಬಗಳು ಸಣ್ಣದಾಗಿದ್ದು ಚತುರ, ಅಷ್ಠ ಮತ್ತು ಚೌಕಾಕಾರವಾಗಿ ಎಂಟು ಮೂಲೆಗಳನ್ನು ಒಳಗೊಂಡಿದೆ. ಬಾಗಿಲ ಕಡೆಯ ನಾಲ್ಕು ಕಂಬಗಳು 16 ಮೂಲೆಯದಾಗಿದೆ. ಬಸದಿಯು ಜೀರ್ಣೋದ್ಧಾರಗೊಂಡಿರುವುದರಿಂದ ಕಂಬಗಳ ಜೋಡಣೆ ಬೇರೆ ಬೇರೆಯಾಗಿ ಮೂಡಿಬಂದಿದೆ.

## ೮. ತೇರಿನ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ಹೊಯ್ಸಳ ಮನೆತನದ ರಾಜಶ್ರೇಷ್ಟಿಗಳಾದ ಹೊಯ್ಸಳ ಸೆಟ್ಟಿ ಮತ್ತು ನೇಮಿಸೆಟ್ಟಿಯರ ಮಾತೆಯರಾದ ಮಾಚಿಕಬ್ಬೆ ಹಾಗೂ ಶಾಂತಿಕಬ್ಬೆಯರು ಕ್ರಿ.ಶ.1117 ರಲ್ಲಿ ನಿರ್ಮಿಸಿದ್ದಾರೆ. ಬಾಹುಬಲಿ ತೀರ್ಥಂಕರನಾಗಿರದೆ ಒಬ್ಬ ಕೇವಲಿಯಾಗಿದ್ದ ಅವನನ್ನು ಪೂಜಾರ್ಹನೆಂದು ಪರಿಗಣಿಸಿ ಆತನಿಗೆ ದೇವಾಲಯವನ್ನು ಕಟ್ಟಿಸಿದ ಅಪರೂಪ ನಿದರ್ಶನವಿದು. ಈ ತೇರಿನ ಬಸದಿಯ ನಿರ್ಮಾಣದಲ್ಲಿ ಬೇರೆ ಬೇರೆ ಕಾಲದ ವಾಸ್ತು ಲಕ್ಷಣಗಳ ಮಿಶ್ರಣ ಗೋಚರಿಸುತ್ತದೆ. ಹಾಗಾಗಿ ಇದು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿರುವುದು ಖಚಿತವಾಗುತ್ತದೆ. ಇದನ್ನು ಕ್ರಿ.ಶ.ಸುಮಾರು 15ನೆಯ ಶತಮಾನದಲ್ಲಿ ಗೊಮ್ಮಟಣ್ಣನ ಜೀರ್ಣೋದ್ಧಾರ ಮಾಡಿಸಿದ್ದಾನೆ. ಇದರ ಮುಂಭಾಗದಲ್ಲಿ ಹೊಯ್ಸಳರ ಕಾಲದ ತೇರಿನಾಕಾರದ ಆಕರ್ಷಕ ಬಲಿಪೀಠವಿದೆ. ಆದ ಕಾರಣ ಇದನ್ನು ತೇರಿನ ಬಸದಿ ಎಂದು ಕರೆಯಲಾಗಿದೆ. ಈ ಬಸದಿಯನ್ನು ಹಲವಾರು ಬಾರಿ ಜೀರ್ಣೋದ್ಧಾರ ಮಾಡಿರುವ ಬಗ್ಗೆ ತಿಳಿದುಬರುತ್ತದೆ. ಈ ಬಸದಿಗೆ ಒರಗಿಸಿರುವ ಎರಡು ವೀರಗಲ್ಲುಗಳು ಗಂಗರ ಕಾಲಕ್ಕೆ ಸೇರಿವೆ. ನವರಂಗದಲ್ಲಿ ಕಂಡುಬರುವ ಕಂಬಗಳಿಂದ ಇದನ್ನು ಕ್ರಿ.ಶ.೯೫೦ ಕ್ಕೆ ಸೇರಿಸಬಹುದಾಗಿದೆ. ಈ ಬಸದಿಯು ಎರಡು ಕಟ್ಟೆ ಮತ್ತು ಸವತಿಗಂಧವಾರಣ ಬಸದಿಗಿಂತ ಚಿಕ್ಕದಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಮಾದರಿ ಶುಕನಾಸ, ನವರಂಗವನ್ನು ಹೊಂದಿದೆ. ಭಿತ್ತಿ ರಚನೆಯಲ್ಲಿ ಇಟ್ಟಿಗೆಗಳನ್ನು ಬಳಸಲಾಗಿದೆ. ಗರ್ಭಗೃಹದಲ್ಲಿ ಬಾಹುಬಲಿ ಶಿಲ್ಪವಿದೆ. ಇಲ್ಲಿ ಬಾಹುಬಲಿ ತೀರ್ಥಂಕರನಾಗಿರದೇ ಒಬ್ಬ ಕೇವಲಿಯಾಗಿದ್ದಾನೆ. ಬಸದಿಯ ಮುಂದಿನ ತೇರು ಹೊಯ್ಸಳ ಕಾಲದಾಗಿದ್ದು, ಜಗತಿ, ತ್ರಿಪಟ್ಟಕುಮುದ, ಪಟ್ಟಕಾದಿಂದ ಅಲಂಕೃತವಾಗಿದೆ. ಅದರ ಮೇಲೆ ವೇದಿ ಬಂದು ವೀರಕಂಠ, ಸೂಪ್ತಿ ಬಂದಿದೆ. ಇದರ ಮೇಲಿನ ಭಾಗವನ್ನು ಅದೋ ಮುಖ ಕಮಲವನ್ನು ಬಿಡಿಸಿ ಬೋಳಾಗಿರಿಸುತ್ತಾರೆ. ಆನೆ, ಸಿಂಹಗಳ ಶಿಲ್ಪಗಳಿಂದ ಅಲಂಕೃತವಾಗಿದೆ.

## ೯. ಚಾವುಂಡರಾಯ ಬಸದಿ (ನೇಮಿನಾಥ ಬಸದಿ)

ಐತಿಹಾಸಿಕವಾಗಿ ಚಾವುಂಡರಾಯ ದಕ್ಷಿಣ ಮಧುರೆಯ ಬ್ರಹ್ಮಕ್ಷತ್ರಿಯ ವಂಶದ ಮಹಾಬಲಯ್ಯ ಮತ್ತು ಕಾಳಲಾದೇವಿ ದಂಪತಿಗಳ ಪುತ್ರನಾದ ಚಾವುಂಡರಾಯನು ರಾಜಕೀಯ ಆಡಳಿತ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ವಾಸ್ತುಕಲೆ, ಮತ್ತು ಶಿಲ್ಪಕಲೆ ಕ್ಷೇತ್ರಗಳಲ್ಲಿ ಗಣನೀಯ ಸಾಧನೆಗೈದು ಅಜರಾಮರನಾಗಿದ್ದಾರೆ. ತಲಕಾಡಿನ ಗಂಗ ಮನೆತನದ ಮರುಲದೇವ, ಇಮ್ಮಡಿಮಾರಸಿಂಹ, ನಾಲ್ವಡಿ ರಾಚಮಲ್ಲ ಮತ್ತು ರಕ್ಕಸಗಂಗರ ಸೇನಾಪತಿ ಯೋಧಾಗ್ರಣಿ ಸಂಧಿವಿಗ್ರಹಿ ಮಹಾಮಂತ್ರಿಯಾಗಿ ಆ ಮನೆತನವನ್ನು ಕಟ್ಟಿ ಬೆಳೆಸಿದ ಮಹಾಪುರುಷನಾಗಿದ್ದಾನೆ. ಈತನು ಶ್ರವಣಬೆಳಗೊಳದ ಪರಿಸರದಲ್ಲಿ ಕ್ರಿ.ಶ.೯೮೧ ರಲ್ಲಿ ಬಾಹುಬಲಿಯ ಶಿಲ್ಪ ಪ್ರತಿಷ್ಠಾಪನೆ ನೇಮಿನಾಥನ ಬಸದಿ ನಿರ್ಮಾಣ, ತ್ಯಾಗದ ಬ್ರಹ್ಮದೇವರ ಸ್ತಂಭಸ್ಥಾಪನೆ ಅಖಂಡ ಬಾಗಿಲು ನಿರ್ಮಾಣ, ಗುಳ್ಳಕಾಯಜ್ಜಿಯ ಶಿಲ್ಪ ಭದ್ರಶಾಲೆ ನಿರ್ಮಾಣ, ಪಾತಾಳ ಯಕ್ಷಸ್ತಂಭ ಪ್ರತಿಷ್ಠಾಪನೆ, ಪ್ರಾಕಾರ ಮತ್ತು ಸೋಪಾನಗಳ ನಿರ್ಮಾಣ, ಭಟ್ಟಾರಕ ಪೀಠಸ್ಥಾಪನೆ ಮೊದಲಾದವುಗಳನ್ನು ಕೈಗೊಳ್ಳುವುದರ ಮೂಲಕ ಇದನ್ನು ಜಗತ್ತಿಗೆ ಪರಿಚಯಿಸಿದ ಮಹಾವೀರನಾಗಿದ್ದಾನೆ. ಈತನು ಕ್ರಿ.ಶ.೯೮೨ ರಲ್ಲಿ ಚಂದ್ರಗಿರಿ ಬೆಟ್ಟದ ಮೇಲಿನ ನೇಮಿನಾಥ ಬಸದಿಯನ್ನು ನಿರ್ಮಿಸಿದ್ದಾನೆ. ಆದರೆ ಇದನ್ನು ಚಾವುಂಡರಾಯ ಬಸದಿ ಎಂದು ಆತನ ಹೆಸರಿನಿಂದಲೇ ಕರೆಯುವುದು ರೂಢಿಯಲ್ಲಿದೆ. ನಿರ್ಮಾಣದಲ್ಲಿ ಸ್ಥಳೀಯ ಕಗ್ಗಲ್ಲನ್ನು ಬಳಸಿ ಪೂರ್ವಾಭಿಮುಖವಾಗಿ ನಿರ್ಮಿಸಿರುವ ಈ ಬಸದಿ ಕರ್ನಾಟಕ ದ್ರಾವಿಡ ಶೈಲಿಗೆ ಅತ್ಯುತ್ತಮ ಬಸದಿಯಾಗಿದೆ. ಇದರ ತಳವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಶುಕನಾಸ, ನವರಂಗ ಮತ್ತು ತೆರೆದ ಮುಖಮಂಟಪವನ್ನು ಹೊಂದಿವೆ. ಈ ಬಸದಿಯು ಐತಿಹಾಸಿಕವಾಗಿ ಅತ್ಯಂತ ಮಹತ್ವವು ವಾಸ್ತುಶಿಲ್ಪದ ದೃಷ್ಟಿಯಿಂದ ಅತ್ಯಂತ ಕುತೂಹಲಕಾರಿಯೂ ಆದ ಚಾವುಂಡರಾಯ ಬಸದಿಯನ್ನು ಚಾವುಂಡರಾಯ ತನ್ನ ಗೌರವಾರ್ಥವಾಗಿ ಕಟ್ಟಿಸಿರಬಹುದು. ಕ್ರಿ.ಶ.10ನೇ ಶತಮಾನದ ಗಂಗರ ವಾಸ್ತುಶಿಲ್ಪಕ್ಕೆ ಈ ಬಸದಿ ಉತ್ತಮ ನಿರ್ದರ್ಶನ. ಮೇಲಂತಸ್ತಿನಲ್ಲಿರುವ ಜಿನವಿಗ್ರಹದ ಪೀಠದ ಭಾಗದಲ್ಲಿ ಕೊರೆದಿರುವ ಶಾಸನದಲ್ಲಿ ಚಾವುಂಡರಾಯನ ಮಗನ ಹೆಸರನ್ನು ಉಲ್ಲೇಖಿಸಲಾಗಿರುತ್ತದೆ. ಚೌಕಾಕಾರವಾಗಿರುವ ಗರ್ಭಗೃಹದ ನಾಲ್ಕು ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಭಗಳಿವೆ. ಇದರಲ್ಲಿ ನೇಮಿನಾಥ ತೀರ್ಥಂಕರನ ಶಿಲ್ಪವಿದೆ. ದ್ವಾರಬಂಧವು ಸರಳವಾಗಿದೆ. ಗರ್ಭಗೃಹದ ವಾಸ್ತುರೂಪದಲ್ಲಿಯೇ ಇರುವ ತೆರೆದ ಶುಕನಾಸದ ಮುಂಭಾಗದಲ್ಲಿ ಎರಡು ಸ್ವತಂತ್ರ ರುದ್ರಕಾಂತ ಪ್ರಕಾರದ ಸ್ತಂಭಗಳ ತೋರಣ ಕಂಡುಬರುತ್ತದೆ. ಆದರೆ ಇದರಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ವಿಶಾಲವಾದ ನವರಂಗದಲ್ಲಿ ನಾಲ್ಕು ರುದ್ರಕಾಂತಕಂಬಗಳಿವೆ. ಇವು ಕ್ರಮವಾಗಿ ಪೀಠಪಾದದಂಡ, ಕಲಶ, ತಾಟಕಾ, ಘಟ, ತರಂಗ,

ಬೋದಿಗೆಯಿಂದ ಕೂಡಿದೆ. ಈ ನಾಲ್ಕು ಕಂಬಗಳ ಮಧ್ಯದಲ್ಲಿ ಚೌಕಾಕಾರದ ಶಿಲಾವೇದಿಕೆ (ನೃತ್ಯವೇದಿಕೆ) ಇದೆ. ಈ ಕಂಬಗಳು ಸಮಾನಾಂತರದಲ್ಲಿ ಸುತ್ತಲೂ ಹನ್ನೆರಡು ವಿಷ್ಣುಕಾಂತ ಪ್ರಕಾರದ ಕಂಬಗಳಿವೆ. ವಿತಾನದಲ್ಲಿ ವೃತ್ತಾಕಾರದ ಪದ್ಮಮಂಡಲವಿದೆ. ದ್ವಾರಬಂಧವನ್ನು ಅಲಂಕಾರವಾಗಿಸುವ ಉದ್ದೇಶದಿಂದ ಇದರ ನಿರ್ಮಾಣಕ್ಕೆ ಕಪ್ಪುಬಳಪದ ಶಿಲೆಯನ್ನು ಬಳಸಲಾಗಿದೆ. ಇದು ಬಳ್ಳಿ ಕಂಬ ಮತ್ತು ಪದ್ಮಗಳಿಂದ ಅಲಂಕೃತವಾದ ಮೂರು ಶಾಖೆಗಳಿಂದ ಕೂಡಿದೆ. ಉತ್ತರಾಂಗಣದಲ್ಲಿ ಮೂರು ಶಾಲಾಕಾರ ಮತ್ತು ಎರಡು ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಈ ಮಂಟಪದ ಆಗ್ನೇಯ ಮೂಲೆಯಲ್ಲಿ ಬಸದಿಯ ಮೇಲಂತಸ್ತಿಗೆ ಹೋಗಲು ಇಕ್ಕಟ್ಟಾದ ಸೋಪಾನಗಳಿವೆ. ಮೊದಲನೆಯ ಸೋಪಾನಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಅರ್ಧವೃತ್ತಾಕಾರದ ಚಂದ್ರಶಿಲಾ ರಚನೆಯಿದೆ. ಸಭಾಮಂಟಪದ ಭಿತ್ತಿಗಳ ಮೇಲೆ ರೇಖಾ ವಿನ್ಯಾಸದ ವರ್ಣಚಿತ್ರಗಳಿದ್ದ ಕುರುಹುಗಳಿವೆ. ಈ ಮಂಟಪದ ಮುಂಭಾಗದಲ್ಲಿರುವ ಚಿಕ್ಕದಾದ ತೆರೆದ ಮುಖಮಂಟಪವಿದೆ. ಇದರ ಪಾರ್ಶ್ವಗಳಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಪ್ರಕಾರದ ಕಂಬಗಳಿವೆ. ಅಷ್ಟಕೋನಾಕೃತಿಯ ವಿತಾನದ ಮಧ್ಯದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಈ ಮಂಟಪವನ್ನು ಪ್ರವೇಶಿಸಲು ಒಂಭತ್ತು ಸಾಲು ಸೋಪಾನ ಮೂಲಗಳಿವೆ. ಇವುಗಳ ಪಾರ್ಶ್ವಗಳಲ್ಲಿ ಪಕ್ಷಶಿಲಾ ಬಗೆಯ ಹಸ್ತಿ ಹಸ್ತಗಳಿವೆ. ಇವುಗಳ ಹೊರಮೈಯನ್ನು ಪದ್ಮ ಮಂಡಲಗಳಿಂದ ಅಲಂಕರಿಸಲಾಗಿದೆ. ಈ ಬಸದಿಯ ಹೊರ ರಚನೆ ಆಯತಾಕಾರವಾಗಿದೆ. ಇದರ ಊರ್ಧ್ವಮುಖ ರಚನಾಕ್ರಮವು ಆಧಿಷ್ಠಾನ ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಕಲಶದಿಮ್ದ ಕೂಡಿದೆ. ಅಧಿಷ್ಠಾನವು ಪಾದಬಂಧ ಪ್ರಕಾರದ್ದಾಗಿದೆ. ಇದರಲ್ಲಿ ಕ್ರಮವಾಗಿ ಉಪಾನ, ಜಗತಿ, ತ್ರಿಪಟ ಕುಮುದ ಕಂಠ ಮತ್ತು ಕಪೋತ ಭಾಗಗಳಿವೆ. ಭಿತ್ತಿಯಲ್ಲಿ ಸುತ್ತಲೂ ಭದ್ರ, ಕರ್ಣ ಮತ್ತು ಮಧ್ಯೆ ಮಧ್ಯೆ ನಿಯೋಜಿತ ಅಂತರದಲ್ಲಿ ಬ್ರಹ್ಮಕಾಂತ ಪ್ರಕಾರದ ಕುಡ್ಯಸ್ತಂಭಗಳಿವೆ. ಗರ್ಭಗೃಹದ ಹಿಂಬಿತ್ತಿಯಲ್ಲಿ ಭದ್ರದಲ್ಲಿ ನಿರಾಲಂಕೃತವಾದ ದೇವಕೋಷ್ಠವಿದೆ. ಭಿತ್ತಿಯ ಮೇಲ್ಭಾಗದಲ್ಲಿ ಸುತ್ತಲೂ ಪ್ರಸ್ತರವಿದೆ. ಇದು ಉತ್ತರ ವಾಚನ, ವಲಭೀ, ಕಪೋತ, ಆಲಿಂಗ, ಆಂತರಿಕ ಪ್ರತಿ ಮತ್ತು ವಾಜನದಿಂದ ಕೂಡಿದೆ. ಇವುಗಳಲ್ಲಿ ವಲಭಿಯನ್ನು ಹಂಸಮಾಲಾಗಳಿಂದ ಕಪೊತವನ್ನು ಚಂದ್ರಮಂಡಲ ಮತ್ತು ವಲ್ಲಿಮಂಡಲಗಳಿಂದ ಅಲಂಕರಿಸಲಾಗಿದೆ. ಪ್ರಸ್ತರದ ಮೇಲ್ಭಾಗದಲ್ಲಿರುವ ಅನರ್ಪಿತ ಹಾರವು ಕೂಟ, ಶಾಲಾ ಮತ್ತು ಪಂಜರಗಳಿಂದ ಅಲಂಕರಿಸಲ್ಪಟ್ಟಿದೆ. ಇವುಗಳ ಕೆಳಭಾಗದಲ್ಲಿ ಸುತ್ತಲೂ ಹಂಸಗಳ ಸಾಲು ಕುದುರೆಯ ಲಾಳದಾಕಾರದ ಚೈತ್ಯಗಳು ಕಡಲ ಕುದುರೆ (ಸಿಂಹಮುಖದ ಮತ್ಸ್ಯ) ಪರ್ಯಂಕಾಸೀನ ತೀರ್ಥಂಕರರು, ಯಕ್ಷ-ಯಕ್ಷಿಯರು, ಗಂಧರ್ವ, ಕಿನ್ನರರು, ಸಾಲಾಭಂಜಿಕೆಯರ ಉಬ್ಬುಶಿಲ್ಪಗಳಿವೆ. ಈ ಶಿಲ್ಪಗಳಲ್ಲಿ ನಸುನಗುತ್ತಿರುವ ಕನ್ಯೆಯೊಬ್ಬಳ

ಶಿಲ್ಪವಿದೆ. ಇವಳ ಮುಖದಲ್ಲಿ ಎಂತಹವರನ್ನು ಮುಗ್ಧಗೊಳಿಸುವ ಮತ್ತು ಮನಸ್ಸನ್ನು ಸೂರೆ ಮಾಡುವ ಶಕ್ತಿ ಇದೆ. ಯೌವ್ವನ, ಲಾವಣ್ಯ, ತೇಜಸ್ಸು, ರೂಪು, ರಸಗಟ್ಟಿನಿಂದ ಈ ಲಾಸ್ಯಗಾರ್ತಿಯ ಮುಗುಳ್ನಗೆಯಿಂದ ಹೊರಹೊಮ್ಮುವ ಆನಂದವನ್ನು ಕಂಡಾಗ ಪ್ರಪಂಚದಲ್ಲಿ ಮೋನಾಲೀಸಳೊಬ್ಬಳೇ ನಗುವ ಶಕ್ತಿಯನ್ನು ಪಡೆದವಳಲ್ಲ ಎಂದು ಭಾಸವಾಗುತ್ತದೆ. ಪ್ರಸ್ತುರ ಮತ್ತು ಗ್ರೀವದ ಮಧ್ಯದಲ್ಲಿ ಹಂತಹಂತವಾಗಿ ಮೂರು ತಲಗಳಿಗೆ ಅಮ್ರಾಗಿ ಇದನ್ನು ತ್ರಿತಲ ಜಾತಿ ವಿಮಾನ ಶಿಖರ ಎಂದು ಗುರುತಿಸಲಾಗುತ್ತದೆ. ಈ ಮೂರು ತಲಗಳಲ್ಲಿ ಶಾಲ, ಕೂಟ, ಪಂಜರಗಳಿಂದ ರೂಪಿತವಾದ ಹಾರವಿದೆ. ಈ ಹಾರವು ಮೂಲಕಟ್ಟಡಕ್ಕೆ ಸೇರಿಕೊಂಡಿಲ್ಲ. ಹಾಗಾಗಿ ಇದು ಅನರ್ಪಿತ ಹಾರ ಎನಿಸುತ್ತದೆ. ಈ ಎಲ್ಲಾ ತಲಗಳೂ ಮೇಲ್ಕಟ್ಟಡಕ್ಕೆ ಸೇರಿಕೊಂಡಿದೆ. ಇವುಗಳಲ್ಲಿ ತೀರ್ಥಂಕರ ಉಬ್ಬುಶಿಲ್ಪಗಳು, ಚಂದ್ರಮಂಡಲ, ವಲ್ಲಿಮಂಡಲ, ಮೊದಲಾದವುಗಳ ಅಲಂಕಾರಗಳಿವೆ. ಮೂರನೆಯ ತಲದ ಮೇಲ್ಭಾಗದಲ್ಲಿ ಅಷ್ಟಕೋನಾಕೃತಿಯಲ್ಲಿ ಗ್ರೀವವಿದೆ. ಇದರ ಗ್ರೀವಪಿಂಡಿಯ ನಾಲ್ಕು ಮುಖದಲ್ಲಿ ಚಿಕ್ಕ ಚಿಕ್ಕ ಗ್ರೀವ ಕೋಷ್ಠಗಳಿವೆ. ಇವುಗಳಲ್ಲಿ ತೀರ್ಥಂಕರರ ಉಬ್ಬು ಶಿಲ್ಪಗಳಿವೆ. ಗ್ರೀವದ ಮೇಲ್ಭಾಗದಲ್ಲಿರುವ ವಿಷ್ಣುವಂಥ ಪ್ರಕಾರದ ಶಿಖರವು ಅಷ್ಟಕೋನಾಕಾರವಾಗಿದೆ. ಇದರ ಎಂಟೂ ಮುಖಗಳಲ್ಲಿ ಮಹಾನಾಸಿ ಪದ್ಮ ಮಂಡಲ ಚಂದ್ರಮಂಡಲಗಳ ಅಲಂಕಾರಗಳಿವೆ. ಶಿಖರದ ಮೇಲ್ಭಾಗದಲ್ಲಿ ಶಿಲೆಯ ಸ್ತೂಪಿ ಇರುವುದು. ಈ ಬಸದಿಯ ಗರ್ಭಗೃಹ ಮತ್ತು ಶುಕನಾಸದ ಮೇಲ್ಭಾಗದಲ್ಲಿ ಮೇಲ್ಕಟ್ಟದ ಎರಡನೆಯ ತಲದಲ್ಲಿ ಮತ್ತೊಂದು ಅಂತಸ್ತಿದೆ. ಇದರ ವಿನ್ಯಾಸದಲ್ಲಿ ಚೌಕಾಕಾರದವಾದ ಗರ್ಭಗೃಹ ಮತ್ತು ಆಯತಾಕಾರದ ಶುಕನಾಸವಿದೆ. ಆ ಗರ್ಭಗೃಹದಲ್ಲಿ ಸುಪಾರ್ಶ್ವನಾಥ ತೀರ್ಥಂಕರನ ಕಾಮೋತ್ಸರ್ಗ ಶಿಲ್ಪವಿದೆ. ದ್ರಾವಿಡ ಸಂಪ್ರದಾಯದಲ್ಲಿ ಕಟ್ಟಿರುವ ಈ ಬಸದಿಯು ಕನ್ನಡ ನಾದಿನಲ್ಲಿಂದು ಕಂಡುಬರುವ ಅತ್ಯಂತ ಸುಂದರವಾದ ಕಗ್ಗಲುಗಳ ದೇವಾಲಯಗಳಲ್ಲಿ ಒಂದಾಗಿದೆ. ಆದರೆ ಗೋಡೆಗಳ ಅಲಂಕಾರ ಮುಕ್ತವಾಗಿದ್ದರೂ ಈ ದೇವಾಲಯದ ಕಂಬಿ ಹಾಗೂ ಶಿಖರವೆಲ್ಲ ಶಿಲ್ಪದಿಂದೊಡಗೂಡಿದೆ. ಹಂಸಗಳ ಸಾಲು ಕುದುರೆ ಲಾಳಾಕಾರದ ಚೈತ್ಯಗಳು, ಸಮುದ್ರ ಕುದುರೆ, ಅಥವಾ ಸಿಂಹ ಮುಖವಾಡ ಹೊಂದಿರುವ ಮತ್ಸ್ಯಗಳಲ್ಲದೆ, ಅತ್ಯಂತ ಸುಂದರವಾದ ತೀರ್ಥಂಕರನ ಶಿಲ್ಪಗಳು ಇಲ್ಲಿ ಕಂಡುಬರುತ್ತವೆ.

**10. ಶಾಸನಬಸದಿ**

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ಹೊಯ್ಸಳ ಮನೆತನದ ದಂಡನಾಯಕ ಗಂಗರಾಜನು ಕ್ರಿ.ಶ.1118 ರಲ್ಲಿ ತನ್ನ ಮಡದಿ ಲಕ್ಷ್ಮಿಮತಿಯ ಪಿನ್ಯಾರ್ಥವಾಗಿ ಕಟ್ಟಿಸಿದ್ದಾನೆ. ಇದರ ಮುಂಭಾಗದಲ್ಲಿ ಶಾಸನ ಕಲ್ಲು ಇರುವುದರಿಂದ ಇದನ್ನು ಶಾಸನ ಬಸದಿ ಎಂದು

ಕರೆಯಲಾಗಿದೆ. ಪ್ರಸ್ತುತ ಶಾಸನದಲ್ಲಿ ಇದನ್ನು ಇಂದ್ರಕಲಾಗೃಹ ಎಂದು ಕರೆಯಲಾಗಿದೆ. ಇದು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿದೆ. ಈ ಶಾಸನದ ರೂವಾರಿ ಗಂಗಾಚಾರಿ ಕೊರೆದನೆಂದು ತಿಳಿದುಬರುತ್ತದೆ. ಗಂಗಾಚಾರಿಯು ಕ್ರಿ.ಶ.12ನೆಯ ಶತಮಾನದಲ್ಲಿ ಒಬ್ಬ ನಿಷ್ಠಾವಂತ ಶಿಲ್ಪಿ. ಅವನು ದೀರ್ಘವಾದ ಅಲಂಕಾರಯುತ ಶಾಸನ ಪಂಕ್ತಿಗಳನ್ನು ಕೊರೆದಷ್ಟು ಸುಲಭವಾಗಿ ತೀರ್ಥಂಕರ ಹಾಗೂ ಯಕ್ಷರ, ಸುಂದರ ಮೂರ್ತಿಗಳನ್ನು ಕೆತ್ತಬಲ್ಲವನಾಗಿದ್ದ. ಅವನು ಏಳು ಶಾಸನಗಳನ್ನು ಇಲ್ಲಿ ಕೊರೆದಿರುವುದನ್ನು ಅವುಗಳಲ್ಲಿ ನಾಲ್ಕು ನಿಶಿಧಿ ಶಾಸನ, ಎರಡು ದಾನಶಾಸನ, ಉಳಿದೊಂದು ಜಿನಮೂರ್ತಿಗೆ ಸಂಬಂಧಿಸಿದೆ.

ಆಧಿನಾಥನ ವಿಗ್ರಹ ಮತ್ತು ಬಹುಶಃ ಚಾವುಂಡರಾಯ ಬಸದಿಯ ಯಕ್ಷಯಕ್ಷಿಯರ ಶಿಲ್ಪಗಳನ್ನು ಇವನೇ ಮಾಡಿದ. ಹೊಯ್ಸಳಚಾರಿಯ ಇಬ್ಬರು ಮಕ್ಕಳಾದ ಗಂಗಾಚಾರಿ ಮತ್ತು ಕಾಂವಾಚಾರಿಯರು ಚಿಕ್ಕಬೆಟ್ಟದ ಮೇಲಿನ ಸ್ಮಾರಕ ಸ್ತಂಭಗಳನ್ನು ಕೆತ್ತಿಸಿದರು. ಗಂಗಾಚಾರಿ ಕೆತ್ತಿದ ಮಲ್ಲಿಸೇಣನ ನಿಶಿಧಿ ಶಾಸನದಲ್ಲಿ 223 ಸಾಲುಗಳಿದ್ದರೆ, ಕಾಂವಾಚಾರಿ ಕೆತ್ತಿದ ಮಾಚಿಕಬ್ಬೆಯ ಶಾಸನದಲ್ಲಿ224 ಸಾಲುಗಳಿವೆ. ಗಂಗಾಚಾರಿಗೆ ವರ್ಧಮಾನಾಚಾರಿ ಎಂಬ ಇನ್ನೊಂದು ಹೆಸರಿತ್ತು. ಈ ಎರಡರಲ್ಲಿ ಯಾವ ಹೆಸರಿನಿಂದ ಅವನು ಉಲ್ಲೇಖಗೊಂಡರೂ ಬಿರುದು ರೂವಾರಿಗಳ ಮುಖ ತಿಳಕ ಎಂಬ ತನ್ನ ಬಿರುದನ್ನು ಹೇಳುವುದನ್ನು ಅವನು ಮರೆಯುವುದಿಲ್ಲ. ಗಂಗಾಚಾರಿ ಎಂಬ ಶಿಲ್ಪಿಯು ಗಂಗರಾಜನ ವಂಶಜರ ಪರವಾಗಿ ಅನೇಕ ಶಿಲ್ಪಗಳನ್ನು, ಸ್ಮಾರಕಗಳನ್ನು ಶಾಸನಗಳನ್ನು ಚಿಕ್ಕಬೆಟ್ಟದಲ್ಲಿ ಕೊರೆದ ಬಗ್ಗೆ ಸಾಕಷ್ಟು ವಿಚಾರ ತಿಳಿದುಬರುತ್ತದೆ.

ಗರ್ಭಗೃಹ ಚಿಕ್ಕದಾಗಿದ್ದು, ಇದರಲ್ಲಿ ಆದಿನಾಥನ ಮೂರ್ತಿ ಇದೆ. ಶುಕನಾಸದ ಭಾಗದಲ್ಲಿ ಯಾವುದೇ ಶಿಲ್ಪಗಳಿಲ್ಲ. ನವರಂಗದ ಕಂಬಗಳು ಬಳಪದ ಕಲ್ಲಿನ ಕಂಬಗಳಾಗಿವೆ. ಗರ್ಭಗೃಹದಲ್ಲಿನ ಆದಿನಾಥ ಮೂರ್ತಿಯ ಪ್ರಭಾವಳಿ ಚಾಮರಧಾರಿಯರು ಇವೆಲ್ಲಾ ಹೊಯ್ಸಳರಿಗಿಂತ ಹಿಂದಿನ ವಾಸ್ತು ಲಕ್ಷಣಗಳನ್ನು ಪಡೆದಿದೆ. ಇಲ್ಲಿ ಯಕ್ಷ ಗೋಮೇಧನಾಗಿದ್ದು, ಯಕ್ಷಿ ಕೂಷ್ಮಾಂಡಿನಿಯಾಗಿದ್ದಾಳೆ. ಇವುಗಳು 10ನೇ ಶತಮಾನಕ್ಕೆ ಸೇರಿದ ಶಿಲ್ಪಗಳಾಗಿವೆ. ಯಕ್ಷಿ ಶಿಲ್ಪ ಹೊಯ್ಸಳರ ಕಾಲದ್ದು, ಈ ಬಸದಿಯ ಜೀರ್ಣೋದ್ಧಾರ ಮೊದಲಿಗೆ ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜನೇ ಮಾಡಿಸಿರುತ್ತಾನೆಂದು ತಿಳಿದುಬರುತ್ತದೆ.

## 11. ಇರುವೆ ಬ್ರಹ್ಮದೇವರ ಗುಡಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿ ಗಂಗರ ಕಾಲದಲ್ಲಿ ಅಂದರೆ ಕ್ರಿ.ಶ.950 ರಲ್ಲಿ ನಿರ್ಮಾಣವಾಗಿದೆ. ಪ್ರಾಯಶಃ ಇದರಲ್ಲಿ ಇರುವೆಗಳು ಇರುತ್ತಿದ್ದರಿಂದ ಇದನ್ನು ಇರುವೆ ಬ್ರಹ್ಮ ದೇವರ ಬಸದಿ (ಗುಡಿ) ಎಂದು ಕರೆಯಲಾಗಿದೆ. ಈ ಗುಡಿಯು ಚಿಕ್ಕಬೆಟ್ಟದ ಸುತ್ತುಗೋಡೆಯ ಹಿಂಭಾಗದಲ್ಲಿದೆ. ಅಲ್ಲದೆ ಕಂಚಿನ ದೋಣಿಗೆ ಸಮೀಪದಲ್ಲಿದೆ. ಇದು ಒಂದು ಅಂಕಣವನ್ನು ಹೊಂದಿದ್ದು, ಅಂಕಣವು ಅಗಲವಾಗಿದೆ. ಒಳಗೆ ಚೌಕಾಕಾರದ ಮಾದರಿಯ ಕಂಬಗಳನ್ನು ಸೇರಿಸಲಾಗಿದೆ. ಬಸದಿಯ ಬಾಗಿಲುಗಳಿಗೆ ಶಾಸನ ಕಲ್ಲನ್ನು ಸೇರಿಸಲಾಗಿದೆ. ಹೀಗಾಗಿ ಇದನ್ನು ಮತ್ತೆ ಮತ್ತೆ 10ನೇ ಶತಮಾನದ ನಂತರ ಜೀರ್ಣೋದ್ಧಾರ ಮಾಡಲಾಗಿದೆ. ಒಳಗೆ ಇರುವ ಮೂರ್ತಿ ಶಿಲ್ಪ ಹುಟ್ಟುಗಲ್ಲಿ ಮೂಡಿದ ಮೂರ್ತಿಯಾಗಿದೆ. 10ನೇ ಶತಮಾನದ ತೀರ್ಥಂಕರ ಶೀತಲನಾಥನ ಯಕ್ಷನಾಗಿದ್ದಾನೆ.

## 12. ಶಾಂತೀಶ್ವರ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ಗಂಗರಾಜನ ಸಹೋದರ ಹಿರಿಯ ಬೊಮ್ಮಣ್ಣನ ಪುತ್ರ ಹಿರೇಏಚಿಮಯ್ಯನು ಕ್ರಿ.ಶ.1117 ರಲ್ಲಿ ನಿರ್ಮಿಸಿದ್ದಾನೆ. ಉತ್ತರಾಭಿಮುಖವಾಗಿರುವ ಇದರ ತಳವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಶುಕನಾಸ, ಸಭಾಮಂಟಪವಿದೆ. ಗರ್ಭಗೃಹದಲ್ಲಿ ಶಾಂತೀಶ್ವರ ಶಿಲ್ಪವಿದೆ. ಸಭಾಮಂಟಪದಲ್ಲಿ ಅಥವಾ ನವರಂಗದಲ್ಲಿ ರುದ್ರಕಾಂತ ಪ್ರಕಾರದ ಹತ್ತು ಕಂಬಗಳಿವೆ. ಶಾಂತೇಶ್ವರ ಶಿಲ್ಪವನ್ನು ಗಮನಿಸಿದರೆ ಅದು 12–13ನೇ ಶತಮಾನಕ್ಕೆ ಸೇರಿದ ಶಿಲ್ಪವಾಗಿದೆ. ಈ ಬಸದಿಯ ನಿರ್ಮಾಪಕ ನಿಷ್ಠಾವಂತ ಜಿನಭಕ್ತನಾದ ಏಚಿಮಯ್ಯನು ಜಿನನಾಥಪುರ ಅರೆಗಲ್ಲ ಬಸದಿಯನ್ನು ಸಹ ಕಟ್ಟಿಸಿದನು. ಶಾಂತೀಶ್ವರ ಶಿಲ್ಪವು ಸೊಗಸಾಗಿದ್ದು, ಆದಿ ಭಾಗದ ಪೀಠದಲ್ಲಿ ಗಜಾರೂಢನಾದ ಇಂದ್ರನು ಕಲ್ಯಾಣ ಕಾರ್ಯನಿಮಿತ್ತವಾಗಿ ತೆರಳುವ ದೃಶ್ಯವನ್ನು ತುಂಬಾ ಕಲಾತ್ಮಕವಾಗಿ ಕೊರೆಯಲಾಗಿದೆ. ಶಾಂತೀಶ್ವರನ ಇಕ್ಕೆಲಗಳಲ್ಲಿ ಚಾಮರಧಾರಿಯರನ್ನು ಆನಂತರ ಸೇರ್ಪಡೆ ಮಾಡಿದಂತೆ ಕಾಣಬರುತ್ತದೆ. ಬಸದಿಯ ಶಿಖರವು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಈ ಶಿಖರ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಶಿಖರವಾಗಿದೆ.

## 13. ಪಾರ್ಶ್ವನಾಥನ ಬಸದಿ ಅಥವಾ ಕಮಠ ಪಾರ್ಶ್ವನಾಥ ಬಸದಿ

ಚಂದ್ರಗಿರಿ ಬೆಟ್ಟದ ಮೇಲಿರುವ ಬಸದಿಯನ್ನು ದಾಮಣಂದಿತ್ರ್ಯೆ ವಿದ್ಯೆದೇವ ಮುನಿಯ ಶಿಷ್ಯ ಧನುಕೀರ್ತಿ ದೇವನು ಕ್ರಿ.ಶ. ಸುಮಾರು 11ನೇ ಶತಮಾನದಲ್ಲಿ ನಿರ್ಮಿಸಿದ್ದಾನೆ. ಇದು

ಹೊಯ್ಸಳರ ಕಾಲದ ಬಸದಿಯಾಗಿದೆ. ಇದಕ್ಕೆ ಗಟ್ಟಿಗಲ್ಲನ್ನು ಬಳಸಿ ನಿರ್ಮಿಸಿರುತ್ತಾರೆ. ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗ ಮತ್ತು ಮುಖಮಂಟಪಗಳಿವೆ. ಗರ್ಭಗೃಹದಲ್ಲಿ ಪಾರ್ಶ್ವನಾಥ ತೀರ್ಥಂಕರನ ಕಾಯೋತ್ಸರ್ಗ 15 ಅಡಿ ಶಿಲ್ಪವಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಕಡುರೋಪಸರ್ಗ ಕಥಾ ನಿರೂಪಣೆಯ ಚಿತ್ರಣಗಳು ಮನಮೋಹಕವಾಗಿದೆ. ನವರಂಗದಲ್ಲಿ ರುದ್ರಕಾಂತ ನಾಲ್ಕು ಕಂಬಗಳಿವೆ. ಇವು ತುಂಬಾ ಸೊಗಸಾಗಿ ಮೂಡಿಬಂದಿವೆ. ನವರಂಗದ ಕಲ್ಲಿನ ನೆಲೆಗಟ್ಟನ್ನು ಹೊಯ್ಸಳ ಮನೆತನದ ಇಮ್ಮಡಿ ಬಲ್ಲಾಳನ ಮಂತ್ರಿ ನಾಗದೇವನು ಮಾಡಿಸಿದ್ದಾನೆ. ಈ ಬಸದಿಯ ತಿರ್ಯಜ್ಮಾಖ ರಚನೆಯಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರಗಳಿವೆ. ಅಧಿಷ್ಠಾನದಲ್ಲಿ, ಉಪಾನ, ಜಗತಿ, ಕಂಠ, ತ್ರಿಪಟ್ಟ ಕುಮುದ, ಕಪೋತ, ಸೀಳುಪಟಿಕೆ, ವೇದಿ ಭಾಗಗಳಿವೆ. ಭಿತ್ತಿಯಲ್ಲಿ ಸಮಾನಾಂತರ ಅಂತರದಲ್ಲಿ ಬ್ರಹ್ಮಕಾಂತ ಪ್ರಕಾರದ ಉಬ್ಬು ಸ್ತಂಭಗಳ ಮತ್ತು ದೇವಕೋಷ್ಠಗಳು ಕಂಡುಬರುತ್ತವೆ.

### 14. ಶಾಂತಿನಾಥ ಬಸದಿ

ಚಿಕ್ಕಬೆಟ್ಟದಲ್ಲಿ ಪೂರ್ವಾಭಿಮುಖವಾಗಿರುವ ಈ ಬಸದಿಯು ಮಾನವಮಿ ದಿಬ್ಬದ ನೈರುತ್ಯಕ್ಕೆ ಇದೆ. ಇದರಲ್ಲಿ ಶಾಂತಿನಾಥನ 12-10 ಅಡಿ ಎತ್ತರದ ಕಾಯೋತ್ಸರ್ಗದಲ್ಲಿ ನಿಂತ ಶಿಲ್ಪವಿದೆ. ಈ ಬಸದಿ ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿರುವುದರಿಂದ ಇದರ ಕಾಲವನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಜೊತೆಗೆ ಇದು ಬಸದಿಗಳ ಗುಂಪಿನಿಂದ ದೂರದಲ್ಲಿದ್ದು ಹೊಯ್ಸಳರ ಕಾಲದ ಶಾಂತಿನಾಥ ಶಿಲ್ಪವನ್ನು ಹೊಂದಿದೆ. ಈ ಮೂರ್ತಿಯು 11 ಅಥವಾ 12ನೇ ಶತಮಾನಕ್ಕೆ ಸೇರಿದುದ್ದಾಗಿದೆ. ವಿಜಯನಗರೋತ್ತರ ಕಾಲಕ್ಕೆ ಸೇರಬಹುದಾದ ಎತ್ತರವಾದ ಪದ್ಮಕಾಂತ ಕಂಬಗಳನ್ನು ಹಾಗೂ ಮುಖಮಂಟಪದಲ್ಲಿ ಸೇರಿಸಲಾಗಿದೆ. ಕಂಬಗಳ ಮೇಲೆ ಸೀಳು ಬೋದಿಗೆಯನ್ನು ಹೊಂದಿದ್ದು ಇದರ ರಚನೆಗೆ ಗಟ್ಟಿಕಲ್ಲನ್ನು ಬಳಸಲಾಗಿರುತ್ತದೆ. ಗರ್ಭಗೃಹ ಅಷ್ಟೇ ಅಗಲವಾದ ಶುಕನಾಸವನ್ನು ಮತ್ತು ಮುಖಮಂಟಪವನ್ನು ಸೇರಿಸಲಾಗಿದೆ. ಬಹುಶಃ ಇದು ಮೈಸೂರು ಅರಸರ ಕಾಲದಲ್ಲಿ ಇದು ಜೀರ್ಣೋದ್ಧಾರವಾಗಿರಬೇಕು.

### 15. ಕೂಗೆ ಬ್ರಹ್ಮದೇವರ ಕಂಬ

ಶ್ರವಣಬೆಳಗೊಳದಲ್ಲಿ ಕಂಡುಬರುವ ಮೊದಲನೆಯ ಮಾನಸ್ತಂಭ ಎಂದರೆ, ಅದು ಮಾರಸಿಂಹನ ಕೂಗೆ ಬ್ರಹ್ಮದೇವರ ಕಂಬ ಇದು ತಲಕಾಡಿನ ಗಂಗರ ದೊರೆ ಇಮ್ಮಡಿ ಬೂತುಗನ ಮಗನಾದ ಮಾರಸಿಂಹ ಬಂಕಾಪುರದಲ್ಲಿ ಸಲ್ಲೇಖನ ವ್ರತ ಆಚರಿಸಿ ಜೀವನವನ್ನು ಕಳೆದುಕೊಂಡಾಗ ಆತನ ನೆನಪಿಗೋಸ್ಕರವಾಗಿ ನಿರ್ಮಿಸಿದ ಕಂಬವೇ ಮಾರಸಿಂಹನ ಕೂಗೆ

ಬ್ರಹ್ಮದೇವರ ಕಂಬ. ಕ್ರಿ.ಶ.976 ರಲ್ಲಿ ಈ ಮಾನಸ್ತಂಭವನ್ನು ನಿಲ್ಲಿಸಿರುತ್ತಾರೆ. ಅಂದಿನ ಕಾಲಕ್ಕೆ ಪೂರಕವಾಗಿ ಧಾರ್ಮಿಕ ಕಾರಣಗಳಗೆ ಜೈನರನ್ನು ಆಹ್ವಾನಿಸಲು ಹಿಂದೆ ಇದರ ಮೇಲೆ ದೀಪವನ್ನು ಇಡುತ್ತಿದ್ದರು. ಆದ ಕಾರಣ ಇದಕ್ಕೆ ಕೂಗೆ ಬ್ರಹ್ಮದೇವರ ಕಂಬ ಎಂದು ಕರೆದಿದ್ದಾರೆ. ಈ ಸ್ತಂಭ ಮೂಲ ಅಧಿಷ್ಠಾನ ಯಾವ ರೀತಿ ಇತ್ತೆಂಬುದಕ್ಕೆ ನಿಖರವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಇದರ ಅಧಿಷ್ಠಾನ ಮೊದಲಿಗೆ ಹಳೆಯ ಬೆಳಗೊಳದ ಜಿನಾಲಯಾದ ಅಧಿಷ್ಠಾನದಂತಿತ್ತು. ಅಂದರೆ ಆನೆಗಳ ಮೇಲೆ ಅಧಿಷ್ಠಾನವಿರುವಂತೆ ಹಾಗೂ ಜಗತಿ, ತ್ರಿಪಟ್ಟ ಕುಮುದ, ದಳ, ಕಂಪ, ಪಟ್ಟಿಕಾಗಳನ್ನು ಒಳಗೊಂಡಿತ್ತು. ಪ್ರಸ್ತುತ ಈಗ ಈ ಕಂಬಕ್ಕೆ ಆಧಾರವಾಗಿರುವ ಅಧಿಷ್ಠಾನವು ಬದಲಾವಣೆಯಾಗಿ ಎಂಟು ಆನೆಗಳನ್ನು ಒಳಗೊಂಡಿರುವ ಅಷ್ಟದಿಕ್ಪಾಲಕರ ಚೌಕಗಳ ಸಮೇತ ಮೂರು ಹಂತದಿಂದ ಕೂಡಿದೆ. ಇದರ ಮೇಲೆ ಕಮಲದ ಮಾದರಿಯ ಪೀಠವಿದೆ. ಅದರ ಮೇಲೆ ಸ್ತಂಭದ ಚೌಕಾಕಾರದ ಶಾಸನ ಭಾಗ ಪ್ರಾರಂಭವಾಗುತ್ತದೆ. ಚೌಕಾಕಾರದಿಂದ ಅಷ್ಠ ಮೂಲೆಗೆ ತಿರುಗಿ ಮೇಲೆ ರತ್ನಪಟ್ಟಿಕೆಗಳು ಮತ್ತು ಮೂಲಾಲಂಕಾರವಿದೆ. ಮೂಲಾಲಂಕಾರದ ಮೇಲೆ ಎರಡು ಎಡಕಟ್ಟುಗಳು ಬಂದಿದ್ದು, ಅದರ ಮೇಲೆ ಅಷ್ಠ ಮೂಲೆಯ ಕಂಬ ಬಂದಿದ್ದು, ಅದರ ಮೇಲೆ ಮುಚ್ಚಳ ಪದ್ಮ ಫಲಕ ಬರುತ್ತದೆ. ಫಲಕದ ಮೇಲೆ 12ನೆಯ ಶತಮಾನದ ಯಕ್ಷನ ಶಿಲ್ಪವಿದೆ. ಮೂಲತಃ ಈ ಸ್ತಂಭದ ಮೇಲೆ ಬ್ರಹ್ಮ ಯಕ್ಷನ ರೂಪವಾದ ಗುಂಡು ಕಲ್ಲಿನ ಮೂರ್ತಿಯಿದ್ದಂತೆ ರೇಖಾಚಿತ್ರದಿಂದ ತಿಳಿದುಬರುತ್ತದೆ. ಈ ಸ್ತಂಭವನ್ನು ಪ್ರತಿಷ್ಠಾಪಿಸಿದಾಗ ಅದು ಚಂದ್ರಗುಪ್ತ ಬಸದಿಗೆ ನೇರವಾಗಿತ್ತು. ಈಗ ಬ್ರಹ್ಮದೇವರ ಕಂಬವೆಂದೂ ಕರೆದರೂ ಶಾಸನದಲ್ಲಿ ಇದನ್ನು ಮಾನಸ್ತಂಭವೆಂದೇ ಕಡೆಯಲಾಗಿದೆ.

### 16. ಮಾನಸ್ತಂಭ

ಪಾರ್ಶ್ವನಾಥ ಬಸದಿಯ ಮುಂದೆ ಇರುವ ಸುಮಾರು 80 ಅಡಿ ಎತ್ತರವಾದ ಮಾನಸ್ತಂಭವು ಶ್ರವಣ ಬೆಳಗೊಳದಲ್ಲಿ ಕಂಡುಬರುವ ಮಾನಸ್ತಂಭಗಳಲ್ಲೆಲ್ಲಾ ಎತ್ತರವಾಗಿದೆ. ಈ ಕಂಬವನ್ನು ಮೈಸೂರಿನ ಅರಸರಾದ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಪುಟ್ಟಯ್ಯ ಎಂಬಂತಹ ವರ್ತಕರು ಮಾಡಿಸಿದನೆಂದು ತಿಳಿದುಬರುತ್ತದೆ. ಮಾನಸ್ತಂಭ ಕೆಳಭಾಗದಲ್ಲಿ ಎತ್ತರವಾದ ವೇದಿಕೆಯಿದ್ದು, ಅದು ಮೂರು ಹಂತಗಳನ್ನು ಹೊಂದಿದೆ. ಮೂರನೆಯ ಹಂತವಾದ ಮೇಲೆ ಸ್ತಂಭದ ಚೌಕಾಕಾರದ ಭಾಗದಲ್ಲಿ ಬ್ರಹ್ಮಯಕ್ಷ ಪದ್ಮಾವತಿ, ಕೂಷ್ಮಾಂಡಿನಿ ಮತ್ತು ಯಕ್ಷಶಿಲ್ಪಗಳನ್ನು ಬಿಡಿಸಿದೆ. ಇಲ್ಲಿಂದ ಮೇಲಕ್ಕೆ ಎಂಟು ಮೂಲೆ ಮುಳ್ಳದ್ದಾಗಿ (ವಿಷ್ಣುಕಾಂತ) ಮಧ್ಯೆಅಲ್ಲಲ್ಲಿ ರತ್ನ ಪಟ್ಟಿಕೆಗಳಿಂದ ಶೋಭಾಯಮಾನವಾಗಿದೆ. ತುದಿಯಲ್ಲಿ ಎರಡು

ವೃತ್ತಾಕಾರದ ಮುಚ್ಚಳಗಳು ಬಂದಿದ್ದು ಕೆಳಗಡೆಯದು ಚಿಕ್ಕದಾಗಿಯೂ ಮೇಲ್ಭಾಗದ್ದು ಅದಕ್ಕಿಂತ ಹೆಚ್ಚು ದೊಡ್ಡದಾಗಿದೆ. ಅದರ ಮೇಲೆ ಅಗಲವಾದ ಚೌಕಾಕಾರದ ಪದ್ಮಫಲಕ ಬಂದಿದೆ. ಈ ಪದ್ಮಫಲಕದ ಮೇಲೆ ನಾಲ್ಕು ಕಂಬಗಳನ್ನಿಟ್ಟು ಅದರ ಮೇಲೆ ಚಿಕ್ಕಮಂಟಪವನ್ನು ರಚಿಸಿ ಅದನ್ನು ಸ್ತಂಭಗಳಿಂದ ಹಾಗೂ ಶಿಖರದಿಂದ ಅಲಂಕರಣಗೊಳಿಸಿರುತ್ತಾರೆ. ಈ ಮಂಟಪದಲ್ಲಿ ನಿಂತ ಜಿನಮೂರ್ತಿಯನ್ನು ಸ್ಥಾಪಿಸಿರುತ್ತಾರೆ. ಈ ಮಂಟಪದ ಮೇಲೆ ನಾಲ್ಕು ಮೂಲೆಗಳಲ್ಲಿ ಚಿಕ್ಕಗೋಪುರಗಳಿದ್ದು, ಮಧ್ಯೆ ಇರುವ ಗೋಪುರವು ಮೂರು ಹಂತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಚಿಕ್ಕದಾಗುತ್ತಾ ಮಧ್ಯೆ ಕಳಸವನು ಹೊಂದಿದ್ದು ಸುಂದರವಾಗಿದೆ.

### 17. ಕಂಚಿನ ದೋಣಿ

ಚಂದ್ರಗಿರಿ ಬೆಟ್ಟದ ಮೇಲೆ ಬ್ರಹ್ಮದೇವರ ಬಸದಿಯ ಹಿಂದೆ ಇರುವ ದೊಣಿಯ ಕಂಚಿನ ದೊಣಿ, ಈ ದೋಣಿಯನ್ನು ಮಾನಭ ಎಂಬುವವನು ಕಟ್ಟಿಸಿರುವಂತೆ ತಿಳಿದುಬರುತ್ತದೆ. ಇದು ಕ್ರಿ.ಶ.12ನೆಯ ಶತಮಾನ ಶಾಸನದಿಂದ ತಿಳಿದುಬರುತ್ತದೆ. ಆದರೂ ಈ ದೋಣಿ ಪ್ರಾಕೃತಿಕವಾಗಿದ್ದು, ಇದನ್ನು ಎತ್ತರಿಸಿರುವರೆಂದು ತಿಳಿದುಬರುತ್ತದೆ. ಈ ದೋಣಿ ಜೀರ್ಣೋದ್ಧಾರವಾಗುವಾಗ ಅಕಾಲಕ್ಕೆ ಹಾಳಾಗಿದ್ದ ಬಸದಿಗಳ ಮತ್ತು ಅಲ್ಲಲ್ಲಿ ಬಿದ್ದಿದ್ದ ಶಾಸನಗಳ ಭಾಗಗಳನ್ನು ಇದಕ್ಕೆ ಬಳಸಿರುತ್ತಾರೆ. ಹೀಗಾಗಿ ಕ್ರಿ.ಶ.12ನೆಯ ಶತಮಾನದ ನಂತರ ಇದು ಜೀರ್ಣೋದ್ಧಾರವಾಗಿರಬೇಕು. ಈ ಕಂಚಿನ ದೊಣಿ ದಕ್ಷಿಣಕ್ಕೆ ಇರುವ ಬಯಲಿನಲ್ಲಿ ಕೆಲವು ಪ್ರಾಗೈತಿಹಾಸಿಕ ರಚನೆಗಳನ್ನು ಹೋಲುವ ರಚನೆಗಳ ಕುರುಹುಗಳಿವೆ. ಈ ಭಾಗದಲ್ಲಿ ಸ್ವಲ್ಪ ಮಣ್ಣಿನ ಅಂಶವೂ ಇರುವುದರಿಂದ ಇಲ್ಲಿ ಸ್ವಲ್ಪ ಗಿಡಗಂಟೆಗಳಿವೆ. ಇದರ ಸುತ್ತಲೂ ಈಗ ಕೋಟೆಯಿದ್ದು, ಈ ಭಾಗವನ್ನು ಸುತ್ತುವರೆದಿದೆ. ಈ ಕೊಳದ ಬಳಿ ಇರುವ ಬ್ರಹ್ಮದೇವನ ಗುಡಿಯ ಬಳಿ ಅನೇಕ ಚಿಕ್ಕಪುಟ್ಟ ಶಾಸನಗಳಿವೆ. ಈ ಕೊಳಕ್ಕೆ ಪೂರ್ವ ದಿಕ್ಕಿನಲ್ಲಿ ಬೆಟ್ಟವು ತ್ರಿಕೋನಾಕಾರವಾಗಿ ಇಳಿಜಾರನ್ನು ಹೊಂದಿದೆ. ಈ ಪ್ರಾಕೃತಿಕ ರಚನೆಗಳಿಂದ ಮತ್ತು ದೋಣಿಗಳಿಂದ ಈ ಬೆಟ್ಟಕ್ಕೆ ಕಳ್ವಪ್ಪು ಎಂದು ಹೆಸರು ಬಂದಿದೆ.

### 18. ಲಕ್ಕಿದೊಣಿ

ಚಂದ್ರಗಿರಿ ಬೆಟ್ಟದ ಮೇಲೆ ಲಕ್ಕಿದೊಣಿ ಇದೆ. ಇದು ಪ್ರಾಕೃತಿಕ ದೊಣಿಗಳಾಗಿ ಸ್ವಲ್ಪ ನೀರನ್ನು ಮಾತ್ರ ಹಿಡಿದಿಟ್ಟುಕೊಳ್ಳುತ್ತಿದ್ದವು. ಆದರೆ ಮುಂದೆ ಇದಕ್ಕೆ ತಡಸಲನ್ನು (ಅಡಕಟ್ಟ) ಕಟ್ಟಿ ಹೆಚ್ಚು ನೀರು ನಿಲ್ಲುವಂತೆ ಮಾಡಿರುತ್ತಾರೆ. ಲಕ್ಕಿದೋಣಿ ಎಂದು ಹೆಸರು ಬರಲು ಬಹುಶಃ ಗಂಗರಾಜನ ಪತ್ನಿ ಲಕ್ಷ್ಮಿ ಕಾರಣವಾಗಿರಬಹುದು. ಇದು ಐತಿಹ್ಯ ಎಂದು ಹೇಳಬಹುದು. ಈ ದೋಣಿಯ

ದಂಡೆಯಲ್ಲಿ ಎಂಟನೆಯ ಶತಮಾನದಿಂದ 11ನೆಯ ಶತಮಾನದವರೆಗೆ ಅನೇಕ ಭಕ್ತರು ಈ ಗಿರಿಗೆ ಭೇಟಿ ನೀಡಿದ್ದರರೆ, ಸ್ಮಾರಕವಾಗಿ ಶಾಸನಗಳನ್ನು ಹಾಕಿಸಿರುತ್ತಾರೆ. ಕವಿರನ್ನನ ಹಸ್ತಾಕ್ಷರ ಇದರ ದಂಡೆಯಲ್ಲಿದೆ.

### 19. ಜಿನನ ದೋಣಿ

ಚಂದ್ರಗಿರಿ ಬೆಟ್ಟದ ಬಸದಿಗಳ ಹೊರಪ್ರಾಕಾರಕ್ಕೆ ದಕ್ಷಿಣದಲ್ಲಿ ದೋಣಿಯೊಂದಿದ್ದು, ಇದನ್ನು 12ನೆಯ ಶತಮಾನದಲ್ಲಿ ಶಾಸನವೊಂದರಲ್ಲಿ ಜಿನನ ದೊಣಿ ಎಂದಿರುತ್ತಾರೆ. ಇದರಲ್ಲಿನ ನೀರನ್ನು ದೇವರ ಪೂಜೆಗೆ ಬಳಸುವುದರಿಂದ ಈ ಹೆಸರು ಬಂದಿರಬೇಕು.

### 20. ಗಂಗರಾಜನ ಮಂಟಪ

ಶಾಸನ ಬಸದಿ ಮತ್ತು ಚಾವುಂಡರಾಯ ಬಸದಿ ಮಧ್ಯದಲ್ಲಿರುವ ಬಯಲು ಮಂಟಪವನ್ನು ಗಂಗರಾಜ ಮಂಟಪವೆಂದು ಕರೆಯುತ್ತಾರೆ. ಈ ಮಂಟಪವನ್ನು ಕ್ರಿ.ಶ.1120-1123 ರ ಕಾಲದಲ್ಲಿ ಗಂಗರಾಜ ಕಟ್ಟಿಸಿದ. ತನ್ನ ತಾಯಿ ಪೋಚಿಕಬ್ಬೆಯ ಗೌರವಾರ್ಥ ಗಂಗರಾಜನು ಒಂದು ನಿಶಿಧಿ ಸ್ಮಾರಕವನ್ನು ಇಲ್ಲಿ ಪ್ರತಿಷ್ಠಾಪಿಸಿರುವುದರಿಂದ ಇದನ್ನು ಪೊಚಿಕಬ್ಬೆಯ ನಿಶಿಧಿ ಮಂಟಪವೆಂದೂ ಸಹ ಕರೆಯುತ್ತಾರೆ. ಈ ಸ್ಮಾರಕವನ್ನು ನೆಟ್ಟ ಮೂರು ವರ್ಷದ ನಂತರ ಕ್ರಿ.ಶ.1123 ಅವನು ಶುಭಚಂದ್ರ ಸಿದ್ಧಾಂತ ದೇವರ ಗೌರವಾರ್ಥ ಮತ್ತೊಂದು ಸ್ಮಾರಕವನ್ನು ಇಲ್ಲಿ ನಿಲ್ಲಿಸಿದನು. ಈ ಎರಡು ಸ್ಮಾರಕ ಶಾಸನಗಳನ್ನು ರಚಿಸಿದ ಕವಿಗಳು ಬೇರೆ ಬೇರೆಯಾಗಿದ್ದರೂ ಅವನನ್ನು ಕೊರೆದವನು ಶಿಲ್ಪಿ ವರ್ಧಮಾನಾಚಾರಿ ಇವನಿಗೆ ಬಿರುದು ರೂವಾರಿಗಳ ಮುಖ ತಿಳಕನೆಂಬ ಬಿರುದಿತ್ತು.

### 21. ಮಹಾನವಮಿ ಮಂಟಪ

ಚಿಕ್ಕ ಬೆಟ್ಟದಲ್ಲಿ ಕತ್ತಲೆ ಬಸದಿಯ ಹಿಂದೆ ಅಂದರೆ ನೈಋತ್ಯ ದಿಕ್ಕಿಗೆ ಮಂಟಪ ಇದೆ. ಇವು ಜೋಡಿ ಮಂಟಪಗಳು. ಇದಕ್ಕೆ ಎತ್ತರವಾದ ವೇದಿಕೆ ರಚಿಸಿ ಅವುಗಳ ಮೇಲೆ ನಾಲ್ಕು ಕಂಬಗಳನ್ನು ನಿಲ್ಲಿಸಿ ಅದರ ಮೇಲೆ ಮುಚ್ಚಿಗೆಯನ್ನು ಹಾಕಿರುತ್ತಾರೆ. ಇವು ಅಂಚುಗಳಲ್ಲಿ ಇಳಜಾರನ್ನು ಹೊಂದಿದೆ. ಎರಡು ಮಂಟಪಗಳು ಚೌಕಾಕಾರದಲ್ಲಿದೆ. ಈ ಎರಡು ರಚನೆಗಳು ಒಂದೇ ರೀತಿಯಲ್ಲಿದ್ದು ಇವುಗಳು ದಕ್ಷಿಣದ ಮಂಟಪವನ್ನು ಕ್ರಿ.ಶ. 1163ರಲ್ಲಿ ಕಟ್ಟಿಸಿರಬೇಕು ಇದರಲ್ಲಿ ಮಂಡಲಾಚಾರ್ಯ ದೇವಕೀರ್ತಿಯ ನಿಸದಿ ಶಾಸನವಿದೆ. ಉತ್ತರದ ಮಂಟಪದಲ್ಲಿ ಕ್ರಿ.ಶ. 1176ರ ನಮಕೀರ್ತಿ ದೇವರಿಗೆ ಸಂಬಂಧಿಸಿದ ಶಾಸನವಿದೆ.

ಹೀಗಾಗಿ ಉತ್ತರದ ಮಂಟಪವನ್ನು ದಕ್ಷಿಣದ ಮಂಟಪ ರಚನೆಯಾದ ಮೇಲೆ ನಿರ್ಮಿಸಿರಬೇಕು. ಶಾಸನ ಬಸದಿ ಮತ್ತು ಚಾವುಂಡರಾಯ ಬಸದಿಯ ಮಧ್ಯದಲ್ಲಿ ಒಂದು ಮಂಟಪವಿದೆ. ಈ ಮಂಟಪವನ್ನು ಹೊಯ್ಸಳ ದಂಡಾಧಿಕಾರಿ ಗಂಗರಾಜ ಕಟ್ಟಿಸಿರಬೇಕು. ಈ ಮಂಟಪವೂ ಚೌಕಾಕಾರಾವಾಗಿದ್ದು ನಾಲ್ಕು ಕಂಬಗಳ ಮೇಲೆ ನಿಂತಿರುವ ಮಂಟಪವಾಗಿದೆ. ಕಂಬಗಳು ಚೌಕಕಾರವಾಗಿ ಬಹು ಸರಳವಾಗಿದೆ. ಬೋಧಿಗೆಗಳು ಗಂಗರ ಕಾಲದ ಸರಳ ಬೋಧಿಗೆಗಳಂತೆ ಇದ್ದು ಅದಕ್ಕಿಂತ ಹೆಚ್ಚಿನ ಬೆಳವಣಿಗೆಯನ್ನು ಹೊಂದಿದ್ದು ಬೋಧಿಗೆಯ ಮಧ್ಯೆ ಸಣ್ಣ ಪಟ್ಟಿ ಬಂದಿದೆ. ಇಲ್ಲಿ ಇಟ್ಟಿರುವ ಶಾಸನದಲ್ಲಿ 1120ರ ಶಾಸನ ಪ್ರಾಚೀನವಾದುದು ಇದರಲ್ಲಿ ಗಂಗರಾಜನ ತಾಯಿ ಪೋಚಿಕಬ್ಬೆ ಸತ್ತಂತೆ ಹೇಳಿರುವುದು ಕಂಡು ಬರುತ್ತದೆ.

ಎರಡು ಕಟ್ಟೆ ಬಸದಿಗೂ ಸವತಿ ಗಂಧವಾರಣ ಬಸದಿಗೂ ಮಧ್ಯೆ ಒಂದು ಮಂಟಪವಿದ್ದು ಇದೂ ಸಹ ಚೌಕಕಾರವಾಗಿದೆ. ಈ ಮಂಟಪ ಪೂರ್ಣವಾಗಿ ಹೊಯ್ಸಳ ದಂಡನಾಯಕ ಗಂಗರಾಜನ ಸಂಬಂಧಿಕರಿಗೆ ಹಾಗೂ ಅವನ ವಂಶದ ಗುರುಗಳಿಗೆ ಮೀಸಲಾಗಿದೆ. ಮಂಟಪವು ನಾಲ್ಕು ಕಂಬಗಳ ಮೇಲೆ ನಿಂತಿದ್ದು ಮಂಟಪದಲ್ಲಿ ಕ್ರಿ.ಶ. 1113 ರಿಂದ 1122ರ ವರೆಗೆ ರಚಿತವಾದ ಶಾಸನವಿದೆ. ಕ್ರಿ.ಶ. 1113ರಲ್ಲಿ ಗಂಗರಾಜನ ಪತ್ನಿ ಲಕ್ಷ್ಮಿಯ ಅಣ್ಣ ಬೂಚಣನ ಸತ್ತ ವಿಚಾರ ತಿಳಿದುಬರುತ್ತದೆ. ಕ್ರಿ.ಶ. 1115ರಲ್ಲಿ ಮೇಘ ಚಂದ್ರತ್ರೈವಿದ್ಯೆ ದೇವನೂ 1120ರಲ್ಲಿ ಲಕ್ಷ್ಮಿಯ ಅಕ್ಕ ದೇವಿಯಕ್ಕನೂ ಕ್ರಿ.ಶ. 1122ರಲ್ಲಿ ಗಂಗರಾಜನ ಪತ್ನಿ ಲಕ್ಷ್ಮಿಯ ಸತ್ತ ವಿಚಾರವಿದೆ.

ಈ ಮಂಟಪವನ್ನು ಸ್ವತಃ ಲಕ್ಷ್ಮೀಯೇ ಕಟ್ಟಿಸಿರಬೇಕು. ಲಕ್ಷ್ಮೀ ಸತ್ತಾಗ ಆಕೆಯ ಪರೋಕ್ಷ ವಿನಯಾರ್ಥವಾಗಿ ರಚಿಸಿದ ನಿಸದಿಗಲ್ಲನ್ನು ಗಂಗರಾಜನು ಈ ಮಂಟಪದಲ್ಲಿಯೇ ನಿಲ್ಲಿಸಿರಬೇಕು. ಈ ಮಂಟಪದಲ್ಲಿನ ಬೋಧಿಗೆಗಳು ಗಂಗರ ಕಾಲದ ಸರಳ ರೀತಿಯದಾಗಿದ್ದು ಇವುಗಳ ಮಧ್ಯೆ ಸೀಳುಪಟ್ಟಿ ಕಾಣಿಸಿಕೊಂಡಿದೆ. ಸವತಿಗಂಧವಾರಣ ಬಸದಿಗೂ ತೇರಿನ ಬಸದಿಗೂ ಮಧ್ಯೆ ಮುಂಭಾಗದಲ್ಲಿ ಎತ್ತರವಾದ ಮಂಟಪವೊಂದಿದ್ದು ಶ್ರವಣಬೆಳಗೊಳದಲ್ಲಿನ ನಿಸಿದಿ ಮಂಟಪಗಳಲ್ಲೆಲ್ಲಾ ಪ್ರಾಚೀನವಾದುದು ರಾಷ್ಟ್ರಕೂಟ ಚಕ್ರಾಧಿಪತ್ಯದ ಕೊನೆಯ ಚಕ್ರವರ್ತಿ ನಾಲ್ಕನೆಯ ಇಂದ್ರನು ದೇಹತ್ಯಾಗ ಮಾಡಿದ ವಿಷಯ ತಿಳಿಸುವ ಕ್ರಿ.ಶ. 982ರ ಶಾಸನ ಈ ಮಂಟಪದಲ್ಲಿದೆ. ಈ ಮಂಟಪಕ್ಕೆ ಬಳಸಿರುವ ಕಂಬಗಳು ಚೌಕಕಾರ ಪಟ್ಟಿಕಾ, ಕುಂಭ, ಮುಚ್ಚಳ ಹಾಗೂ ಗಂಗರ ಕಾಲದ ಬೋಧಿಗೆಯನ್ನು ಹೊಂದಿದೆ, ಮೇಲೆ ತೊಲೆ ಇದ್ದು ಇದರ ಮೇಲೆ ಕಪೋತ ಒಂದಿದೆ. ಇಡೀ ಕಟ್ಟಡಕ್ಕೆ ಬಳಸಿರುವ ಕಲ್ಲು ಗಟ್ಟಿಗಲ್ಲು ಬಳಪದ ಕಲ್ಲು ಸುಮಾರು ಎಂಟು ಅಡಿ ಎತ್ತರವಿದೆ.

ತೇರಿನ ಬಸದಿಯ ಹಿಂಬಧಿಯಲ್ಲಿ ಎರಡು ಮಂಟಪಗಳು ಬಂದಿದ್ದು ಇವು ಸಹ ಚೌಕಕಾರವಾಗಿದೆ. ಎತ್ತರವಾಧ ವೇದಿಕೆಯ ಮೇಲೆ ನಾಲ್ಕು ಕಂಬಗಳನ್ನು ಬಳಸಿ ಒಂದೊಂದನ್ನು ಕಟ್ಟಲಾಗಿದೆ. ಈ ಕಂಬಗಳು ನಿರಾಡಂಬರವಾಗಿದ್ದು ಶಾಂತಲೆಯ ವಂಶಸ್ಥರ ನಿಸದಿಗಳನ್ನು ಒಳಗೊಂಡ ಮಂಟಪಗಳಾಗಿವೆ. ಕ್ರಿ.ಶ. 1123 ರಿಂದ 1139ರೊಳಗೆ ಈ ಎರಡು ಮಂಟಪಗಳ ರಚನೆಯಾಗಿರಬೇಕು. ಶಾಂತಲೆಯ ತಾಯಿ ಮಾಚಿಕಬ್ಬೆ, ಬಲದೇವ ದಂಡನಾಯಕನ ಮಗ ಸಿಂಗಮಯ್ಯ ಬಲದೇವ ಮುಂತಾದವರ ಮರಣವನ್ನು ಉಲ್ಲೇಖಿಸುವ ಶಾಸನಗಳು ಇಲ್ಲಿವೆ. ಒಟ್ಟಿನಲ್ಲಿ ಹೇಳುವುದಾದರೆ ಈ ಎಲ್ಲಾ ಮಂಟಪಗಳು ಚೌಕಕಾರವಾಗಿದ್ದು ಗಂಗರ ವಾಸ್ತು ಶೈಲಿಯನ್ನು ಹೊಂದಿದೆ ಎಂದು ಹೇಳಬಹುದು.

## ದೊಡ್ಡಬೆಟ್ಟದ (ಇಂದ್ರಗಿರಿ) ಮೇಲಿರುವ ಬಸದಿಗಳು

1. ಗೊಮ್ಮಟ ಶಿಲ್ಪ
2. ಅಖಂಡ ಬಾಗಿಲು
3. ಸುತ್ತಾಲಯ
4. ಭರತ ಬಾಹುಬಲಿ ಬಸದಿ
5. ಒಡೆಗಲ್ ಬಸದಿ
6. ಸಿದ್ದರ ಬಸದಿ
7. ಚಾವೀಸ ತೀರ್ಥಂಕರ ಬಸದಿ
8. ಬ್ರಹ್ಮ ದೇವರ ದೇವಾಲಯ
9. ತ್ಯಾಗದ ಬ್ರಹ್ಮದೇವರ ಕಂಬ
10. ಚನ್ನಣ್ಣನ ಕಂಬ
11. ಲಲಿತ ಸರೋವರ
12. ಚನ್ನಣ್ಣನ ದೋಣಿ
13. ಒಡೆಯರ ಮಂಟಪ

1. ಗೊಮ್ಮಟೇಶ್ವರನ ಶಿಲ್ಪ

ಶ್ರವಣಬೆಳಗೊಳದ ಇಂದ್ರಗಿರಿ ಬೆಟ್ಟದ ಮೇಲೆ ಗೊಮ್ಮಟೇಶ್ವರ ಶಿಲ್ಪವಿದೆ. ಚಾವುಂಡರಾಯನ ಕಾಲದವರೆಗೆ ಜೈನರಿಗೆ ಪವಿತ್ರ ಸ್ಥಳವಾಗಿರಲಿಲ್ಲ. ಚಾವುಂಡರಾಯನು ಬೆಟ್ಟದ ಮೇಲಿನ ಕೋಡುಗಳಲ್ಲಿ ಗೊಮ್ಮಟನನ್ನು ಸ್ಥಾಪಿಸಿದ ಮೇಲೆ ಈ ನೆಲೆಗೆ ಮಹತ್ವ ಬಂದಿತು. ಗೊಮ್ಮಟೇಶ್ವರ ಭಾರತದ ಅತ್ಯಂತ ಶ್ರೇಷ್ಠ ಹಾಗೂ ಸುಪ್ರಸಿದ್ಧ ಕಲಾಕೃತಿಗಳಲ್ಲಿ ಒಂದಾಗಿದೆ.

(ಚಿತ್ರ ಸಂಖ್ಯೆ–71) ಕ್ರಿ.ಶ. ೯81ರಲ್ಲಿ ಪೂರ್ಣಗೊಂಡು ಪ್ರಮಥ ಮಹಾ ಮಸ್ತಕಾಭಿಷೇಕದ ಅಭಿನಂದನೆಗೊಳಗಾಗಿದೆ. ಇದನ್ನು ಜೈನರ ದಕ್ಷಿಣ ಕಾಶಿ ಎಂದೇ ಪ್ರಸಿದ್ಧವಾಗಿರುವ ಶ್ರವಣಬೆಳಗೊಳ ಅನೇಕ ಹೆಸರುಗಳಂದ ಕರೆಯಲಾಗಿದೆ.

ಇಂದ್ರಗಿರಿ ಬೆಟ್ಟದ ತುದಿಯಲ್ಲಿ ಅನೇಕ ಕಟ್ಟಡಗಳಂದ ಸುತ್ತವರೆಯಲ್ಪಟ್ಟ ಬೆತ್ತಲೆ ವಿಗ್ರಹವು 58 ಅಡಿ ಎತ್ತರ 26 ಅಡಿ ಅಗಲ ಇದೆ. ಈ ಮೂರ್ತಿಯನ್ನು ಗಂಗರಾಜರ ಎರಡನೇ ರಾಚಮಲ್ಲನ ಮಂತ್ರಿ ಹಾಗೂ ದಂಡನಾಯಕನಾಗಿದ್ದ ಚಾವುಂಡರಾಯನು ಆಚಾರ್ಯ ನೇಮಿಚಂದ್ರ ಸಿದ್ಧಾಂತ್ ಚಕ್ರವರ್ತಿ ಮಾರ್ಗದರ್ಶನದಲ್ಲಿ ಕ್ರಿ.ಶ. ೯81ರಲ್ಲಿ ಕೆತ್ತಿಸಿದನು. ಕ್ರಿ.ಶ. ೯81ರಲ್ಲಿ ಮಹಾಮಸ್ತಕಾಭಿಷೇಕವನ್ನು ನೆರವೇರಿಸಲಾಯಿತ್ತೆಂದು ತಿಳದು ಬರುತ್ತದೆ. ಈ ಶಿಲ್ಪದ ಕಾರ್ಯ ಕನಿಷ್ಟ 5–6 ತಿಂಗಳುಗಳಗೆ ಮುಗಿಸಿರಬೇಕೆಂದು ಹೇಳಬಹುದು. ಈ ಶಿಲ್ಪವನ್ನು ಕೆತ್ತಿಸಲು ಸುಮಾರು 6–7ವರ್ಷಗಳ ಕಾಲ ಬೇಕಾಗಿರಬಹುದು. ಈ ಹಿನ್ನೆಲೆಯಿಂದ ಚಾವುಂಡರಾಯನು ಈ ಶಿಲ್ಪದ ನಿರ್ಮಾಣಕ್ಕೆ ಕ್ರಿ.ಶ. ೯75ರ ಸುಮಾರಿಗೆ ಆರಂಭಿಸಿರಬೇಕೆಂದು ಹೇಳಬಹುದಾಗಿದೆ.

**2) ಅಖಂಡ ಬಾಗಿಲು**

ಗೊಮ್ಮಟನ ನೇರಕ್ಕೆ ತಗ್ಗಿನಲ್ಲಿ ದೊಡ್ಡ ಹುಟ್ಟು ಬಂಡೆಯೊಂದರಲ್ಲಿ ಈ ಬಾಗಿಲನ್ನು ಕಡೆಯಲಾಗಿದೆ. ಇದನ್ನು ಚಾವುಂಡರಾಯನೇ ಕೊರೆಸಿದನೆಂದು ಐತಿಹ್ಯವಿದೆ. ಇದರಲ್ಲಿರುವ ಅರೆಕಂಬಗಳು ಮತ್ತು ಗಜಲಕ್ಷ್ಮೀ ಶಿಲ್ಪ ಇದನ್ನು ಸಮರ್ಥಿಸುತ್ತದೆ. ಇದು ದೇವರಕೊಂಡರೆಡ್ಡಿಯವರ ಮಾತು, ಅವರ ಷ. ಶೆಟ್ಟರ್ ರವರು ಚಾಗದ ಕಂಬದಿಂದ ಸೋಮಾನವನ್ನೇರಿದರೆ ಅಖಂಡ ಬಾಗಿಲು ಬರುವುದು, ಅದೊಂದು ಏಕಶಿಲಾ ದ್ವಾರ ಎಂಬ ತಪ್ಪು ಕಲ್ಪನೆ ಇದೆ. ಆದರೆ ಅದನ್ನು ಒಂದೇ ಶಿಲೆಯಲ್ಲಿ ಕೆತ್ತಲಾಗಿಲ್ಲ. ಇಕ್ಕೆಲಗಳಲ್ಲಿರುವ ಎರದು ಚಿಕ್ಕ ಮಂದಿರಗಳನ್ನು ಮಾತ್ರ ಒಂದೇ ಬಂಡೆಯಲ್ಲಿ ಕೊರೆಯಲಾಗಿದೆ ಎಂದು ತಿಳಸಿರುತ್ತಾರೆ. ಈ ದ್ವಾರದ ಅತ್ಯಂತ ಗಮನಿಸಬೇಕಾದ ವಿಷಯವೆಂದು ದ್ವಾರದ ಬಾಗಿಲವಾಡದ ಮೇಲಿರುವ ಗಜಲಕ್ಷ್ಮಿಯ ಪಟ್ಟಿಕೆ, ಲಕ್ಷ್ಮಿಯು ಪದ್ಮಾಸನದಲ್ಲಿ ಕುಳತಿದ್ದು, ಇಕ್ಕೆಲಗಳಲ್ಲಿ ಆನೆಗಳು ತಮ್ಮ ಸೊಂಡಿಲುಗಳಲ್ಲಿ ಹಿಡಿದ ಕುಂಭಗಳಂದ ದೇವಿಯ ಮೇಲೆ ಅಭಿಷೇಕ ಮಾಡುತ್ತಿರುವಂತೆ ಕಡೆಯಲಾಗಿದೆ. ಮಕರಗಳ ಮತ್ತು ಸಿಂಹಗಳ ಉಬ್ಬು ಚಿತ್ರಗಳು ಉಳದ ಸ್ಥಳವನ್ನು ಅರ್ಥವತ್ತಾಗಿ ತುಂಬಿದೆ. ಇದು ಭಾರತದಲ್ಲಿಯೇ ಉತ್ಕೃಷ್ಟವಾದ ಹಾಗೂ ಅತಿ ದೊಡ್ಡ ಗಜಲಕ್ಷ್ಮಿಯ ಉಬ್ಬುಶಿಲ್ಪಗಳಲ್ಲಿ ಒಂದಾಗಿದೆ. ಗಂಗರ ಕಾಲದ ಗಜಲಕ್ಷ್ಮೀ ಕೆತ್ತನೆಯಲ್ಲಿ ಇದೊಂದು ಉತ್ತಮ ಶಿಲ್ಪವಾಗಿದೆ. ಆನೆಗಳನ್ನು ಸಹ ಸುಂದರವಾಗಿ ಬಿಡಿಸಿದ್ದು, ಕೊರಳು ಮತ್ತು

ಹಿಂಬದಿಯಲ್ಲಿ ಗಂಟೆಗಳ ಸರವನ್ನು ಕಡೆಯಲಾಗಿದೆ. ಆನೆಗಳ ಹಿಂಬದಿಯಲ್ಲಿ ಮಕರಗಳನ್ನು ಬಿಡಿಸಿದ್ದು, ಅವು ಅನೇಕ ರೀತಿಗಳಿಂದ ಅಲಂಕೃತವಾಗಿದೆ. ಅವುಗಳ ಬಾಯಿಯಿಂದ ಸಿಂಹಗಳು ಹೊರಟಿದ್ದು, ಸಿಂಹಗಳ ಬಾಯಿಂದ ವಲ್ಲಿ ಅಲಂಕಾರ ಬಂದಿದೆ. ಈ ಬಾಗಿಲು ಗೊಮ್ಮಟನ ಉತ್ತರ ದಿಕ್ಕಿಗೆ ನೇರ ರೇಖೆಯಲ್ಲಿರುವುದರಿಂದ 10ನೆಯ ಶತಮಾನದಲ್ಲಿ ಅದು ಗೊಮ್ಮಟನಲ್ಲಿಗೆ ಹೋಗುವ ಪ್ರಮುಖ ಇಲ್ಲವೆ ಏಕಮೇವ ದ್ವಾರವಾಗಿರಬಹುದೆಂದು ಊಹಿಸಬಹುದಾಗಿದೆ. ಈ ದ್ವಾರ ಕ್ರಿ.ಶ.೨೮೦ ರಷ್ಟು ಹಳೆಯದಾದರೂ ಇಕ್ಕೆಲಗಳಲ್ಲಿರುವ ಎರಡು ದೇಆಲಯಗಳು 1130 ಕ್ಕಿಂತ ಪ್ರಾಚೀನವಾದುದಲ್ಲ. ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಭರತಮಯ್ಯ ಇದನ್ನು ಸೇರಿಸಿದ. ಇವುಗಳಲ್ಲಿ ಭರತ ಮತ್ತು ಬಾಹುಬಲಿಯ ಉಬ್ಬುಶಿಲ್ಪಗಳಿವೆ. ಚಾಗದ ಕಂಬದಿಂದ ಬರುವ ಸೋಪಾನ ಪಂಕ್ತಿಯನ್ನು ಭರತಮಯ್ಯ ಕಟ್ಟಿಸಿದ. ಆದರೆ ಎರಡೂ ಕೋಣೆಗಳಿಗೆ ಹತ್ತಿಕೊಂಡಿರುವ ತೆರೆದ ಮಂಟಪಗಳನ್ನು ಬಹುಶಃ 14ನೆಯ ಶತಮಾನದ ನಂತರ ಸೇರಿಸಲಾಯಿತು.

**೩) ಸುತ್ತಾಲಯ**

ಚಾವುಂಡರಾಯನು ಗೊಮ್ಮಟ ವಿಗ್ರಹವನ್ನು ಮಾಡಿದ ಮೇಲೆ ಕೆಲವು ಕಾಲ ಅದು ತೆರೆದ ಬಯಲಿನಲ್ಲಿತ್ತು. ಗೊಮ್ಮಟನ ಹಿಂಬದಿಯಲ್ಲಿ ಮಾತ್ರ ಚಾವುಂಡರಾಯ ಭಾರಿ ಗಾತ್ರದ ಕಂಬಗಳನ್ನು ಬಳಸಿ ಮಂಟಪವನ್ನು ರಚಿಸಿದ್ದ ಹಿಗಾಗಿ ಗೊಮ್ಮಟನ ಹಿಂಬದಿ ಯಲ್ಲಿ ಇದ್ದ ಮಂಟಪವನ್ನು ಸೇರಿಸಿಕೊಂಡು ಉಳಿದ ಮೂರು ಕಡೆಯ ಸುತ್ತಾಲಯವನ್ನು ಹೊಯ್ಸಳ ಸೇನಾನಿ ಗಂಗರಾಜ ಮಾಡಿಸಿದ. ಈ ಸುತ್ತಾಲಯದಲ್ಲಿನ 24 ತೀರ್ಥಂಕರ ಶಿಲ್ಪಗಳನ್ನು ಮತು ಇತರೆ ಯಕ್ಷ-ಯಕ್ಷಿ ಶಿಲ್ಪಗಳನ್ನು ಮತ್ತು ಇತರೆ ಯಕ್ಷ-ಯಕ್ಷಿ ಶಿಲ್ಪಗಳನ್ನು ನಯಕೀರ್ತಿ ಸಿದ್ಧಾಂತ ಚಕ್ರವರ್ತಿಗಳು ಶಿಷ್ಯ ಮೊಸಳೆಯ ಬಸದಿಸೆಟ್ಟಿ ಮಾಡಿಸಿದಂತೆ ತಿಳಿದುಬರುತ್ತದೆ.

ಸುತ್ತಾಲಯದ ಭಿತ್ತಿಯನ್ನು ಈ ಬಸದಿಸೆಟ್ಟಿ ಮಾಡಿಸಿದ ಸುತ್ತಾಲಯದಲ್ಲಿನ ಜನಬಿಂಬಗಳಲ್ಲಿ ಕೆಲವು ಗಂಗರ ಅರಸರ ಕಾಲಕ್ಕೆ ಸೇರುವವಾಗಿವೆ. ಬಸದಿಸೆಟ್ಟಿಯ ಮಕ್ಕಳಾದ ನಂಬಿದೇವಸೆಟ್ಟಿ, ಬೋಕಿಸೆಟ್ಟಿ, ಚಿನ್ನಸೆಟ್ಟಿ ಬಾಹುಬಲಿ ಸೆಟ್ಟಿಯರು ತೀರ್ಥಂಕರರ ಮುಂದಿನ ಜಾಲಂಧರವನ್ನು ಮಾಡಿಸಿರುತ್ತಾರೆ. ಗೊಮ್ಮಟೇಶ್ವರನ ಮುಂಬದಿಯಲ್ಲಿನ ಮಂಟಪದಲ್ಲಿ ಅಷ್ಠದಿಕ್ಪಾಲಕರ ಮಧ್ಯೆ ಇಂದ್ರನ ಶಿಲ್ಪವಿದ್ದು, ಈ ಶಿಲ್ಪವನ್ನು ವೃತ್ತಾಕಾರದ ಆವರಣದಲ್ಲಿ ಬಿಡಿಸಿದೆ. ಇದಕ್ಕೆ ಚೌಕಾಕಾರದ ಚೌಕಟ್ಟು ಇದ್ದು, ಆ ಚೌಕಟ್ಟಿನ ಅಂಚುಗಳಲ್ಲಿ ಅಷ್ಟ ದಿಕ್ಪಾಲಕರನ್ನು ಚಿಕ್ಕದಾಗಿ ಬಿಡಿಸಿದೆ. ಉಳಿದ ಭಾಗವು ಕುಸುರಿ ಕೆತ್ತನೆ ಕೆಲಸದಿಂದ ಕೂಡಿದೆ. ಇಂದ್ರನ ಶಿಲ್ಪವಿರುವ ಭಾಗದಲ್ಲಿಯೇ ವಾದ್ಯಗಾರರು ಮತ್ತು ನರ್ತಕರನ್ನು ಬಿಡಿಸಿದೆ. ಇಮ್ದ್ರನು ತನ್ನ

ಕೈಯಲ್ಲಿ ಕಳಸ ಹಿಡಿದಿರುತ್ತಾನೆ. ಈ ಶಿಲ್ಪವನ್ನು ಹೊಯ್ಸಳ ಶಿಲ್ಪಿಗಳು ಚಪ್ಪಡಿ ಗಲ್ಲಿನಲ್ಲಿ ಬಿಡಿಸಿರುವುದು ಒಂದು ಸವಾಲೇ ಸರಿ. ಈ ಮಂಟಪವನ್ನು 12ನೆಯ ಶತಮಾನದ ಪ್ರಾರಂಭದಲ್ಲಿ ಬಲದೇವನೆಂಬ ಹೊಯ್ಸಳ ಮಂತ್ರಿ ಕಟ್ಟಿಸಿದ. ಸುತ್ತಾಲಯದ ಮುಂಭಾಗ ಅನೇಕ ಬದಲಾವಣೆಗಳಿಗೊಳಪಟ್ಟಿರುವುದರಿಂದ ಇದರ ಮೂಲರೂಪ ಹೇಗಿತ್ತೆಂಬ ಬಗ್ಗೆ ತಿಳಿದುಬರುವುದಿಲ್ಲ. ಸುತ್ತಾಲಯದ ಪ್ರವೇಶದ ಎರಡೂ ಕಡೆ ಎರಡು ಶಾಸನಗಳಿದ್ದು, ಅವುಗಳಲ್ಲಿ ಒಂದು ಶಾಸನದಲ್ಲಿ ಬೊಪ್ಪಣ್ಣ ಕವಿ ರಚಿಸಿದ ಗೊಮ್ಮಟ ಸ್ತುತಿ ಇದೆ. ಗೊಮ್ಮಟನನ್ನು ಹೊಗಳಿರುಅ ಈ ಶಾಸನವು ಬಹು ಸುಂದರವಾದ ಕಾವ್ಯ, ಗೊಮ್ಮಟನ ಉದಾತ್ತ ವ್ಯಕ್ತಿತ್ವವನ್ನು ಕುರಿತು ಕವಿ ಬಾವುಕನಾಗಿ ಹಾಡಿದ್ದಾನೆ.

**4) ಭರತ– ಬಾಹುಬಲಿಯ ಬಸದಿ**

ಅಖಂಡ ಬಾಗಿಲ ಇಕ್ಕೆಲಗಳಲ್ಲಿ ಭರತ ಮತ್ತು ಬಾಹುಬಲಿ ಬಸದಿಗಳಿವೆ. ಅಖಂಡ ಬಾಗಿಲ ಇಕ್ಕೆಲಗಳು ಬೋಳಾಗಿದ್ದು, ಆ ಸ್ಥಳದಲ್ಲಿ ಎರಡೂ ಕಡೆ ಭಾರತ ಬಾಹುಬಲಿ ಮೂರ್ತಿಗಳ ಉಬ್ಬು ಶಿಲ್ಪಗಳನ್ನು ಕ್ರಿ.ಶ.1130 ರಲ್ಲಿ ವಿಷ್ಣುವರ್ಧನನ ದಂಡನಾಯಕನಾಗಿದ್ದ ಭರತಮಯ್ಯ ಎಂಬುವವನು ಕಡೆಸುತ್ತಾನೆ. ಅವನೇ ಆ ಬಿಂಬಗಳಿಗೆ ಚಿಕ್ಕಮಂಟಪಗಳನ್ನು ನಿರ್ಮಿಸುತ್ತಾನೆ. ಅಖಂಡ ಬಾಗಿಲ ಅಲಂಕಾರಕ್ಕೆ ಹೊಂದಿಕೊಂಡಿರುವಂತೆ ಕಟ್ಟಿಸಿರುವ ಈ ಕಟ್ಟಡಗಳು ಮೂರು ಚೌಕಾಕಾರದ ಪಿಂಡಿಯುಳ್ಳ ವೃತ್ತಾಕಾರದ ಕಂಬಗಳನ್ನು ಬಳಸಿ ಮೇಲೆ ಇಳಿಜಾರು ಮಾಡಿರಲಾಗಿರುತ್ತದೆ. ಈ ಭರತಮಯ್ಯನೇ ತ್ಯಾಗದ ಬ್ರಹ್ಮದೇವರ ಕಂಬದಿಂದ ಅಖಂಡ ಬಾಗಿಲವರೆಗಿನ ಸೋಪಾನವನ್ನು ಮಾಡಿಸುತ್ತಾನೆ.

**5) ಒಡೆಗಲ್ ಬಸದಿ**

ವಿಂಧ್ಯಗಿರಿ ಬೆಟ್ಟದ ಮೇಲಿರುವ ಈ ಬಸದಿಯ ವಾಸ್ತುಲಕ್ಷಣಗಳ ಅಧ್ಯಯನದಿಂದ ಇದು ಹೊಯ್ಸಳರ ಕಾಲದಲ್ಲಿ ಅಂದರೆ ಕ್ರಿ.ಶ.ಸುಮಾರು 13ನೇ ಶತಮಾನದ ಪೂರ್ವದಲ್ಲಿ ನಿರ್ಮಾಣವಾದಂತೆ ತಿಳಿದುಬರುತ್ತದೆ. ಬೆಟ್ಟದ ಇಳಿಜಾರಿನಲ್ಲಿ ಒಂದು ಸಮಮಟ್ಟಕ್ಕೆ ನಿರ್ಮಿಸಿರುವ ವೇದಿಕೆಯ ಅಡಿಗಲ್ಲುಗಳು ಜಾರಿ ಬೀಳದಿರಲೆಂದು ಆಸರೆಯಾಗಿ ಅಲಲ್ಲಿ ಒದಗಲ್ಲುಗಳನ್ನು ಅಳವಡಿಸಲಾಗಿದೆ. ಹಾಗಾಗಿ ಇದು ಒಡೆಗಲ್ಲು ಬಸದಿ ಎಂತಲೇ ಜನಜನಿತವಾಗಿದೆ. ಶ್ರವಣಬೆಳಗೊಳದ ಬಸದಿಗಳಲ್ಲಿ ಇದೊಂದು ತ್ರಿಕೂಟಾಚಲ ವಿನ್ಯಾಸದಲ್ಲಿದೆ. ಎತ್ತರವಾದ ಜಗಲಿಯ ಮೇಲೆ ಉತ್ತರಾಭಿಮುಖವಾಗಿ ನಿರ್ಮಾಣವಾಗಿರುಅ ಇದರ ತಲ ವಿನ್ಯಾಸದಲ್ಲಿ ಮೂರು ಗರ್ಭಗೃಹಗಳು, ಮೂರು ಅಂತರಾಳಗಳು, ಒಂದು ನವರಂಗ ಮತ್ತು ಒಂದು ಮುಖಮಂಟಪವಿದೆ. ಗರ್ಭಗೃಹದಲ್ಲಿ ಆದಿನಾಥ, ನೇಮಿನಾಥ, ಶಾಂತಿನಾಥ, ತೀರ್ಥಂಕರರ

ಪರ್ಯಂಕಾಸೀನ ಶಿಲ್ಪಗಳಿವೆ. ನವರಂಗದ ಮಧ್ಯದಲ್ಲಿ ನಾಲ್ಕು ರುದ್ರಕಾಂತ ಪ್ರಕಾರದ ಕಂಬಗಳಿವೆ. ವಿತಾನದಲ್ಲಿ ಪದ್ಮಮಂಡಲದ ಆಕರ್ಷಕ ಅಲಂಕಾರವಿದೆ. ಅಧಿಷ್ಠಾನದಲ್ಲಿ ಜಗತಿ, ತ್ರಿಪಟ್ಟ ಕುಮುದ, ಪಟ್ಟಣ ಭಾಗಗಳಿವೆ. ಕಗ್ಗತ್ತಲಿನಲ್ಲಿ ನಿರ್ಮಿಸಲ್ಪಟ್ಟಿರುವ ಈ ಬಸದಿ ತನ್ನ ವಿಶೇಷವಾದ ವಾಸ್ತುಲಕ್ಷಣಗಳಿಂದ ಹಾಗೂ ಉನ್ನತವಾದ ಸೋಪಾನ ಪಂಕ್ತಿಗಳಿಂದ ಗಮನೀಯವಾಗಿದೆ ಈ ಬಸದಿ ಕನ್ನಡ ನಾಡಿನಲ್ಲಿರುವ ತ್ರಿಕೂಟಾಚಲ ವಿನ್ಯಾಸದಬಸದಿಗಳ ಅಧ್ಯಯನಕ್ಕೆ ಉತ್ತಮವಾದ ಬಸದಿಯಾಗಿದೆ. ಈ ಬಸದಿಯನ್ನು ಕಟ್ಟಿಸಿದವರ ಬಗ್ಗೆ ಮತ್ತು ಕಟ್ಟಿದ ಕಾಲದ ಬಗ್ಗೆ ವಿವರಗಳಿಲ್ಲ.

**6) ಸಿದ್ಧರ ಬಸದಿ**

ವಿಂಧ್ಯಗಿರಿ ಬೆಟ್ಟದ ಮೇಲಿರುವ ಬಾಹುಬಲಿ ಶಿಲ್ಪದ ಹೊರಪ್ರಾಕಾರದಲ್ಲಿ ಈಶಾನ್ಯಕ್ಕೆ ಪಶ್ಚಿಮಾಭಿಮುಖವಾಗಿರುವ ಈ ಸಿದ್ಧರ ಬಸದಿ ಹೊಯ್ಸಳರ ಅಂತ್ಯಕಾಲದಲ್ಲಿ ನಿರ್ಮಾಣವಾಗಿದೆ. ಇದರ ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸವನ್ನು ಹೊಂದಿದೆ. ಗರ್ಭಗ್ರುಹದಲ್ಲಿ ಸಿದ್ಧರ ಪ್ರತಿಮೆ ಇದೆ. ಶುಕನಾಸಿಯಲ್ಲಿ ಬಾಗಿಲ ಎರಡೂ ಕಡೆ ಎರಡು ನಿಸದಿ ಶಾಸನಗಳಿದ್ದು, ಇವುಗಳು ಮೇಲ್ಭಾಗದಲ್ಲಿ ಗೋಪುರಗಳನ್ನು ಹೊಂದಿದ್ದು ಸುಂದರವಾಗಿದೆ. ಈ ನಿಶಿಧಿಗಲ್ಲು ಶಾಸನಗಳು ಕ್ರಿ.ಶ.1398 ರ ಮುನಿ ಪಂಡಿತಾರಾಧ್ಯ ಹಾಗೂ 1439 ರ ಶ್ರುತಮುನಿಗಳು ಇಹಲೋಕ ತ್ಯಾಗ ಮಾಡಿದ ವಿಷಯವನ್ನು ತಿಳಿಸುತ್ತದೆ. ಶ್ರುತಮುನಿ ಶಾಸನವನ್ನು ಕನ್ನಡ ಕವಿ ಮಂಗರಾಜ ರಚಿಸಿದ ಇಲ್ಲಿನ ಒಂದು ಶಾಸನವು ಬೆಳಗೊಳದಲ್ಲಿ ಅಕ್ಕನಬಸದಿ ಕಟ್ಟಿಸಿದ ಅಚಿಯಕ್ಕನು ಗೊಮ್ಮಟನಾಥನಿಗೆ ಬೆಕ್ಕದ ಸೀಮೆಯನ್ನು ದತ್ತಿಬಿಟ್ಟ ವಿಷಯ ತಿಳಿದುಬರುತ್ತದೆ.

**7) ಚಾವ್ವೀಸ್ ತೀರ್ಥಂಕರರ ಬಸದಿ**

ವಿಂಧ್ಯಗಿರಿ ಬೆಟ್ಟದ ಮೇಲ್ಭಾಗದಲ್ಲಿ ಮೊದಲ ಸುತ್ತಿನ ಕೋಟೆಯ ಬಲಬದಿಯಲ್ಲಿರುವ ಈ ಬಸದಿಯನ್ನು ಚಾರುಕೀರ್ತಿ ಪಂಡಿತಮುನಿಗಳ ಶಿಶ್ಯ ಮುಳ್ಳನಾಯಕನು ಕ್ರಿ.ಶ.1648 ರಲ್ಲಿ ನಿರ್ಮಿಸಿದ್ದಾನೆ. ಇದರ ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌವ್ವೀಸ್ ತೀರ್ಥಂಕರರ ಶಿಲ್ಪವಿದೆ. ಭಿತ್ತಿಯ ಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಇದು ಇಟ್ಟಿಗೆಯಿಂದ ನಿರ್ಮಿತವಾಗಿದೆ.

**8) ಬ್ರಹ್ಮದೇವರ ದೇವಾಲಯ ಅಥವಾ ಬಸದಿ**

ವಿಂಧ್ಯಗಿರಿ ಬೆಟ್ಟವನ್ನು ಮೇಲಕ್ಕೇರುವ ಮಾರ್ಗದ ಎಡಬದಿಯಲ್ಲಿರುವ ಈ ಬಸದಿಯನ್ನು ಹಿರಿಸಾವೆಯ ಗಿರಿಗೌಡನ ಸಹೋದರ ಗಂಗಯ್ಯನು ಕ್ರಿ.ಶ.1679 ರಲ್ಲಿ

ನಿರ್ಮಿಸಿದ್ದಾನೆ. ಇದರ ಮೇಲ್ಭಾಗದಲ್ಲಿ ಕಳೆದ ಶತಮಾನದ ಮೂವತ್ತರ ದಶಕದಲ್ಲಿ ಶ್ರೀಪದ್ಮರಾಜಯ್ಯ ಅವರು ಮೇಲಂಸತ್ತು ಮತ್ತು ಮುಂಭಾಗದಲ್ಲಿ ಮುಖಮಂಟಪವನ್ನು ಕಟ್ಟಿಸಿದ್ದಾರೆ. ಗರ್ಭಗುಡಿಯಲ್ಲಿ ಪಾರ್ಶ್ವನಾಥನ ಶಿಲ್ಪವಿದೆ. ಇದು ಬ್ರಹ್ಮಯಕ್ಷನ ಆರಾಧನೆಗೆ ಸಂಬಂಧಿಸಿರುವುದರಿಂದ ಇದನ್ನು ಬ್ರಹ್ಮದೇವರ ಬಸದಿ ಎಂದು ಕರೆಯಲಾಗಿದೆ.

**೯) ತ್ಯಾಗದ ಬ್ರಹ್ಮದೇವರ ಕಂಬ**

ಒಡೆಗಲ್ಲ ಬಸದಿ ಪಶ್ಚಿಮಕ್ಕಿರುವ ಎರಡಾಂತಸ್ತಿನ ಮಂಟಪವು ವಾಸ್ತುಶಿಲ್ಪಕಲಾ ದೃಷ್ಟಿಯಿಂದ ಮಹತ್ವದ್ದಾಗಿದ್ದರೂ ಸಹ ಐತಿಹಾಸಿಕ ದೃಷ್ಟಿಯ್ಯಂದ ಸಹ ಮಹತ್ವದ್ದಾಗಿದೆ. ಮಂಟಪ ಕೇಂದ್ರಭಾಗದಲ್ಲಿರುವ ಸೂಕ್ಷ್ಮವಾಗಿ ಕೆತ್ತಲಾದ ಈ ಕಂಬವು ಕಲಾತ್ಮಕವೂ ಸುಂದರವೂ ಆಗಿದೆ. ತ್ಯಾಗದ ಕಂಬವನ್ನು ಕ್ರಿ.ಶ.10ನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಿಸಲಾಯಿತೆಂದು ತಿಳಿದುಬರುತ್ತದೆ. ಮಂತ್ರಿ ಚಾವುಂಡರಾಯ ಇದಕ್ಕೆ ದಾನ ನೀಡುತ್ತಿದ್ದನೆಂದು ತಿಳಿದುಬರುತ್ತದೆ. ತನ್ನ ಐಶ್ವರ್ಯವನ್ನಲ್ಲದೆ, ತನ್ನ ಜೀವನವನ್ನು ಇಲ್ಲಿ ತ್ಯಾಗ ಮಾಡಿದನೆಂದು ಒಂದು ವಾದ ಸಹ ಇದೆ. ಚಾವುಂಡರಾಯನು ಇಲ್ಲಿ ಸಮಾಧಿಮರಣ ಹೊಂದಿದನೆಂದು ಈ ಸ್ತಂಭವನ್ನು ಅವನ ಗೌರವಾರ್ಥ ನೆಡಲಾಯಿತೆಂದು ತಿಳಿದುಬರುತ್ತದೆ.

**10) ಚನ್ನಣ್ಣನ ಕಂಬ**

ವಿಂಧ್ಯಗಿರಿ ಬೆಟ್ಟದ ಮೇಲಿರುವ ಈ ಬಸದಿಯನ್ನು ನರಸಿಂಹಪುರದ ಪುಟ್ಟಸೋಮಿಸೆಟ್ಟಿ ಮತು ದೇವಿರಮ್ಮ ದಂಪತಿಗಳ ಪುತ್ರರಾದ ಚಿಕ್ಕಣ್ಣ ಮತ್ತು ಚೆನ್ನಣ್ಣ ಎಂಬುವವರು ಕ್ರಿ.ಶ.1673 ರಲ್ಲಿ ನಿರ್ಮಿಸಿದ್ದಾರೆ. ಈ ಸಹೋದರರಲ್ಲಿ ಕಿರಿಯ ಸಹೋದರನ ಹೆಸರಿನಿಂದ ಇದನ್ನು ಚೆನ್ನಣ್ಣನ ಬಸದಿ ಎಂದು ಕರೆಯಲಾಗಿದೆ. ಇದು ಒಂದು ಹುಟ್ಟ ಬಂಡೆಗಲ್ಲಿಗೆ ಹೊಂದಿಕೊಂಡಂತೆ ನಿರ್ಮಾಣವಾಗಿದೆ. ಉತ್ತರಾಭಿಮುಖವಾಗಿರುವ ಇತರ ತಳವಿನ್ಯಾಸದಲ್ಲಿ ಗರ್ಭಗೃಹ ಮುಖಮಂಟಪ ಮತ್ತು ಸುತ್ತು ಮಂಟಪವಿದೆ. ಗರ್ಭಗೃಹದಲ್ಲಿ ಚಂದ್ರಪ್ರಭನಾಥ ತೀರ್ಥಂಕರರ ಶಿಲ್ಪವಿದೆ. ಅಧಿಷ್ಠಾನದಲ್ಲಿ ಜಗತಿ, ಪದ್ಮೋಪಾನ, ಕಂಪ, ಗಳ, ವಲ್ಲೀಪುತ್ರ, ಕುಮುದ ಮತ್ತು ಊರ್ಧ್ವ ಪದ್ಮವಾಚನ ಭಾಗಗಳಿವೆ. ಮುಖಮಂಟಪ ಸ್ತಂಭದಲ್ಲಿ ಒಂದೆಡೆಗೆ ಪುರುಷ ಮತ್ತು ಮತ್ತೊಂದೆಡೆಗೆ ಸ್ತ್ರೀ ಅಂಜಲಿ ಮುದ್ರೆಯಲ್ಲಿರುವ ಉಬ್ಬುಶಿಲ್ಪಗಳಿವೆ. ಇವು ಚನ್ನಣ್ಣ ಮತ್ತು ಆತನ ಧರ್ಮಪತ್ನಿಯನ್ನು ಪ್ರತಿನಿಧಿಸುತ್ತದೆ. ಈ ಬಸದಿ ಮುಂಭಾಗದಲ್ಲಿ ಮುವತ್ತು ಅಡಿ ಎತ್ತರವಾದ ಮಾನಸ್ತಂಭವಿದೆ. ಇದನ್ನು ಚೆನ್ನಣ್ಣ ನಿರ್ಮಿಸಿದ್ದಾರೆ. ಇದಕ್ಕೆ ಎತ್ತರವಾದ ವೇದಿಕೆ ಇದೆ. ಚೌಕಾಕಾರದ ಪಿಂಡಿ ಎಂಟು ಮೂಲೆಯಾಗಿ ಮೇಲೆ ಸಾಗಿದೆ. ಮೇಲ್ಭಾಗದಲ್ಲಿ ಚೌಕಾಕಾರದ ಪದ್ಮಫಲಕವಿದೆ. ಇದರ ಮೇಲೆ ನಾಲ್ಕು ಕಂಬಗಳನ್ನಿಟ್ಟ ಚಪ್ಪಡಿಯೊಂದನ್ನು ಇರಿಸಲಾಗಿದೆ.

ಇದರಲ್ಲಿ ಕಾಮೋತ್ಸರ್ಗದಲ್ಲಿರುವ ಚತುರ್ಮುಖ ತೀರ್ಥಂಕರನ ಶಿಲ್ಪವಿದೆ. ಚನ್ನಣ್ಣನ ಬಸದಿಯ ಮುಂದೆ ಇರುವ ಮಾನಸ್ತಂಭವನ್ನು ಚೆನ್ನಣ್ಣನು ಮಾಡಿಸಿರುತ್ತಾನೆ. ಸುಮಾರು 30 ಅಡಿ ಎತ್ತರವಿರುವ ಈ ಸ್ತಂಭಕ್ಕೆ ಎತ್ತರವಾದ ವೇದಿಕೆಯನ್ನು ರಚಿಸಿದೆ. ಚೌಕಾಕಾರದ ಪದ್ಮ ಫಲಕವಿದ್ದು, ಮೇಲೆ ನಾಲ್ಕು ಕಂಬಗಳನ್ನಿಟ್ಟು ಅದರ ಮೇಲೆ ಚಪ್ಪಡಿಯನ್ನು ಇರಿಸಿದೆ. ಇದರಲ್ಲಿ ಚಾಮುಖ ತೀರ್ಥಪರ ಪ್ರತಿಮೆ ಇದೆ. ಈ ಸ್ತಂಭವನ್ನು ಕ್ರಿ.ಶ.1667 ರಲ್ಲಿ ನರಸಿಂಹಪುರದ ಪುಟಸೋಮಿಸೆಟ್ಟ್ರ ಮಗ ಚಿಕಂಣನ ತಮ್ಮ ಚೆಂನಣ ಮಾಡಿಸಿರಬೇಕು.

**11) ಲಲಿತ ಸರೋವರ**

ಲಲಿತ ಸಹೋದರ ಎಂದು ಶಾಸನಗಳಲ್ಲಿ ಕರೆದಿರುವ ರಚನೆಯು ಗೊಮ್ಮಟನ ಎಡಬದಿಗೆ ಕಲ್ಲುಪೀಠದ ಹೊರಗೆ ಇದ್ದು, ಗೊಮ್ಮಟನ ಪಾದಗಳಿವೆ ಅಭಿಷೇಕ ಮಾಡಿದ ಹಾಲು ನೀರು ನಿಲ್ಲುವಂತೆ ಕಲ್ಲಿನಲ್ಲಿ ಮಾಡಿದ ಸಣ್ಣ ತೊಟ್ಟಿಯಾಗಿದೆ. ಈ ತೊಟ್ಟಿಯು ಒಳಗೆ ವೃತ್ತಾಕಾರವಾಗಿದ್ದು, ಅದರ ಮೇಲಿನ ಭಾಗ ಹೊಯ್ಸಳರ ಕಾಲದ ತ್ರಿಕೂಟಾಚಲ ದೇವಾಲಯದ ಅಧಿಷ್ಠಾನದ ಮಾದರಿಯಲ್ಲಿದೆ. ಇದನ್ನು ಬಹುಶಃ ಮೊಸಳೆಯ ಬಸದಿಸೆಟ್ಟಿ ಮಾಡಿಸಿರಬೇಕು.

**12) ಚನ್ನಣ್ಣನ ದೋಣಿ**

ವಿಂಧ್ಯಗಿರಿ ಬೆಟ್ಟದ ಮೇಲೆ ಚನ್ನಣ್ಣನ ಬಸದಿ ಇಕ್ಕೆಲಗಳಲ್ಲಿ ಎರಡು ದೋಣಿಗಳಿವೆ. ಅವುಗಳಲ್ಲಿ ತ್ಯಾಗದ ಕಂಬದ ಕಡೆ ಇರುವ ದೋಣಿಗೆ ಚನ್ನಣ್ಣನ ದೋಣಿ ಎಂದು ಹೆಸರು. ಈ ದೋಣಿಯಲ್ಲಿ ಒಂದನ್ನು ಕ್ರಿ.ಶ.1667 ರಲ್ಲಿ ನರಸಿಂಹಪುರದ ಪುಟ್ಟಸ್ವಾಮಿ ಸೆಟ್ಟಿರ ಮಕ್ಕಳು ಚಿಕ್ಕಣ್ಣ ಹಾಗೂ ತಮ್ಮ ಚೆನ್ನಣ್ಣನು ಮಾಡಿಸಿರುತ್ತಾರೆ. ಹಾಗಾಗಿ ಇದಕ್ಕೆ ಚೆನ್ನಣ್ಣನ ದೋಣಿ ಎಂದೇ ಹೆಸರು. ಈ ದೋಣಿ ಮೂಲತಃ ಚಿಕ್ಕದಾಗಿದ್ದು, ಇದಕ್ಕೆ ಉತ್ತರಭಾಗದಲ್ಲಿ ಎತ್ತರವಾದ ಕಟ್ಟೆಯನ್ನು ಕಟ್ಟಿ ಹೆಚ್ಚಿನ ನೀರು ನಿಲ್ಲುವಂತೆ ಮಾಡಿರುತ್ತಾರೆ. ಇದರ ಬದಿಯಲ್ಲಿಯೇ ಹೂದೋಟವಿದೆ. ಇದು ಸ್ವಲ್ಪ ಆಳವಾಗಿದ್ದು, ಬೆಟ್ಟಕ್ಕೆ ಮುಖ್ಯವಾದ ನೀರಿನ ಆಸರೆಯಾಗಿತ್ತು.

**13) ಒಡೆಯರ ಮಂಟಪ**

ಇದು ವಿಂಧ್ಯಗಿರಿಯಲ್ಲಿದ್ದ ಕ್ರಿ.ಶ.1638ರಲ್ಲಿ ದೊರೆ ಚಾಮರಾಜ ಒಡೆಯರ ನೇತೃತ್ವದಲ್ಲಿ ಬೆಳ್ಗೊಳದ ಆಸ್ತಿ ಒತ್ತೆ ಇದ್ದುದನ್ನು ಬಿಡಿಸಿಕೊಳ್ಳುತ್ತಾರೆ. ಆದಕಾರಣ ಶಾಸನವನ್ನು ಹಾಕಿಸಲಾಗಿದೆ. ಇನ್ನೊಂದು ಭಾಗದಲ್ಲಿ ದೊಡ್ಡ ಕೃಷ್ಣರಾಜ ಒಡೆಯರ್ 18ನೇ ಶತಮಾನದಲ್ಲಿ ಈ ಕೇಂದ್ರದ ನಿರ್ವಹಣೆಗೋಸ್ಕರ ನೀಡಿದ ದಾನದ ವಿವರಗಳ ಬಗ್ಗೆ ತಿಳಿದುಬರುತ್ತದೆ.

## ಅಕ್ಕನ ಬಸದಿ

ನಗರದ ಪರಿಸರದಲ್ಲಿ ಚಂದ್ರಗಿರಿ ಬೆಟ್ಟಕ್ಕೆ ಹೊಂದಿಕೊಂಡಿರುವ ಈ ಬಸದಿಯನ್ನು ಹೊಯ್ಸಳ ಮನೆತನದ ಇಮ್ಮಡಿ ವೀರಬಲ್ಲಾಳನ ಮಂತ್ರಿ ಶಿವೋಪಾಸಕ ಚಂದ್ರಮೌಳಿಯ ಧರ್ಮಪತ್ನಿ ಜೈನ ಧರ್ಮಾವಲಂಬಿ ಅಚಲದೇವಿ (ಅಬೆಯಕ್ಕ) ಕ್ರಿ.ಶ.1880 ರಲ್ಲಿ ಡಿಸೆಂಬರ್ 25 ರಂದು ನಿರ್ಮಿಸಿದ್ದಾಳೆ. ಇದು ಅಕ್ಕನ ಬಸದಿ ಎಂಬ ನಾಮಾಂಕಿತದಿಂದ ಜನಜನಿತವಾಗಿ ಅವಳ ಹೆಸರನ್ನು ಅಜರಾಮರನಾಗಿಸಿದ ಕಪ್ಪು ಮಿಶ್ರಿತ ನೀಲಿ ಛಾಯೆಯ ಒಳಪದ ಪದರಗಲ್ಲಿನಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈ ಬಸದಿಯು ನಕ್ಷತ್ರಾಕಾರ ತಲವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸ, ನವರಂಗ ಮತ್ತು ಮುಖಮಂಟಪವಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಪಾರ್ಶ್ವನಾಥ ತೀರ್ಥಂಕರನ ಕಾಯೋತ್ಸರ್ಗ ಶಿಲ್ಪವಿದೆ. ಅಷ್ಟಕೋನಾಕ್ರುತಿಯ ವಿತಾನದಲ್ಲಿ ಪದ್ಮಮಂಡಲವಿದೆ. ದ್ವಾರಬಂಧವು, ರತ್ನ, ವಲ್ಲಿ, ಸ್ತಂಭ, ವಿದ್ಯಾಧರ ಮತ್ತು ಪದ್ಮಗಳಿಂದ ಅಲಂಕೃತವಾಗಿರುವ ಪಂಚಶಾಖಾ ಮಾದರಿಯಲ್ಲಿದೆ. ಲಲಾಟಬಿಂಬದಲ್ಲಿ ಸಿಂಹಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಜಿನನ ಉಬ್ಬುಶಿಲ್ಪವಿದೆ. ಉತ್ತರಾಂಗಣದಲ್ಲಿ ಐದು ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಸೇದ್ಯಾಪಿಂಡ್‌ದಲ್ಲಿ ದ್ವಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಶುಕನಾಸದ ವಿತಾನದ ಮಧ್ಯದಲಂಕಾರದ ಸುತ್ತಲಿನ ಪ್ರತಿಯೊಂದು ಅಂಕಣದಲ್ಲೂ ಪದ್ಮಮಂಡಲದ ಚಿಕ್ಕಚಿಕ್ಕ ಅಲಂಕಾರಗಳಿವೆ. ದ್ವಾರಬಂಧವು ಸ್ತಂಭಶಾಖೆ ಪ್ರಧಾನವಾಗಿರುವ ದ್ವಿಶಾಲಾ ರೀತಿಯಲ್ಲಿದೆ. ದ್ವಾರಬಂಧದ ಸುತ್ತಲೂ ಅಷ್ಟಕೋನಾಕೃತಿಯ ರಂಧ್ರ್ರಗಳುಳ್ಳ ಜಾಲಂಧ್ರಗಳನ್ನು ಕಲಶ, ತಾಟಕ, ಘಟ, ಮಂಡಿ, ಫಲಕ, ವೀರಕಂಠ, ಬೋದಿಗೆ ಮತ್ತು ಶಿಖದಿಂದ ಕೂಡಿದೆ. ಈ ನಾಲ್ಕು ಸ್ತಂಭಗಳಿಗೆ ಸಮಾನಾಂತರವಾಗಿ ಸುತ್ತಲೂ ಭಿತ್ತಿಗಳಲ್ಲಿ ಹನ್ನೆರಡು ಭದ್ರಕ ಪ್ರಕಾರದ ಸ್ತಂಭಗಳಿವೆ. ವಿತಾನದ ಒಂಭತ್ತು ಅಂಕಣಗಳಲ್ಲೂ ಪದ್ಮ ಮಂಡಲಗಳ ಅಲಂಕಾರಗಳಿವೆ. ದ್ವಾರಬಂಧವು ಸ್ತಂಭಶಾಖೆ ಪ್ರಧಾನವಾಗಿರುವ ಪುಷ್ಯ ಶಾಖಾ ರೀತಿಯಲ್ಲಿದೆ. ಲಲಾಟಪಟ್ಟಿಯಲ್ಲಿ ಜಿನನು ಪದ್ಮಾಸನದಲ್ಲಿದ್ದಾನೆ. ಉತ್ತರಾಂಗಣದಲ್ಲಿ ಏಳು ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಇವುಗಳ ಮಧ್ಯದಲ್ಲಿ ನೃತ್ಯ ಮಾಡುತ್ತಿರುವ ಸ್ತ್ರೀಯರ ಉಬ್ಬುಶಿಲ್ಪಗಳಿವೆ. ತೆರೆದಮುಖಮಂಟಪದ ಒಳಭಾಗದಲ್ಲಿ ಸುತ್ತಲೂ ಕಕ್ಷಾಸನವಿದೆ. ಪ್ರವೇಶ ಭಾಗದ ಪಾರ್ಶ್ವಗಳಲ್ಲಿ ಎರಡು ಸ್ವತಂತ್ರ ಶ್ರೀಕಾರ ಪ್ರಕಾರದ ಸ್ತಂಭಗಳಿವೆ. ವಿತಾನದ ಮಧ್ಯದಂಕಣದಲ್ಲಿ ಪದ್ಮಮಂಡಲವಿದೆ.

ಬಸದಿಯ ಹೊರವಿನ್ಯಾಸವು ನಕ್ಷತ್ರಾಕಾರವಾಗಿದೆ. ಇದರ ಮುರ್ಧ್ವಮುಖ ರಚನಾಕ್ರಮದಲ್ಲಿ ಅಧಿಷ್ಠಾನ ಭಿತ್ತಿ, ಪ್ರಸ್ತಕ ಗ್ರೀವ, ಶಿಖರ ಸ್ತೂಫಿಗಳಿವೆ. ಅಧಿಷ್ಠಾನವು ವೇದಿಬಂಧ

ರೀತಿಯಲ್ಲಿದೆ. ಇದರಲ್ಲಿ ಕ್ರಮವಾಗಿ ಖುರ್, ಕುರಕ, ಪದ್ಮ, ಕುಮುದ, ಕಪೋತ, ಕಂಟಕ, ಪದ್ಮ, ಮತ್ತು ವೇದಿ ಭಾಗಗಳಿವೆ. ಭಿತ್ತಿಯಲ್ಲಿ ಭದ್ರ ಮತ್ತು ಕರ್ಣಗಳಿವೆ. ಭದ್ರದಲ್ಲಿ ಕೋಷ್ಠಪಂಜರ ಮತ್ತು ಕರ್ಣದಲ್ಲಿ ಸ್ತಂಭ ಪಂಜರಗಳು ಅಲಂಕಾರಗಳಿವೆ. ಇವುಗಳ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರ ಪ್ರತಿರೂಪಗಳಿವೆ. ಭಿತ್ತಿಯಲ್ಲಿ ಸುತ್ತಲೂ ನಿಯೋಜಿತ ಅಂತರದಲ್ಲಿ ಕುಡ್ಯ ಸ್ತಂಭಗಳಿವೆ. ಭಿತ್ತಿಯ ಮೇಲ್ಭಾಗದಲ್ಲಿ ಸುತ್ತಲೂ ಮುಂಚಾಚಿದ ಕಪೋತವಿದೆ. ದ್ರಾವಿಡ ಶೈಲಿಯಲ್ಲಿರುವ ಶಿಖರವು ತ್ರಿತಲ ಮಾದರಿಯಲ್ಲಿದೆ. ಪ್ರಸ್ತರವು, ಉತ್ತರ, ವಾಜನ, ವಲಭಿ, ಕಪೋತ, ಕಂಟಕದಿಂದ ಕೂಡಿದೆ. ಇದರ ಮೇಲ್ಭಾಗದಲ್ಲಿರುವ ಮೊದಲ ತಲವು (ಹಾರ) ಕೂಟ,ಶಾಲ ಪಂಜರದಿಂದ ಕೂಡಿದ್ದು, ಇದು ಇಡೀ ಬಸದಿಯನ್ನು ಸುತ್ತುವರೆದಿದೆ. ಇದರ ಮೇಲ್ಭಾಗದಲ್ಲಿ ಎರಡು ತಲಗಳಿದ್ದು, ಪ್ರತಿಯೊಂದು ತಲದ ಮೂರು ಮುಖದ ಶಾಲದಲ್ಲಿ ಜಿನನ ಶಿಲ್ಪಪಟ್ಟಿಕೆಗಳಿವೆ. ಇವುಗಳಲ್ಲಿ ದ್ವಿಭಂಗಿ ಚಾಮರಧಾರರು ಪ್ರಭಾಮಂಡಲ ಮತ್ತು ಮುಕ್ಕೊಡೆಸಹಿತ ಪದ್ಮಾಸನದಲ್ಲಿ ಜಿನನ ಶಿಲ್ಪಗಳಿವೆ. ಈ ಜಿನ ಶಿಲ್ಪಪಟ್ಟಿಕೆಗಳ ಮೇಲ್ಭಾಗದಲ್ಲಿ ಕೀರ್ತಿ ಮುಖದ ಲಂಕಾರಗಳಿವೆ. ಇಂತಹದೇ ಒಂದು ಜಿನ ಶಿಲ್ಪಪಟ್ಟಿಕೆ ಬಸದಿಯ ಮುಂಬದಿಯಲ್ಲಿ ಪ್ರಸ್ತರದ ಮೇಲ್ಭಾಗದ ಹಾರದಲ್ಲಿದೆ. ಶಿಖರವು ಬ್ರಹ್ಮಚಂದ ಶೈಲಿಯಲ್ಲಿದೆ. ಇದರ ನಾಲ್ಕು ಮುಖಗಳಲ್ಲಿ ಜಿನಶಿಲ್ಪಪಟ್ಟಿಕೆಗಳಿವೆ. ಇವುಗಳ ಇಕ್ಕೆಲಗಳಲ್ಲಿ ಚಂದ್ರಮಂಡಲ ಮತ್ತು ವಲ್ಲೀಮಂಡಲಗಳ ಅಲಂಕಾರಗಳಿವೆ. ಶಿಖರದ ಮೇಲ್ಭಾಗದಲ್ಲಿದ್ದ ಶಿಲೆಯ ಸ್ತೂಪಿ ಕೆಳಗೆ ಬಿದ್ದಿದೆ. ಇದು ಈಗ ಈ ಬಸದಿಯ ಮುಂಭಾಗದಲ್ಲಿದೆ. ಈ ಬಸದಿಯ ಮೇಲ್ಕಟ್ಟಡದ (ಶಿಖರ) ಮುಂಭಾಗದಲ್ಲಿ ಶುಕನಾಸವಿದೆ. ಕೀರ್ತಿಮುಖದಿಂದ ಅಲಂಕಾರವಾಗಿರುವ ಲಲಾಟನಾಸಿಯಲ್ಲಿ ಅಷ್ಟವಿಧ ಮಹಾಪ್ರಾತಿಹಾರ್ಯಗಳಿಂದ ಶೋಭಿತ ತ್ರಿ–ತ್ರೀರ್ಥಕ ಜಿನ ಶಿಲ್ಪಪಟ್ಟಿಕೆಯಿದೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವ ನಕ್ಷತ್ರಾಕಾರದ ಬಸದಿಗಳ ವಾಸ್ತುಶಿಲ್ಪ ಶಾಸನಗಳ ಅಧ್ಯಯನದ ದೃಷ್ಟಿಯಿಂದ ಈ ಬಸದಿ ಅಪರೂಪದ್ದಾಗಿದೆ. ಮುಂಚೆ ಬಲಬದಿಗೆ ಬಾಗಿದ ಈ ಬಸದಿಯನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯವರು ವ್ಯವಸ್ಥಿತವಾಗಿ ಜೀರ್ಣೋದ್ಧಾರಪಡಿಸಿರುತ್ತಾರೆ.

**ದಾನಶಾಲೆ ಬಸದಿ**

ಅಕ್ಕನ ಬಸದಿ ಪ್ರವೇಶದ್ವಾರದ ಎಡಬದಿಯಲ್ಲಿ ಪೂರ್ವಾಭಿಮುಖವಾಗಿರುವ ಈ ಬಸದಿ ಕ್ರಿ.ಶ.12ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಇದು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿದೆ. ಇದರಲ್ಲಿ ಪಂಚಬಾಲ ಬ್ರಹ್ಮಚಾರಿ ತಿರ್ಥಂಕರರ (ಪಂಚತೀರ್ಥ) ಅಪರೂಪದ ಶಿಲ್ಪವಿದೆ. 24ನೇ ತೀರ್ಥಂಕರಲ್ಲಿ ವಾಸು ಪೂಜ್ಯನಾಥ, ಮಲ್ಲಿನಾಥ, ನೇಮಿನಾಥ,

ಪಾರ್ಶ್ವನಾಥ, ಮಹಾವೀರ ತೀರ್ಥಂಕರರು ಬಾಲಬ್ರಹ್ಮಚಾರಿಗಳಾಗಿ ಸಂಸಾರದಲ್ಲಿದ್ದರೂ ನಿರಾಸಕ್ತರಾಗಿ ಸಕಲ ಮೋಹಗಳಿಂದ ವೈರಾಗ್ಯ ಹೊಂದಿ ಕಠಿಣ ತಪಸ್ಸಿನ ಮೂಲಕ ಕೇವಲಜ್ಞಾನ ಪಡೆದು ಮೋಕ್ಷವನ್ನು ಸಂಪಾದಿಸಿದ್ದಾರೆ. ಇವರು ಜೈನ ತೀರ್ಥಂಕರರ ಪರಂಪರೆಯಲ್ಲಿ ಮುಕುಟಮಣಿಗಳಾಗಿ ಶೋಭಿಸುತ್ತಾ ವಿಶೇಷ ಸ್ಥಾನವನ್ನು ಪಡೆದಿದ್ದಾರೆ.

**ಸಿದ್ಧಾಂತ ಬಸದಿ**

ಅಕ್ಕನ ಬಸದಿಯ ಪಶ್ಚಿಮದಲ್ಲಿ ಪೂರ್ವಾಭಿಮುಖವಾಗಿರುವ ಈ ಬಸದಿಯ ವಾಸ್ತು ಲಕ್ಷಣಗಳನ್ನು ಪರಿಶೀಲಿಸಿದರೆ, ಇದು ಕ್ರಿ.ಶ.ಸುಮಾರು 10ನೇ ಶತಮಾನದಲ್ಲಿ ಅಂದರೆ ಗಂಗರ್ ಅಕಾಲದಲ್ಲಿ ನಿರ್ಮಾಣವಾಗಿರುವಂತೆ ತಿಳಿದುಬರುತ್ತದೆ. ಇದರಲ್ಲಿ ದವಲ, ಜಯಧವಲ, ಮಹಾಧವಲ ಇತ್ಯಾದಿ ಜೈನ ಸಿದ್ಧಾಂತ ಶಾಸ್ತ್ರಗ್ಳನ್ನು ಸಂರಕ್ಷಿಸಿ ಇಡಲಾಗಿತ್ತು. ಅಂತಾಗಿ ಇದನ್ನು ಸಿದ್ಧಾಂತ ಬಸದಿ ಎಂದು ಕರೆಯಲಾಗಿದೆ. ಇದರ ಸಭಾಮಂಟಪದಲ್ಲಿ ಎಂಟು ಬ್ರಹ್ಮಕಾಂಡ ಪ್ರಕಾರದ ಕಂಬಗಳಿವೆ. ದ್ವಾರಬಂಧವು ಹೊಯ್ಸಳರ ಕಾಲದ್ದಾಗಿದೆ. ಈ ಬಸದಿಯಲ್ಲಿ 24 ತೀರ್ಥಂಕರರ ಪ್ರಭಾವಳಿಯುಳ್ಳ ಪಾರ್ಶ್ವನಾಥ ಮತ್ತು ಪಂಚಬಾಲಯತಿ ತೀರ್ಥಂಕರರ (ಪಂಚತೀರ್ಥ) ಕಾಯೋತ್ಸರ್ಗ ಆಕರ್ಷಕ ಸಿಲ್ಪಗಳಿವೆ. ಈ ಬಸದಿಯನ್ನು ಕ್ರಿ.ಶ.1700 ರಲ್ಲಿ ಉತ್ತರ ಭಾರತದ ಮಾರವಾಡಿ ಭಕ್ತನೊಬ್ಬನು ಜೀರ್ಣೋದ್ಧಾರ ಮಾಡಿಸಿದ್ದಾನೆ. ಈ ಬಸದಿಯಲ್ಲಿ ಸಂರಕ್ಷಿಸಿ ಇಡಲಾಗಿದ್ದ ಜೈನ ಶಸ್ತ್ರ ಸಿದ್ಧಾಂತ ಗ್ರಂಥಗಳನ್ನು ಕ್ರಿ.ಶ. ಸುಮಾರು 18ನೆಯ ಶತಮಾನದಲ್ಲಿ ಮೂಡಬಿದರೆಗೆ ಸಾಗಿಸಲಾಗಿದೆ.

**ಮಂಗಾಯಿ ಬಸದಿ**

ಶ್ರವಣಬೆಳಗೊಳ ನಗರ ಪರಿಸರದಲ್ಲಿ ಈ ಬಸದಿಯನ್ನು ರಾಜನರ್ತಕಿಯೂ ಅಭಿನವ ಚಾರುಕೀರ್ತಿ ಭಟ್ಟಾರಕಪಂಡಿತಾಚಾರ್ಯರ ಶಿಷ್ಯೆಯೂ ಆದ ಮಂಗಾಯಿ ಎಂಬುವವಳು ಕ್ರಿ.ಶ.1325 ರಲ್ಲಿ ನಿರ್ಮಿಸಿದ್ದಾಳೆ. ಶಾಸನದಲ್ಲಿ ಇದನ್ನು ತ್ರಿಭುವನ ಚೂಡಾಮಣಿ ಎಂಬ ಹೆಸರಿನಿಂದ ಕರೆಯಲಾಗಿದೆ. ಆದರೆ ಇದು ಮಂಗಾಯಿ ಬಸದಿ ಎಂದು ಅವಳ ಹೆಸರಿನಿಂದಲೇ ಜನಜನಿತವಾಗಿದೆ.

ಪೂರ್ವಾಭಿಮುಖವಾಗಿರುವ ಇದರ ತಳವಿನ್ಯಾಸದಲ್ಲಿ ಆಯತಾಕಾರದ ಗರ್ಭಗೃಹ ನವರಂಗ ಮತ್ತು ಮುಖಮಂಟಪವಿದೆ. ಗರ್ಭಗೃಹದಲ್ಲಿ ಶಾಂತಿನಾಥ ಮತ್ತು ಪಾರ್ಶ್ವನಾಥ ಮತ್ತು ಮಹಾವೀರರ ಶಿಲ್ಪಗಳಿವೆ. ಈ ಶಿಲಪ್ಗಳು ಕಾಯೋತ್ಸರ್ಗ ಶಿಲ್ಪಗಳಾಗಿವೆ. ವಿಜಯನಗರ ಅರಸರ ಮನೆತನದ ಒಂದನೆಯ ದೇವರಾಯನ ಪಟ್ಟದ ರಾಣಿ ಭೀಮಾದೇವಿ ಮಾಡಿಸಿದ

ಎಂದು ತಿಳಿದುಬರುತ್ತದೆ. ಪಾರ್ಶ್ವಗಳಲ್ಲಿ ಎರಡು ಆನೆಗಳು ಇದ್ದು ಸೂಕ್ಷ್ಮಕೆತ್ತನೆ ಮತ್ತು ನೈಜತೆಯ ದೃಷ್ಟಿಯಿಂದ ಆಕರ್ಷಕವಾಗಿದೆ. ಈ ಬಸದಿಯನ್ನು ಗೇರುಸೊಪ್ಪೆಯ ಹಿರಿಯಣ್ಣನ ಶಿಷ್ಯ ಗುಮ್ಮಟ್ಟಣ್ಣ ಎಮ್ಬಾತನು ಜೀರ್ಣೋದ್ಧಾರ ಮಾಡಿಸಿದ್ದಾನೆ.

ಮೊದಲನೆಯ ಮಹಾಮಸ್ತಕಾಭಿಷೇಕವನ್ನು ಮಾರ್ಚ್ 3, 981 ರಂದು ನೆರವೇರಿಸಲಾಯಿತೆಂದು ಬಹುಜನರ ಅಭಿಮತ ಚಾವುಂಡರಾಯನನ್ನು ಗೊಮ್ಮಟ ಎಂದು ಕರೆಯುತ್ತಿದ್ದರಿಂದ ಈ ಶಿಲ್ಪಕ್ಕೆ ಗೊಮ್ಮಟೇಶ್ವರ ಎಂದು ಕರೆಯುತ್ತಾರೆ.

ಗೊಮ್ಮಟನ ಎತ್ತರ 58.8, ಪಾದ 2.8, ಪಾದದಿಂದ ಮೊಣಕಾಲು 15.2, ಪಾದದಿಂದ ಟೊಂಕ 31.4 ಪಾದದಿಂದ ಹೊಕ್ಕಳು 34.1, ಪಾದದಿಂದ ಕತ್ತಿನ ರೇಖೆ 45.10 ಪಾದದಿಂದ ಕತ್ತು 47.8 ಮೊಣಕಾಲಿನಿಂದ ಟೊಂಕ 16.2, ಟೊಂಕದಿಂದ ಹೊಕ್ಕಳು 29, ಹೊಕ್ಕಳಿಂದ ಕತ್ತಿನ ರೇಖೆ 2.8, ಕತ್ತಿನ ಮೇಲ್ಭಾಗದಿಂದ 11, ಬಾಹುಗಳ ಉದ್ದ 30, ಶಿಶ್ನದ ಉದ್ದ 4, ಕಿವಿಯ ಉದ್ದ 5,10, ನಾಸಿಕದ ಉದ್ದ 3.9, ಮಧ್ಯಯದ ಬೆರಳು 8, ತೋರುಬೆರಳು 7, ಹೆಬ್ಬೆರಳು 5, ಕಿವಿಯಿಂದ ಕಿವಿಗೆ 8.10, ಟೊಂಕ 9.1, ಭುಜ 23.9, ಎದೆ 12.8, ಕತ್ತು 6.4. ಈ ಮೇಲಿನವುಗಳನ್ನು 1980ರಲ್ಲಿ ಭಾರತೀಯ ಕಲಾ ಇತಿಹಾಸ ಸಂಸ್ಥೆ ಅಳತೆಯನ್ನು ನಡೆಸಿರುತ್ತಾರೆ.

ಅದೇ ರೀತಿ 1820ರಲ್ಲಿ ಶಾಂತರಾಜ ಪಂಡಿತ ಎಂಬುವವರು ಅಳತೆಯನ್ನು ನಡೆಸಿರುತ್ತಾರೆ. ಅವುಗಳು ಈ ಕೆಳಕಂಡಂತೆ ಕಂಡು ಬರುತ್ತವೆ. ಅಡಿಯಿಂದ ಮುಡಿಯವರೆಗೆ 36 8/1 ಪಾದದಿಂದ ಹೊಕ್ಕಳು 20, ಹೊಕ್ಕಳಿನಿಂದ ತಲೆ 16.2/1, ಗಡ್ಡದಿಂದ ನೆತ್ತಿ 6, ಭುಜದಿಂದ ಭುಜ 16, ಟೊಂಕದ ಸುತ್ತಳತೆ 20, ಕಿವಿಯಿಂದ ಕಿವಿ 8, ಹೆಬ್ಬರಳಿನ ಉದ್ದ 2 4/1, ಅಂಗುಷ್ಟ 4 2/1, ಪಾದ 4 10/1 ಇವುಗಳು ಮೊಳಗಳಲ್ಲಿ ಅಳತೆಯನ್ನು ಮಾಡಿರುತ್ತಾರೆ.

1831ರಲ್ಲಿ ಲೋಕೋಪಯೋಗಿ ಇಲಾಖೆಯವರು ಈ ರೀತಿ ಅಳತೆ ಮಾಡಿರುತ್ತಾರೆ. ಅಂಗಾಲಿನಿಂದ ಕಿವಿಯ ಕೆಳ ಅಂಚಿನವರೆಗೆ 50, ಕಿವಿಯಿಂದ ನೆತ್ತಿ 6, ಪಾದದ ಉದ್ದ 9, ಅಂಗುಷ್ಟ 2, ಪೃಷ್ಟದಿಂದ ಕಿವಿ 24, ಸೊಂಟದ ಕೆಳಗಿನ ಅಗಲ 13, ಟೊಂಕದಿಂದ ಕಿವಿ 17, ಭುಜದಿಂದ ಭುಜ 26, ತೋರ್ಬೆರಳು 2.6, ಮಧ್ಯದ ಬೆರಳು 5.3, ಅದೇ ಮಾದರಿಯಲ್ಲಿ 1957ರಲ್ಲಿ ಮೈಸೂರು ಪುರಾತತ್ವ ಇಲಾಖೆಯವರು ಈ ರೀತಿ ಅಳತೆ ಮಾಡಿರುತ್ತಾರೆ. ಎತ್ತರ 58, ಪಾದದಿಂದ ಕಿವಿ 31, ಕಿವಿಯ ಕೆಳ ಅಂಚಿನಿಂದ ನೆತ್ತಿ 6.6, ಪಾದದ ಉದ್ದ 8, ಟೊಂಕದ ಅಗಲ 10, ಭುಜದಿಂದ ಭುಜ 23,7 2/1 ಅಂಗುಷ್ಟ 2.9, ಮಧ್ಯದ ಬೆರಳು 5, ಹೆಬ್ಬೆಟ್ಟು 4.8

ಅಡಿ ಇದೆ ಎಂದು ಸೂಚಿಸಿರುತ್ತಾರೆ. ಶ್ರವಣಬೆಳಗೊಳದ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕದ ವಿವರಗಳನ್ನು ಈ ಕೆಳಕಂಡಂತೆ ತಿಳಿಸಲಾಗಿರುತ್ತದೆ.

1. ಕ್ರಿ.ಶ. 981 ಸ್ಥಾಪನೆ

2. ಕ್ರಿ.ಶ. 1397, ಪ್ರಥಮ ಮಹಾಮಸ್ತಕಾಭಿಷೇಕ

3. ಕ್ರಿ.ಶ. 1550, ಎರಡನೆಯ ಮಹಾಮಸ್ತಕಾಭಿಷೇಕ

4. ಕ್ರಿ.ಶ. 1614, ಮೂರನೇ ಮಹಾಮಸ್ತಕಾಭಿಷೇಕ

5. ಕ್ರಿ.ಶ. 1640, ನಾಲ್ಕನೇ ಮಹಾಮಸ್ತಕಾಭಿಷೇಕ

6. ಕ್ರಿ.ಶ. 1678, ಐದನೇ ಮಹಾಮಸ್ತಕಾಭಿಷೇಕ

7. ಕ್ರಿ.ಶ. 1767, ಆರನೇ ಮಹಾಮಸ್ತಕಾಭಿಷೇಕ

8. ಕ್ರಿ.ಶ. 1780, ಏಳನೇ ಮಹಾಮಸ್ತಕಾಭಿಷೇಕ

9. ಕ್ರಿ.ಶ. 1827, ಎಂಟನೇ ಮಹಾಮಸ್ತಕಾಭಿಷೇಕ

10. ಕ್ರಿ.ಶ. 1887, ಒಂಭತ್ತನೇ ಮಹಾಮಸ್ತಕಾಭಿಷೇಕ

11. ಕ್ರಿ.ಶ. 1909, ಹತ್ತನೇ ಮಹಾಮಸ್ತಕಾಭಿಷೇಕ

12. ಕ್ರಿ.ಶ. 1925, ಹನ್ನೊಂದನೇ ಮಹಾಮಸ್ತಕಾಭಿಷೇಕ

13. ಕ್ರಿ.ಶ. 1940, ಹನ್ನೆರಡನೇ ಮಹಾಮಸ್ತಕಾಭಿಷೇಕ

14. ಕ್ರಿ.ಶ. 1953, ಹದಿಮೂರನೆಯ ಮಹಾಮಸ್ತಕಾಭಿಷೇಕ

15. ಕ್ರಿ.ಶ. 1967, ಹದಿನಾಲ್ಕನೇ ಮಹಾಮಸ್ತಕಾಭಿಷೇಕ

16. ಕ್ರಿ.ಶ. 1981, ಹದಿನೈದನೇ ಮಹಾಮಸ್ತಕಾಭಿಷೇಕ

17. ಕ್ರಿ.ಶ. 1993, ಹದಿನಾರನೇ ಮಹಾಮಸ್ತಕಾಭಿಷೇಕ

18. ಕ್ರಿ.ಶ. 2006, ಹದಿನೇಳನೆಯ ಮಹಾಮಸ್ತಕಾಭಿಷೇಕ

ಜೈನಿ ಶಂಕೆ ಪರ್ಯಾಯ ಹೆಸರು ಜಿನಧರ್ಮ, ಆತ್ಮಚೇತನದ, ಅಹಿಂಸೆಯ, ಸದ್ವರ್ತನೆಯ ಧರ್ಮಪಂಥದ ನಂಬುಗೆ ಅದು. ಅದರ ಉಗಮ ಕ್ರಿ.ಪೂ. ಒಂದುಸಾವಿರ ವರುಷುಗಳಷ್ಟಾದರೂ ಹಿಂದೆ ಹೋಗುತ್ತದೆ. ಜಿನ, ಜಿತ, ಜೈನ ಎಂಬ ಅರ್ಥಪೂರ್ಣ ಎರಡಕ್ಷರಗಳ ಶಬ್ಧ ಬಹು ಗಾಂಭೀರ್ಯತೆಯನ್ನು ಹೊಂದಿದೆ. ಜಗದ ಜಂಜಡಗಳನ್ನು ಕಳಚುತ್ತಾ ಕಳಚುತ್ತಾ ಎಲ್ಲವನ್ನೂ ತ್ಯಾಗ ಮಾಡಿ ಎಲ್ಲವನ್ನು ನಿಜ ಅರ್ಥದಲ್ಲಿ ಗೆದ್ದು ಆಸೆ, ಆಕಾಂಕ್ಷೆಗಳನ್ನು ಆಚೆಗೆ ಹಾಕಿ ಹಿಂಸೆಯಿಂದ ದೂರಾಗಿ ಅಹಿಂಸೆ ಎಂಬ ಉಡಿಗೆ ತೊಟ್ಟು ನಿವಾಂತ ಪ್ರಶಾಂತ ಅನಂತ ಅಂಬರವನ್ನು ಮಾತ್ರ ತನ್ನ ಅಂಗವಸ್ತ್ರವನ್ನಾಗಿ ಮಾಡಿಕೊಂಡು ಬವದ್ ಚಿಂತನೆಯಲ್ಲಿ ತೊಡಗಿದವನೆಂದೂ ಜಿತನೆಂದು ಜೈನನೆಂದೂ ಅರ್ಥೈಸಬಹುದು.

ಬಾಹುಬಲಿ ಸರ್ವವನ್ನೂ ತ್ಯಾಗ ಮಾಡಿದ ಮಹಾತ್ಯಾಗಿ. ಈತನು ಜೈನ ಸಂಪ್ರದಾಯದ 24 ತೀರ್ಥಂಕರರಲ್ಲಿ ಪ್ರಥಮ ತೀರ್ಥಂಕರನಾಧ ಆದಿನಾಥನ (ವೃಷಭನಾಥ) ಎರಡನೆಯ ಮಗ ತನ್ನ ರಾಜ್ಯಾಧಿಪತ್ಯವನ್ನು ತಮ್ಮನಾದ ಬಾಹುಬಲಿ ಸ್ವೀಕಾರ ಮಾಡದೇ ಇರುವುದರಿಂದ ಅಣ್ಣ ತಮ್ಮಂದಿರಲ್ಲಿ ಹಪಾಹಪಿಯಾದ ಅಣ್ಣನ ಸ್ವಭಾವವನ್ನು ಕಂಡು ಬಾಹುಬಲಿಯು ತಾನು ಗೆದ್ದ ಅಣ್ಣನ ರಾಜ್ಯವನ್ನು ತಿರುಗಿಕೊಡುತ್ತಾನೆ. ಸರ್ವಸ್ವವನ್ನೂ ತ್ಯಾಗ ಮಾಡಿ ಜಿನತ್ವವನ್ನು ಪಡೆದು ಅತ್ಯಂತ ಶ್ರೇಷ್ಟ ಜಿನನೆಂದು ಪ್ರಸಿದ್ಧನಾದನು. ತಲಕಾಡಿನ ಗಂಗರ ಆಳ್ವಕೆಯಲ್ಲಿ ಶ್ರವಣಬೆಳಗೊಳದ ಬಾಹುಬಲಿ ಮೂರ್ತಿ ಆಳ್ವಿಕೆಯಲ್ಲಿ ಶ್ರವಣಬೆಳಗೊಳದ ಬಾಹುಬಲಿ ಮೂರ್ತಿಯೊಂದಿಗೆ ಔನ್ನತ್ಯದ ಅಂತಿಮ ಸ್ಥಾನ ಪಡೆಯಿತು. ಗಂಗರ ಮಂತ್ರಿ ಚಾವುಂಡರಾಯ ಗೊಮ್ಮಟನನ್ನು ನಿರ್ಮಿಸಿದನು. ಸಾಂದರ್ಭಿಕವಾಗಿ ಇದನ್ನೂ ಇಲ್ಲಿ ಹೇಳಬಹುದು.

ಜೈನ ಸಂಪ್ರದಾಯ ಕರ್ನಾಟಕದಲ್ಲಿ ತೀರ ಮಹತ್ವದ ಸ್ಥಾನ ಪಡೆದಿತ್ತು. ಕರ್ನಾಟಕದ ಸಂಸ್ಕೃತಿಗೆ ಜೈನರ ಕೊಡುಗೆ ಗಣ್ಯವಾದುದ್ದು. ಭದ್ರಬಾಹು ಮುನಿಯು ಮೌರ್ಯ ಸಾಮ್ರಾಜ್ಯದಿಂದ ಶ್ರವಣಬೆಳಗೊಳಕ್ಕೆ ಬಂದು ನಿಂತಿಷ್ಟು ಹಿಂದಿನಿಂದ ಜೈನ ಪಂಥ ಕರ್ನಾಟಕದಲ್ಲಿ ಹಳೆಯದೆಂಬುದು ನಿಶ್ಚಿತ. ಇದರಿಂದ ಶ್ರವಣಬೆಳಗೊಳ ಗಣ್ಯ ಜೈನ ಕೇಂದ್ರವಾಯಿತು.

ಬಾಹುಬಲಿ ಬಹಳ ಸುಂದರನಿದ್ದನಂತೆ ಆತನು ಕಾಮದೇವನೆಂಬ ಪ್ರತಿ ಹೆಸರು ಪಡೆದಿದ್ದ ಗಂಗರ ಮಂತ್ರಿ ಚಾವುಂಡರಾಯ ಶ್ರವಣಬೆಳಗೊಳದ ಶಿಲಾ ಮೂರ್ತಿಯನ್ನು ಇಂದ್ರಗಿರಿ ಬೆಟ್ಟದ ತುದಿಯ ಮೇಲೆ ಕೊರೆಯಿಸಿ ನಿಲ್ಲಿಸಿದನು. ಅದಕ್ಕೆ ಗೊಮ್ಮಟೇಶ್ವರನೆಂಬ ನಾಮಕರಣ ಮಾಡಿದ. ಭಾರತದಲ್ಲಿ ಹೆಸರು ಮಾಡಿದ ಸ್ಥಳ ಕಾಮೋತ್ಸರ್ಗ ಪ್ರತಿಮಾ ಶಾಸ್ತ್ರದ ಆಸನದ ಹೆಸರು ಶಿಲ್ಪಿಯ ಹೆಸರು ಅರಿಷ್ಟನೇಮಿ. ಇದು ಭಾರತದಲ್ಲಿಯೇ ಅತ್ಯಂತ ಎತ್ತರದ ಶಿಲಾಮೂರ್ತಿ, ಭೌತಿಕ

ಬದುಕಿನ ತ್ಯಾಗ, ಸ್ವಂತಿಕೆಯ ಸಂಯಮ ನಿಷ್ಕಲ್ಮಶ ಶುಭ್ರಹೃದಯ ಕೃತಜ್ಞತಾಭಾವ, ನಿಷ್ಟೆ, ಯಾತಾರ್ಥತೆ ಇವು ಸಪ್ತ ಪಥಗಳು ಬಾಹುಬಲಿ ನೀಡಿದ ಜಗದ ಸಂದೇಶ.

**ಭಂಡಾರಿ ಬಸದಿ**

ಶ್ರವಣ ಬೆಳಗೋಳದ ಅತ್ಯಂತ ದೊಡ್ಡ ಹಾಗೂ ನಗರದಲ್ಲಿ ಸ್ಥಾಪಿತವಾದ ಮೊಟ್ಟಮೊದಲ ದೇವಾಲಯವೇ ಭಂಡಾರಿ ಬಸದಿ. ಇದನ್ನು ಕ್ರಿ.ಶ 1159ರಲ್ಲಿ ದಂಡನಾಯಕ ಹುಳ್ಳಮ್ಮಯ್ಯ ಕಟ್ಟಿಸಿದ. ಈ ಹುಳ್ಳನು ಹೊಯ್ಸಳ ನರಸಿಂಹನ ಭಂಡಾರಿಯಾಗಿ ಈತನು ಶ್ರವಣ ಬೆಳಗೋಳಕ್ಕೆ ವಿಶೇಷವಾದ ಕಾಣಿಕೆಯನ್ನು ಸೇವೆಯನ್ನು ಸಲ್ಲಿಸಿದ್ದಾನೆ. ಮೂಲತಃ ಚತುರ್ವಂಶತಿ ತೀರ್ಥಂಕರ ಬಸದಿ ಎಂಬ ಹೆಸರಿನ ಈ ದೇವಾಲಯವನ್ನು ಭವ್ಯ ಚೂಡಾಮಣಿ ಎಂದು ಆಳುವ ಅರಸ ನರಸಿಂಹನು ಕರೆದು ಹುಳ್ಳರಾಜನಿಗಿದ್ದ ಸಂಯುಕ್ತ ಚೂಡಾಮಣಿ ಎಂಬ ಬಿರುದನ್ನು ಪ್ರಸಿದ್ಧಪಡಿಸಿದ. ಹುಳ್ಳರಾಜನು ಭಂಡಾರಿಯಾಗಿದ್ದುದರಿಂದ ಇದನ್ನು ಭಂಡಾರಿ ಬಸದಿ ಎಂದು ಮುಂದೆ ಕರೆಯಲಾಯಿತು. ಈ ದೇವಾಲಯವನ್ನು ಗೊಮ್ಮಟಪುರದ ಭೂಷಣ ಎಂದು ಶಾಸನವೊಂದರಲ್ಲಿ ಕರೆಯಲಾಗಿದೆ. ಈ ದೇವಾಲಯದ ಪ್ರಮುಖ ಅಂಗಗಳು 1) ಪರಿಸೂತ್ರ 2) ನೃತ್ಯಗೇಹ 3) ವಿವಿಧಸುವಿಧ ಪತ್ರಲತೆಗಳಿಂದ ಅಲಂಕಾರಗೊಂಡ ದ್ವಾರ ಎಂದು ಅದೇ ಶಾಸನದಿಂದ ತಿಳಿದುಬರುತ್ತದೆ. ಈ ದೇವಾಲಯ ಮೂರು ಬಾರಿ ಜೀರ್ಣೋದ್ದಾರಗೊಂಡಿದೆ. ಅದರ ಮುಖ್ಯ ದ್ವಾರ, ಗೋಪುರ, ಕೋಟೆಗೋಡೆ ಹಾಗೂ ದೇವಾಲಯದ ಎದುರು ನಿಂತಿರುವ ಮಾನಸ್ತಂಭಗಳೆಲ್ಲ ಕಳೆದ 350 ವರ್ಷಗಳಲ್ಲಿ ಸೇರಿಸಲ್ಪಟ್ಟವು. 2) ವಿಶಾಲವಾದ ಸ್ತಂಭ ಮಂಟಪವು 16ನೆ ಶತಮಾನಕ್ಕೆ ಸೇರಿದೆ 3) ಬಸದಿಯ ಮೂರು ದಿಕ್ಕಿನಲ್ಲಿ ನೆಟ್ಟಿರುವ ಪರಿಸೂತ್ರವು ಮೂಲ ದೇವಾಲಯದ ಉದ್ದಗಲವನ್ನು ಸೂಚಿಸುವುದು.

ನವರಂಗದ ದ್ವಾರದ ಮೇಲಿರುವ ದೇವೇಂದ್ರನ ಮೂರ್ತಿಯು ಶ್ರವಣಬೆಳ ಗೋಳದಲ್ಲಿರುವ ಹೊಯ್ಸಳ ಮೂರ್ತಿಗಳಲ್ಲಿಯೇ ಅತ್ಯಂತ ಉತ್ತಮವಾದ ಶಿಲ್ಪವಾಗಿದೆ. ಮುಖಮಂಟಪ ಹಾಗೂ ಹೊರಗೋಡೆ ಸರಳವಾಗಿದ್ದರೆ ಗರ್ಭಗುಡಿಯಲ್ಲಿರುವ ಚತುರ್ವಿಶತಿ ತೀರ್ಥಂಕರರ ಶಿಲ್ಪಗಳು ಕಲೆ, ಧರ್ಮ, ಮೂರ್ತಿ ಲಕ್ಷಷಣಗಳ ದೃಷ್ಠಿಯಿಂದ ಅತ್ಯಂತ ಮಹತ್ವದ ಶಿಲ್ಪಗಳಾಗಿವೆ ಸಾಲಾಗಿ ನಿಂತಿರುವ ಇಪ್ಪತ್ನಾಲ್ಕು ತೀರ್ಥಂಕರರ ಶಿಲ್ಪಗಳನ್ನು ಪೀಠಭಾಗದಲ್ಲಿ ಕೂಡಿದ ಜಿನ ಲಾಂಛನಗಳು ತೀರ್ಥಂಕರರ ಅದಿಬದಿಯಲ್ಲಿರುವ ಯಕ್ಷ ಮೂರ್ತಿಗಳು ತಮ್ಮ ಸಂಕೇತಗಳನ್ನು ಹೊಂದಿರುವುದು. ಶಿಲ್ಪಗಳ ಹಿಂದೆತೀರ್ಥಂಕರರನ್ನು ಗುರುತಿಸಿ ಅಂಕಿಗಳನ್ನು ಹಾಕಲಾಗಿದೆ. ಇವು ಮೂರ್ತಿ ಲಕ್ಷಣದ ಅಭ್ಯಾಸಕ್ಕೆ ಉಪಯುಕ್ತವಾದ

ಮಾಹಿತಿ ಕೊಡುವುವು. ಮುಖಮಂಟಪದ ಒಂದು ಕಂಬದಲ್ಲಿ ಈಚೆಗೆ ನಾವು ಕಂಡ ಶಾಸನದಿಂದ ಈ ವಿಭಾಗವನ್ನು ಕ್ರಿ.ಶ 1527 ರಲ್ಲಿ ಮಹಾಪ್ರಧಾನ ಬುಕ್ಕರಾಯನ ಮಗನಾದ ನಂಜರಾಯಪಟ್ಟಣದ ದೇವಪ್ಪನು ಕಟ್ಟಿಸಿ ಅದನ್ನು ಸರಸ್ವತಿ ಮಂಟಪವೆಂದು ಕರೆದುದಾಗಿ ತಿಳಿದುಬರುತ್ತದೆ. ಹೊಯ್ಸಳ ಕಾಲದಲ್ಲಿ ನಿರ್ಮಿಸಿದ ಸುಮಾರು 24 ತೀರ್ಥಂಕರರ ಜಿನ ಬಿಂಬ ಮೂರ್ತಿ ಶಿಲ್ಪಗಳನ್ನು ಒಂದೇ ವೇದಿಕೆಯಲ್ಲಿ ಭಂಡಾರಿ ಬಸದಿಯಲ್ಲಿ ಕಾಣಬಹುದು. ಇಲ್ಲಿರುವ ಎಲ್ಲಾ ಜಿನ ಶಿಲ್ಪಗಳನ್ನು ಒಂದೇ ರೀತಿಯಲ್ಲಿ ಕಡೆದಿರುವುದರಿಂದ ಈ ಶಿಲ್ಪಗಳ ಮಾದರಿಯ ಲಕ್ಷಣಗಳನ್ನು ಹೀಗೆ ಗುರುತಿಸಬಹುದು. ಎರಡು ಅರೇ ಕಂಬಗಳನ್ನಾಧರಿಸಿ ರೂಪಿಸಿರುವ ಸುಂದರವಾದ ಮಕರ ತೋರಣದ ಪ್ರಭಾವಳಿಯ ನಡುವೆ ಮುಕ್ಕೊಡೆಯನ್ನು ರಚಿಸಿ ಇದರ ಕೆಳಗೆ ಸಮಪ್ರಮಾಣದ ಕಾಯೊತ್ಸರ್ಗ ಭಂಗಿಯ ಜಿನ ಬಿಂಬಗಳನ್ನು ಇಲ್ಲಿ ನಿರ್ಮಿಸಿ ಇಡಲಾಗಿದೆ. ತೋರಣದಲ್ಲಿರುವ ಮಕರದ ಮೇಲೆ ಯಕ್ಕಷರ ಬಿಂಬಗಳಿದೆ. ಮುಕ್ಕೊಡೆಯ ವಿನ್ಯಾಸವು ಮಣಿಯುಕ್ತವಾಗಿ ಬಿಡಿ ಬಿಡಿಯಾಗಿ ಬಿಡಿಸಿರುವುದು ಕಂಡುಬರುತ್ತದೆ. ಜಿನನ ಶಿರದ ಹಿಂದೆ ಕಾಂತಿಯುಕ್ತವಾದ ಶಿರಶ್ಚಕ್ರವಿದೆ. ಎಲ್ಲಾ ಜಿನ ಬಿಂಬಗಳಲ್ಲೂ ಸುರುಳಿಗೂಡಲು ತಿದ್ದಿದ ಹುಬ್ಬು, ಅರೆ ಮುಚ್ಚಿದ ಕಣ್ಣು, ಮುಗುಳ್ನಗೆಯಿಂದ ಕೂಡಿದ ಪ್ರಸನ್ನ ಭಾವವುಳ್ಳ ದುಂಡಾದ ಮುಖ, ನೀಳವಾಗಿ ಬಿಡಿಸಿದ ಪ್ರಮಾಣಬದ್ಧವಾದ ಶರೀರ ರಚನೆಯನ್ನು ಇಲಿ ಕಾಣಬಹುದು. ಇಂತಹ ಜಿನ ಬಿಂಬಗಳ ಎರಡು ಪಕ್ಕಗಳಲ್ಲಿ ಅವರವರಿಗೆ ಸಂಬಂಧಿಸಿದ ಯಕ್ಷ್ಷ ಯಕ್ಷಿಯರ ಬಿಂಬಗಳನ್ನು ಕಡೆಯಲಾಗಿದೆ. ಯಕ್ಷ ಯಕ್ಷಿಯರ ಶಿಲ್ಪಗಳು ಕರಂಡ ಮುಕುಟ, ಶಿರಶ್ಚಕ್ರ, ಕುಂಡಲ, ಹಾರ, ಕಾಲ್ಗೆಜ್ಜೆ, ಕಡಗ, ಉಂಗುರಗಳು ಮೊದಲಾದ ಸರ್ವಾಭರಣಗಳನ್ನು ಧರಿಸಿದ್ದು ಕೈಗಳಲ್ಲಿ ಆಯುಧಗಳನ್ನು ಹಿಡಿದಿದೆ. ಆಯುಧಗಳ ವಿನ್ಯಾಸವನ್ನು ಮತ್ತು ಹಿಡಕೆಗಳನ್ನು ಅಲಂಕಾರಿಕವಾಗಿ ಕಡೆಯಲಾಗಿದೆ. ಈ ಹರಿ ಪೀಠದಲ್ಲಿ ಹನ್ನೆರಡನೇ ತೀರ್ಥಂಕರರಾದ ವಾಸ್ತು ಪೂಜ್ಯರ ಬಿಂಬವನ್ನು ಕೇಂದ್ರವಾಸಗಿಟ್ಟು ಒಂದೇ ಸಾಲಿನಲ್ಲಿ ಇಪ್ಪತ್ತನಾಲ್ಕು ಜನರನ್ನು ಪ್ರತಿಷ್ಠಾಪಿಸಿ ನಿಲ್ಲಿಸಲಾಗಿದೆ. ಈ ಜಿನಬಿಂಬಗಳಿಗೆಲ್ಲಾ ಹೆಚ್ಚಿನ ಮೆರುಗನ್ನಿತ್ತಿದ್ದು ಹರಿ ಪೀಠವು ಸುಂದರವಾಗಿ ಕಾಣುತ್ತದೆ. ಇದು ಹಾಸನ ಜಿಲ್ಲೆಯಲ್ಲಿ ಕಂಡುಬರುವ ಬಸದಿಗಳಲ್ಲಿ ದೊರೆತಿರುವ ಒಂದು ಪ್ರಮುಖ ಏಕೈಕ ಹರಿ ಪೀಠವಾಗಿದೆ. ಇಲ್ಲಿಯ ಶಿಲ್ಪಗಳ ಬಗೆಗೆ ಗಮನಿಸುತ್ತಾ ಎಸ್ ಶೆಟ್ಟರ್‌ರವರ ಪ್ರಕಾರ ಇಲ್ಲಿ ಶಿಲ್ಪಿಯು ಮೊದಲಿಗೆ ಯಕ್ಷ ಯಕ್ಷಿಯನ್ನುಳ್ಳ ಪ್ರಭಾವಳಿಯನ್ನು ರಚಿಸಿ ನಂತರ ಜಿನಬಿಂಬಗಳನ್ನು ಜೋಡಿಸಲು ಯತ್ನಿಸಿದ್ದಾನೆ. ಇದರಿಂದ ಕೆಲವು ಜಿನಬಿಂಬಗಳ ಬಳಿ ಬಂದಿರುವ ಯಕ್ಷ್ಷ ಯಕ್ಷಿಯರ ಶಿಲ್ಪಗಳು ಹೊಂದಾಣಿಕೆಯಾಗುತ್ತಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಈ ಕಾಲದಲ್ಲಿ ಸುತ್ತಾಲಯದಲ್ಲಿರುವ ಜಿನಬಿಂಬಗಳೊಂದಿಗೆ ನಿರ್ಮಿಸಿರುವ ಯಕ್ಕಷ ಯಕ್ಷಿಯರ ಶಿಲ್ಪಗಳು ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿರದೆ

ಗೊಂದಲವನ್ನುಂಟುಮಾಡಿದೆ. ಇದರಿಂದ ಶಿಲ್ಪಗಳೇ ವ್ಯತ್ಯಾಸವಾಗಿದೆಯೋ ಅಥವಾ ಶಿಲ್ಪರಚನೆಯ ನಿಯಮಗಳಲ್ಲಿ ವ್ಯತ್ಯಾಸವಿದ್ದಿದ್ದು ತಿಳದುಬರುತ್ತಿಲ್ಲ.

ಭಂಡಾರಿ ಬಸದಿಯ ಜಿನ ಪೀಠದಲ್ಲಿ ಕ್ರಮವಾಗಿ ತೀರ್ಥಂಕರರ ಲಾಂಛನಗಳನ್ನು ರೇಖಾಚಿತ್ರದಲ್ಲಿ ತದ ನಂತರದ ಕಾಲದಲ್ಲಿ ಮೂಡಿಸಲಾಗಿದೆ. ಈ ರೇಖಾಚಿತ್ರಗಳಗನು ಸಾರವಾಗಿ ನೋಡಿದಾಗ ಹರಿ ಪೀಠದ ಶಿಲ್ಪಗಳು ತಪ್ಪೆಂದು ತಿಳಯಬಹುದಾಗಿದೆ. ಒಟ್ಟಿನಲ್ಲಿ ಈ ಸಮಸ್ಯೆಗೆ ಇದೇ ಕಾಲದ ಇಂತಹ ಮತ್ತೊಂದು ಹರಿಪೀಠ ದೊರೆತಾಗ ಪರಿಹಾರ ಕಾಣಬಹುದಾಗಿದೆ. ದೊಡ್ಡ ಬೆಟ್ಟದ ಸುತ್ತಾಲಯದಲ್ಲೂ ಇಂತಹದೇ 24 ತೀರ್ಥಂಕರರ ಬಿಡಿ ಶಿಲ್ಪಗಳು ದೊರೆಯಬಹುದಾದರೂ ಅವುಗಳು ಒಂದೇ ವೇದಿಕೆಯ ಒಂದೇ ಪೀಠದ ಮೇಲೆ ಕಂಡುಬರುವುದಿಲ್ಲ. ಅಲ್ಲದೆ ಇಲಿನ ಕೆಲವು ಯಕ್ಷ ಯಕ್ಷಿಯರ ಜಿನಬಿಂಬಗಳು ತಾಳೆಯಾಗುತ್ತಿಲ್ಲ. ಹೊಯ್ಸಳರ ಶಿಲ್ಪಗಳು ಮೃದುಕಲ್ಲಿನಲ್ಲಿ ನಿರ್ಮಿಸಿದ ಜಿನಬಿಂಬಗಳನ್ನು ಅಲಂಕಾರ ಮುಕ್ತವಾಗಿ ರಚಿಸಲು ಪ್ರಯತ್ನಿಸಿರುವುದು ಶ್ಲಾಘನೀಯವಾಗಿದೆ. ಶಿಲ್ಪಗಳು ವೈಧಿಕ ಪರಂಪರೆಯ ಹಲವು ದೇವತೆಗಳ ಮೂರ್ತಿಗಳನ್ನು ಸಪರಿವಾರವಾಗಿ ರಚಿಸಿ ತಮ್ಮ ಕಲಾ ಪ್ರತಿಭೆಯನ್ನು ಮೆರೆಸಿದಂತೆ ಜೈನ ಮತವು ಜಿನಬಿಂಬಗಳನ್ನು ಸಪರಿವಾರವಾಗಿ ಯಕ್ಷ ಯಕ್ಷಿಯರನ್ನು ಚಾಮರಧಾರಿಗಳನ್ನು ಚಿತ್ರಿಸಲು ಹೋಗಿ ರೂಪಿಸಿಕೊಂಡ ವ್ಯವಸ್ಥೆಯು ಇದಾಗಿರಬಹುದು. 10ನೇ ಶತಮಾನಕ್ಕೆ ಮೊದಲು ಜಿನ ಶಿಲ್ಪಗಳೊಂದಿಗೆ ದೇವೇಂದ್ರ ಸೌಧಮೇಂದ್ರರನ್ನು ಚಾಧುರಧಾರಿಯನ್ನಾಗಿ ಜಿನನ ಪಕ್ಕದಲ್ಲಿ ಬಿಡಿಸುತ್ತಿದ್ದುದು ಗಮನಾರ್ಹ. ಆದರೆ ಕ್ರಿ.ಶ 9ನೇ ಶತಮಾನದಲ್ಲಿ ಯಕ್ಷ ಆರಾಧನೆಯು ಪ್ರಚಲಿತವಾದುದ್ದರ ಫಲವಾಗಿ ನಂತರದ ಕಾಲದಲ್ಲಿ ಪದ್ಮಾವತಿ, ಜ್ವಾಲಾಮಾಲಿನಿ, ಸಿದ್ದಾಯಿಕೆ, ಚಕ್ರೇಶ್ವರಿ, ಮಹಾಕಾಳೀ ಮೊದಲಾದ ಯಕ್ಷಿಯರ ಬಿಡಿ ಶಿಲ್ಪಗಳನ್ನು ಕಾಣಬಹುದು. ಸಂಪೂರ್ಣವಾಗಿ 24 ತೀರ್ಥಂಕರರಿಗೆ ನಿರ್ದಿಷ್ಟವಾದ ಯಕ್ಷ ಯಕ್ಷಿಯರ ಕಲ್ಪನೆಯು 12ನೇ ಶತಮಾನದಲ್ಲಿ ಲಭ್ಯವಾಗಿದ್ದು ಈ ಶಿಲ್ಪಗಳಿಗೆ ಸಿಕ್ಕ ಒಂದು ಅಪೂರ್ವ ಅವಸಾನವಾಗಿದೆ. ಈ ಕಾಲದಲ್ಲಿ ಚಾಮರಧಾರಿಯಾಗಿ ತೋರಣದ ಮೇಲ್ಭಾಗದಲ್ಲಿದ್ದ ಸರ್ವಾಭರಣ ಸಂಯುಕ್ತರಾದ ಯಕ್ಕಷರನ್ನು ದ್ವಾರಪಾಲಕರಂತೆ ಕೆಳಗೆ ಬಿಡಿಸಲು ಯತ್ನಿಸಿದ್ದು ಜಿನ ಸೇವಕರೆಂಬುದನ್ನು ಸ್ಪಷ್ಟಪಡಿಸಲು ರೂಢಿಗೆ ಬಂದಿತು. ಹೀಗಿದ್ದರೂ ಎಲ್ಲಾ ಶಿಲ್ಪಗಳಿಗೂ ಈ ಯಕ್ಕಷ ಯಕ್ಷಿಯರ ಲಕ್ಷಣಗಳು ನಿರ್ಧಿಷ್ಠವಾಗಿ ತಿಳಿದಿರದೆಯೋ ಅಥವಾ ಸ್ವಭಾವದ ಕಾರಣದಿಂದಲೋ ಅಥವಾ ಶಿಲ್ಪಿ ತನ್ನ ಸ್ವ ಇಚ್ಚೆಗನುಗುಣವಾಗಿಯೋ ಎಲ್ಲಾ ತೀರ್ಥಂಕರರೊಂದಿಗೆ ಯಕ್ಷ ಯಕ್ಷಿಯರನ್ನು ಶಾಸ್ತ್ರಾನ್ವಯವಾಗಿರುವಂತೆ ಬಿಡಿಸಲು ಸಾಧ್ಯವಾಗಿಲ್ಲ. ಕೆಲವು ಜನಪ್ರಿಯ ಯಕ್ಷ ಯಕ್ಷಿಯರನ್ನು ಮಾತ್ರ ಸ್ಪಷ್ಟವಾಗಿ ಗುರುತಿಸುವಂತೆ ಬಿಡಿಸಿದ್ದು ಸಾಮಾನ್ಯವಾಗಿ ಇದರ ಕೈಯಲ್ಲಿ ಬೀಜಪುರ,

ಕಡುಲ, ಅಭಯ, ವರದ ಇವುಗಳಲ್ಲಿ ಒಂದನ್ನು ಕಡ್ಡಾಯವಾಗಿ ಚಿತ್ರಿಸಿರುವಂತೆ ಕಾಣಬರುತ್ತದೆ. ಇಂತಹ ಬದಲಾವಣೆ ಶಿಲ್ಪಿಯ ಅಪೇಕ್ಷೆಯಂತಾಗಿದೆ ಎನ್ನಬಹುದು. ಆದರೆ 12ನೆ ಶತಮಾನದ ಸುಮಾರಿಗೆ ಸಾಹಿತ್ಯದಲ್ಲೂ ಹಲವು ಯಕ್ಷ ಯಕ್ಷಿಯರ ಉಲ್ಲೇಖಗಳಿರುವುದನ್ನು ಕಂಡಾಗ ಯಕ್ಷ ಯಕ್ಷಿಯರ ಕಲ್ಪನೆಯು ಸಮಾಜದಲ್ಲಿ ಸಾಕಷ್ಟು ಪ್ರಭಾವ ಬೀರಿದ್ದು ಆ ಕಾರಣವಾಗಿ ಅದರ ಮಹತ್ವವನ್ನು ಸೂಚಿಸಲೆಂದೇ ಶಿಲ್ಪಿಗಳು ಜಿನನೊಂದಿಗೆ ನಿತ್ಯ ಪೂಜೆಗೊಳ್ಳುವಂತೆ ಇವನಿಗೂ ಸಿಂಹ ಪೀಠದಲ್ಲಿ ಸ್ಥಳಾವಕಾಶ ಮಾಡಿಕೊಟ್ಟಿರುವರೆಂದು ತಿಳಿಯಬಹುದಾಗಿದೆ.

**ಜೈನಮಠ**

ಭಂಡಾರಿ ಬಸದಿಯ ಉತ್ತರ ಮತ್ತು ಪೂರ್ವಕ್ಕೆ ಈ ಮಠವಿದೆ. ಬಹುಶಃ ಈ ಮಠವು ಸುಮಾರು 12ನೆಯ ಶತಮಾನದಲ್ಲಿ ಆರಂಭವಾಗಿರಬೇಕು. ಆದರೆ ಈಗಿನ ಕಟ್ಟಡವು ಸುಮಾರು 300 ವರ್ಷಗಳಾಗಿರುವ ಪುರಾತನವಾದುದಲ್ಲ. ಇಲ್ಲಿಯ ಭಿತ್ತಿಚಿತ್ರಗಳು ಲೋಹ ನಿಗ್ರಹಗಳು ತುಂಬಾ ಮಹತ್ವದ ಐತಿಹಾಸಿಕ ಕುರುಹುಗಳಾಗಿವೆ. ಮಧ್ಯದ ಅಂಗಳದ ಮಾಪಿನ ಮೇಲಿರುವ ಗಾರೆಯ ಮೂರ್ತಿಗಳು ಸುಂದರವಾಗಿವೆ. ಆದರೆ ಮೇಲಿಂದ ಮೇಲೆ ಸುಣ್ಣ ಬಳಿದುದರಿಂದ ಅವುಗಳ ಮೂಲ ರೂಪಕ್ಕೆ ಧಕ್ಕೆಯುಂಟಾಗಿದೆ. ಮಠದ ಕಂಬಗಳ ಪೀಠದಲ್ಲಿನ ಹೆಚ್ಚು ಚಿತ್ರಗಳು ವಿಜಯನಗರ ನಾಯಕ ಶೈಲಿಯನ್ನು ಜ್ಞಾಪಕಕ್ಕೆ ತರುತ್ತವೆ. ಬಹುಶಃ 17–18ನೆಯ ಶತಮಾನದಲ್ಲಿ ಈ ಭಿತ್ತಿ ಚಿತ್ರಗಳನ್ನು ಬಿಡಿಸಿರಬಹುದು. ಕ್ರಿ.ಶ 1730ರಲ್ಲಿ ಬರೆದ ಕಾವ್ಯದಲ್ಲಿ ಅನಂತ ಕವಿಯು ಈ ಚಿತ್ರಗಳನ್ನು ಉಲ್ಲೇಖಿಸಲಾಗಿದೆ. ಪಾರ್ಶ್ವನಾಥನ ಸಮವಸರಣ, ಭರತನ ಜೀವನ ನಾಗಕುಮಾರನ ಕಥೆಯಲ್ಲಿದೆ. ಕೃಷ್ಣದೇವ ಒಡೆಯರ ದಸರೆಯ ದರ್ಬಾರನ್ನು ಇಲ್ಲಿ ಚಿತ್ರಿಸಲಾಗಿದೆ. ಬಾಗಿಲವಾಡದ ಮೇಲಿರುವ ಜಿನರ ಯಕ್ಷ ಯಕ್ಷಿಯರ ಚಿತ್ರಗಳು ಮೂರ್ತಿ ಲಕ್ಷಣದಲ್ಲಿ ಆಸಕ್ತಿ ಉಳ್ಳವರ ಗಮನವನ್ನು ವಿಶೇಷವಾಗಿ ಸೆಳೆಯುತ್ತದೆ. ಬಹುಶಃ ಎರಡು ಹಂತಗಳಲ್ಲಿ ಬಿಡಿಸಿರುವ ಈ ಚಿತ್ರಗಳು ದಕ್ಷಿಣ ಭಾರತದಲ್ಲಿ ಅಪರೂಪವಾಗಿರುವ ಜೈನ ಚಿತ್ರಗಳಿಗೆ ಉತ್ತಮ ನಿದರ್ಶನಗಳಾಗಿವೆ. ಶೈಲಿಯಲ್ಲಿ ಇವುಗಳಿಗೂ ಹಂಪಿ ಕೋಷ್ಠಗಳ ನಡುವೆ ಲತಾಪಂಜರಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ಮದನಿಕೆಯರ ಬಿಂಬಗಳನ್ನು, ನರ್ತಕಿಯರನ್ನು ಸಹ ಕಡೆಯಲಾಗಿದೆ. ಈ ನಡುವೆ ಅಲ್ಲಲ್ಲಿ ಯಕ್ಷ ಯಕ್ಷಿಯರ ಬಿಂಬಗಳನ್ನು ಕೆತ್ತಿದ್ದು ಇಲ್ಲಿ ಧರಣೇಂದ್ರ ಸರ್ವಾಹ್ಣ ಗೋಮುಖ ಮೊದಲಾದ ಯಕ್ಷರನ್ನು ಚಕ್ರೇಶ್ವರಿ, ಸಿದ್ದಾಯಿಕಾ, ಪದ್ಮಾವತಿ, ಕೂಷ್ಮಾಂಡಿನಿ ಮೊದಲಾದ ಯಕ್ಷಿಯರನ್ನು ಕಡೆಯಲಾಗಿದೆ. ಜೈನಮತದ ಪುರಾಣ ಪುರುಷರಾದ ಬಲರಾಮ, ಕೃಷ್ಣ, ರತಿ, ಮನ್ಮಥರ, ಬಿಂಬಗಳನ್ನು ಇಲ್ಲಿ ಬಿಡಿಸಿರುವುದು ಕಂಡುಬರುತ್ತದೆ. ಜೈನ ಮತದ ಈ ಶಿಲ್ಪಗಳಲ್ಲದೆ ಜಿನ ಸೇವೆಯಲ್ಲಿ

ತೊಡಗಿರುವ ನಾನಾ ಭಂಗೀಗಳಲ್ಲಿರುವ ಗಂಧರ್ವ ಸ್ತ್ರೀಯರನ್ನು ಸಹ ಕಡೆಯಲಾಗಿರುತ್ತದೆ. ಅವನಲ್ಲಿ ಶುಕ ಭಾಷಿಣಿ, ನಾಟ್ಯರಾಣಿ, ವಿಷಕನ್ಯೆ, ತಾಳವಾದಕಿ, ಬುರ್ ಬುರ್ ಲೇಪಾಕ್ಷಿಯ ಚಿತ್ರಗಳಿಗೂ ಇರುವ ಸಾಮ್ಯ ಗಮನಾರ್ಹವಾದುದು.

**ಜಿನನಾಥಪುರದ ಶಾಂತೀಶ್ವರ ಬಸದಿ (ಶಾಂತಿನಾಥ ಬಸದಿ)**

ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಉತ್ತರಕ್ಕೆ ಇರುವ ಚಿಕ್ಕ ಗ್ರಾಮವೇ ಜಿನನಾಥಪುರ ಇರುವ ಬ್ರಹ್ಮದೇವಾಲಯದಿಂದ ಬೆಟ್ಟವನ್ನು ಇಳಿದು ಇಲ್ಲವೆ ಅಕ್ಕನ ಬಸದಿಯ ದಾರಿಯಲ್ಲಿ ಬೆಟ್ಟ ಬಳಸಿ ಹಳ್ಳಿಯನ್ನು ತಲುಪಬಹುದು. ಕಗ್ಗಲ್ಲು ತಗ್ಗು ದಿನ್ನೆಯೊಂದೊಡಗೂಡಿದ ಆದರೆ ಅದ್ಭುತ ಬಂಡೆಗಲ್ಲುಗಳ ತಾವರೆಯ ಕೊಳಗಳನ್ನು ಬಳಸಿ ಸಾಗುವ ಅನುಭವ ಬೇಗ ಮರೆಯುವಂತಹುದಲ್ಲ.

ಜಿನನಾಥಪುರದ ಶಾಂತೀಶ್ವರ ಬಸದಿಯ ಹೊರ ಭಿತ್ತಿಯ ಉಬ್ಬು ಶಿಲ್ಪಗಳನ್ನು ಹೊಂದಿರುವ ಏಕೈಕ ಬಸದಿಯಾಗಿದೆ. (ಚಿತ್ರ ಸಂಖ್ಯೆ-85)ಈ ಭಿತ್ತಿಯಲ್ಲಿ ಹಲವು ಸ್ತಂಭಕೋಷ್ಠಗಳಿದ್ದು ಇಲ್ಲಿ ನೇಮಿನಾಥ, ಪಾರ್ಶ್ವನಾಥ, ಆದಿನಾಥ, ಶಾಂತಿನಾಥ ಮುಂತಾದ ಜಿನಬಿಂಬಗಳನ್ನು ಕಡೆದಿರುವುದು ಕಂಡುಬರುತ್ತದೆ. ವಾದಕೆ, ಚಾಮರದ್ರಾಕ್ಷಿಣಿಯರ ಶಿಲ್ಪಗಳು ರಮ್ಯವಾಗಿವೆ. ವಿಶಿಷ್ಟವಾದ ಜಾನಪದ ನೃತ್ಯ ಚಾವಟಿ ನೃತ್ಯದ ಭಂಗಿಯ ಶಿಲ್ಪವೊಂದು ಇಲ್ಲಿದೆ. ಒಂದೆರಡು ಮಿಥುನ ಶಿಲ್ಪಗಳು ಈ ಪಟ್ಟಿಕೆಯಲ್ಲಿ ಸೇರಿರುವುದಲ್ಲದೆ ಸ್ಪಷ್ಟವಾಗಿ ಗುರುತಿಸಲಾಗದ ಯಕ್ಷಿಯರ ಎರಡು ಶಿಲ್ಪಗಳು ಕುತೂಹಲಕಾರಿಯಾಗಿವೆ. ಇದರಲ್ಲಿ ಒಂದು ಶಿಲ್ಪವೆಂದು (ಕ್ಷೇತ್ರಪಾಲ) ಎಂದು ಗುರುತಿಸಿದ್ದಾರೆ. ಎಸ್ ಶೆಟ್ಟರ್‌ರವರು ಯಕ್ಷಿವಜ್ರಶೃಂಖಲಾ ಎಂದು ಕಡೆದಿರುತ್ತಾರೆ. ಜಿನನಾಥಪುರದ ಶಾಂತೀಶ್ವರ ಬಸದಿಯ ಗರ್ಭಗೃಹದ ದ್ವಾರಬಂಧವು ಕೂಡ ಸ್ತಂಭದಿಂದ ಕೂಡಿದ್ದು ಅನೇಕ ಶಾಖೆಗಳನ್ನು ಹೊಂದಿದೆ. ಈ ದ್ವಾರಬಂಧವು ಉತ್ತರಾಂಗದ ಪಟ್ಟಿಕೆಯ ಮೇಲೆ ನಾಲ್ಕು ಆಸೀನ ಜಿನಬಿಂಬಗಳಿವೆ (ಚಿತ್ರ ಸಂಖ್ಯೆ-86)ಪಟ್ಟಿಕೆಯ ಮಧ್ಯ ಭಾಗದಲ್ಲಿ ಅಧೋಕು ಮುದಗಳಿದ್ದು ಇವುಗಳ ನಡುವೆ ಇರುವ ಲಲಾಟ ಫಲಕದಲ್ಲಿ ಅಸೀನ ಜಿನ ಬಿಂಬವಿದೆ ಈ ದ್ವಾರಬಂಧದ ಕೆಳಭಾಗದಲ್ಲಿ ದ್ವಾರಪಾಲಕರ ಬದಲು ಧರಣೇಂದ್ರ ಮತ್ತು ಪದ್ಮಾವತಿಯರ ಶಿಲ್ಪಗಳಿದ್ದು ಇವರಿಗೆ ಚಾಮರಧಾರಿಯರೂ ಇದ್ದಾರೆ. ಇಂತಹದೇ ಹಲವು ಶಾಖೆಗಳುಳ್ಳ ಮತ್ತು ದ್ವಾರಪಾಲಕರಾಗಿ ಧರಣೇಂದ್ರ ಪದ್ಮಾವತಿಯರನ್ನು ಪರಿವಾರದೊಂದಿಗೆ ಕೆತ್ತಿರುವ ಸುಂದರವಾದ ದ್ವಾರಬಂಧವನ್ನು ಕಾಣಬಹುದಾಗಿದೆ.

ಜಿನನಾಥಪುರದ ಭಿತ್ತಿಯು ಭದ್ರ, ಕರ್ಣಗಳನ್ನು ಹೊಂದಿದ್ದು, ಇಲ್ಲಿಯ ಭಿತ್ತಿ ಶಿಲ್ಪಗಳ ಅಂದವನ್ನು ಹೆಚ್ಚಿಸಿದೆ. ಭಿತ್ತಿಯ ಭಾಗದಲ್ಲಿ ಜೈನ ತೀರ್ಥಂಕರರ ಉಪದೇವತೆಗಳ ಬಿಂಬಗಳ

ಮೇಲ್ಭಾಗದಲ್ಲಿ ವಿವಿಧ ಮಾದರಿಯ ಶಿಖರಗಳನ್ನು ಬಿಡಿಸಿದ್ದರೆ ಸಾಲಭಂಜಿಕೆಯರ ಶಿಲ್ಪಗಳನ್ನು ಬೇರ್ಪಡಿಸಲು ಲತಾಪಂಜರಗಳನ್ನು ಕೆತ್ತಿದ್ದಾರೆ. ಹೀಗೆ ಸಾಲು ಶಿಲ್ಪಗಳಿಂದ ಅಲಂಕಾರಗೊಂಡಿರುವ ಭಿತ್ತಿಯುಳ್ಳ ಹಾಸನ ಜಿಲ್ಲೆಯ ಏಕೈಕ ದೇವಾಲಯವಾಗಿದೆ ಎನ್ನಬಹುದು. ಜಿನನಾಥಪುರದ ಶಾಂತಿನಾಥ ಬಸದಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಹೊಯ್ಸಳರ ವಾಸ್ತು ಶಿಲ್ಪವನ್ನು ಮರೆಸುತ್ತಾ ಸರ್ವಾಂಗ ಸುಂದರವಾಗಿ ನಿರ್ಮಿಸಿರುವ ಬಸದಿ ಇದನ್ನು ಕಳಚೂರ್ಯರ ಮಂತ್ರಿಯು ಹೊಯ್ಸಳ ದೊರ ವೀರಬಲ್ಲಾಳ ದೇವನ ಪ್ರಧಾನ ದಂಡನಾಯಕನಾಗಿದ್ದ ದೇಚಿಮಯ್ಯನು ಸುಮಾರು ಕ್ರಿ.ಶ 1200ರಲ್ಲಿ ಕಟ್ಟಿಸಿದನೆಂದು ತಿಳಿದುಬರುವುದಲ್ಲದೆ ಇದನ್ನು ಸಾಗರಣಾಂದಿ ಸಿದ್ಧಾಂತ ದೇವರಿಗೆ ದಾನ ನೀಡಿದ್ದನು ಎಂದು ತಿಳಿದು ಬರುತ್ತದೆ.

ಶಾಂತಿನಾಥ ಬಸದಿಯು ಎತ್ತರವಾದ ವೇದಿಕೆಯ ಮೇಲೆ ನಕ್ಷತ್ರಾಕಾರದ ಅಧಿಷ್ಠಾನದೊಂದಿಗೆ ರಚಿಸಲಾಗಿದೆ. ಹೊಯ್ಸಳ ಶೈಲಿಯಂತೆ ಇಲ್ಲಿ ವೇದಿಕೆಯೇ ಪ್ರದಕ್ಷಿಣಾಪಥವಾಗಿದೆ. ಬಸದಿಯಲ್ಲಿ ಅಧೀಷ್ಠಾನದ ಭಾಗಗಳಾದ ಜಗತಿ ಇದೆ. ಅಧಿಷ್ಠಾನ ದ್ರಾವಿಡ ಶೈಲಿಯದ್ದಾಗಿದ್ದು ಖರ್ಷಿಲಾ, ಭಿಟ್, ಖುರಸ್, ಪದ್ಮಪತ್ರ, ಕರ್ಣಿಕಾ, ಕಂಟಕ ಮತ್ತು ಕಪೋತಗಳನ್ನು ಹೊಂದಿದೆ. (ಚಿತ್ರ ಸಂಖ್ಯೆ-87)ಅಧಿಷ್ಠಾನದ ಮೇಲಿರುವ ಭಿತ್ತಿಯು ಭದ್ರಕಣಗಳಿಂದ ಕೂಡಿದ್ದು ಭಿತ್ತಿ ಶಿಲ್ಪಗಳ ಅಂದವನ್ನು ಹೆಚ್ಚಿಸಿದೆ. ಭಿತ್ತಿಯಲ್ಲಿ ಜೈನ ಸಮಯದ ತೀರ್ಥಂಕರರ ಮತ್ತು ಉಪದೇವತೆಗಳಾದ ಯಕ್ಷ ಯಕ್ಷಿಯರ ಶಿಲ್ಪಗಳಿವೆ. ಇದಲ್ಲದೆ ಕೆಲವು ವಾದ್ಯಗಾರರ, ನರ್ತಕರ, ಶಿಲ್ಪಗಳನ್ನು ಕೆತ್ತಲಾಗಿದೆ. ದೇವತೆಗಳ ಶಿಲ್ಪಗಳಿದ್ದಾಗ ಮೇಲ್ಭಾಗದಲ್ಲಿ ಶಿಖರಗಳನ್ನು ಬಿಡಿಸಿ ಕೋಷ್ಠ ರಚನೆ ಮಾಡಿದ್ದರೆ ಸಾಮಾನ್ಯರ ಶಿಲ್ಪಗಳಿರುವಲ್ಲಿ ಸುಂದರವಾದ ಲತಾಪಂಜರಗಳನ್ನು ಕೆತ್ತಲಾಗಿದೆ. ಹೀಗೆ ಈ ಬಸದಿಯು ನೋಡುಗರನ್ನು ತಣಿಸುತ್ತಾ ಭಿತ್ತಿ ಶಿಲ್ಪಗಳ ಸೌಂದರ್ಯವನ್ನು ಹೊಂದಿರುವ ಬಸದಿಯಾಗಿದೆ.

ಭಿತ್ತಿಯ ಮೇಲಿನ ಪ್ರಸ್ತರದ ಭಾಗವು ಕಪೋತದವರೆಗೆ ಮಾತ್ರ ಉಳಿದಿದೆ. ಶಿಖರದ ಭಾಗವು ನಶಿಸಿ ಹೋಗಿದೆ. ಗರ್ಭಗೃಹದ ಒಳಭಾಗವು ಚೌಕಾಕಾರವಾಗಿದ್ದು ನಡುವೆ ಆಸೀನ ಜಿನಬಿಂಬವಿದೆ. ಗರ್ಭಗೃಹದ ಪಿತಾವವು ಎರಡು ಹಂತಗಳಿಂದಾಗಿದೆ. ಮೊದಲನೆ ಪಟ್ಟಿಕೆಯಲ್ಲಿ ಅಷ್ಠದಿಕ್ಪಾಲಕರನು ಸೂಚಿಸುವಂತೆ ಅದರ ವಾಹನಗಳನ್ನು ಬಿಡಿಸಿದೆ. ಎರಡನೇ ಹಂತದಲ್ಲಿ ಎರಡು ಪಟ್ಟಿಕೆಗಳಲ್ಲಿ ನರ್ತಿಸುತಿರುವ ವಾದ್ಯಗಳನ್ನು ನುಡಿಸುತ್ತಿರುವ ಗಂಧರ್ವರನ್ನು ಬಿಡಿಸಿದೆ. ನಡುವೆ ಇರುವ ಪಟ್ಟಿಕೆಗಳಲ್ಲಿ ಸಿಂಹಪೀಠದ ಮೇಲೆ ಆಸೀನ ಬಿಂಬವನ್ನು ಕೆತ್ತಲಾಗಿದೆ. ಹೀಗೆ ಗರ್ಭಗೃಹದಲ್ಲಿ ಸುಂದರವಾದ ಪಿತಾನವಿರುವುದು ಈ ಬಸದಿಯ ವಿಶೇಷವಾಗಿದೆ. ಇಲ್ಲಿ

ಮುಚ್ಚಿದ ಅಂತರಾಳವಿದ. ಅಂತರಾಳದ ಭಿತ್ತಿಯಲ್ಲಿ ಹೊಯ್ಸಳ ಶೈಲಿಯ ಭಿತ್ತಿ ಸ್ತಂಭಗಳಿವೆ. ಮುಂಭಾಗದ ಭಿತ್ತಿಯು ಜಾಲಾಂಧ್ರದಿಂದ ಕೂಡಿದೆ. ಅಂತರಾಳದ ದ್ವಾರಬಂಧದಲ್ಲಿ ನನಾ ಶಾಖೆಗಳಿದ್ದು ದ್ವಾರ ಪಾಲಕರನ್ನು ಲಲಾಟದಲ್ಲಿ ಆಸೀನ ಜಿನಬಿಂಬವನ್ನು ಕೆತ್ತಲಾಗಿದೆ. ಈ ಬಸದಿಯ ನವರಂಗವು ಬಸದಿಯ ಸೌಂದರ್ಯವನ್ನು ಇಮ್ಮಡಿಗೊಳಿಸಿದೆ. ನವರಂಗದ ಭಿತ್ತಿಯಲ್ಲಿ ಎರಡು ಕಡೆ ಸುಂದರವಾದ ಚಿಕ್ಕದೇವಾಲಯದಂತಿರುವ ದೇವಕೋಷ್ಠಕಗಳನ್ನು ರಚಿಸಲಾಗಿದೆ. 16 ಕಂಬಗಳಿಂದಾಗಿರುವ ನವರಂಗದ 12 ಕಂಬಗಳು ಭಿತ್ತಿಯಲ್ಲಿ ಸೇರಿದ್ದು 4 ಪ್ರಧಾನ ಕಂಬಗಳು ರಂಗಮಂಟಪದಲ್ಲಿ ನಿರ್ಮಿಸಿದೆ. ಈ ಕಂಬಗಳು ತಿರುಗಣಿಯಿಂದ ಮಾಡಿದ ಹೆಚ್ಚು ಮೆರುಗುಳ್ಳ ಕಂಬಗಳಾಗಿದ್ದು ಇದರ ಮೇಲಿನ ಕುಸುರಿ ಕೆತ್ತನೆಯ ಫಲವಾಗಿ ಸುಂದರ ಸ್ತಂಭಗಳಾಗಿದೆ. ಬಸದಿಗೆ ಮುಖಮಂಟಪವಿಲ್ಲ ಅಥವಾ ನಶಿಸಿರಬಹುದು. ಈ ಬಸದಿಯಲ್ಲಿ ಪೂಜಾಕಾರ್ಯಗಳು ವೈಭವದಿಂದ ನಡೆಯುತ್ತಿತ್ತೆಂದು ಇಲ್ಲಿಯ ಶಾಸನವೊಂದು ತಿಳಿಸುತ್ತದೆ. (ಚಿತ್ರ ಸಂಖ್ಯೆ-88)

ಜಿನನಾಥಪುರದ ಶಾಂತಿನಾಥ ಬಿಂಬವು ಹೊಯ್ಸಳರ ಅನುಪಮ ಕೊಡುಗೆಗಳಲ್ಲಿ ಒಂದಾಗಿದೆ. ಅಗಲವಾದ ಬಹುಕೋನಗಳುಳ್ಳ ಸಿಂಹಪೀಠದ ಮೇಲೆ ಪರ್ಯಂಕಾಸನದಲ್ಲಿರುವ ಶಾಂತಿನಾಥನ ಶಿಲ್ಪವಿದೆ. ಜಿನನ ಮುಖದಲ್ಲಿ ಬೆಳಗುತ್ತಿರುವ ಸ್ನಿಗ್ಧ ತೇಜಸ್ಸು, ಗಾಂಭೀರ್ಯ, ಶಾಂತವದನ ನೋಡುಗರಲ್ಲಿ ಆದರವನ್ನು ಹುಟ್ಟಿಸುವಂತಿದೆ. ಸಪ್ರಮಾಣಬದ್ಧವಾದ ಜಿನನು ದ್ಯಾನನಿರತನಾದಂತೆ ಯೋಗಿಕ ಭಂಗಿಯಲ್ಲಿ ಕುಳಿತ್ತಿದ್ದಾನೆ. ಶಿರದಲ್ಲಿ ಗುಂಗುರು ಕೂದಲನ್ನು ಬಿಡಿಸಿದೆ. ಶಿರದ ಹಿಂದೆ ಶಾಂತಿಯುಕ್ತವಾದ ಶಿರಶ್ಚಕ್ರವಿದೆ. ಶಿರದ ಮೇಲ್ಭಾಗದಲ್ಲಿ ಸುಂದರವಾದ ಮಣಿಮಾಲೆಯಿಂದ ಕೂಡಿದ ಮುಕ್ಕೊಡೆ ಇದೆ. ಮೇಲಿನ ಕೊಡೆಯು ಕಳಸಯುಕ್ತವಾಗಿದೆ. ಸಿಂಹಪೀಠದ ಮೇಲೆ ಹೊಯ್ಸಳರ ಶೈಲಿಯ ಸುಂದರವಾದ ಮಕರ ತೋರಣವಿದೆ. ಮಕರಗಳ ಮೇಲೆ ಯಕ್ಷರಿದ್ದಾರೆ. ಈ ತೋರಣವನ್ನು ಆಧರಿಸಿರುವಂತೆ ಜಿನನ ಇಕ್ಕೆಲದಲ್ಲಿ ಸರ್ವಾಭರಣ ಸಂಯುಕ್ತರಾದ ಚಾಮರಧಾರಿಗಳನ್ನು ಬಿಡಿಸಿದೆ. ಇವನ ಆಭರಣಗಳ ವಿನ್ಯಾಸ ಚಾಮರ ಮತ್ತು ಅದರ ಹಿಡಿಕೆ ಅವರ ಮತ್ತೊಂದು ಕೈಯಲ್ಲಿರುವ ಬೀಜಪೂರದ ಮಾದರಿ ಎಲ್ಲದರಲ್ಲೂ ಹೊಯ್ಸಳ ಶೈಲಿಯ ವೈಶಿಷ್ಟ್ಯವಾದ ನವಿರಾದ ಕೆತ್ತನೆಯನ್ನು ಕಾಣಬಹುದು. ಸುಂದರವಾದ ಪ್ರಭಾವಳಿ ನಡುವೆ ಈ ಜಿನಬಿಂಬ ಅತ್ಯಂತ ಆಕರ್ಷಣೀಯವಾಗಿದೆ.

ಈ ಜಿನನಾಥಪುರವು ಶ್ರವಣಬೆಳಗೋಳಕ್ಕೆ ಸೇರಿದ ಒಂದು ಜೈನ ಅಗ್ರಹಾರವಾಗಿತ್ತು ಈ ಬಸದಿಯಲ್ಲಿದ್ದ ಸಾಗರಣ ವಿಭಾಟಾರಕರಿಗೆ ಸಾವಿರ ಗದ್ಯಾಣ ದಾನ ನೀಡಿದ್ದನ್ನು ಶಾಸನ ತಿಳಿಸಿದೆ. ಬಸದಿಯ ಮಹತ್ವ ತಿಳಿಸಿದರೆ ಇಲ್ಲಿಯ ಮತ್ತೊಂದು ಶಾಸನವು ಅರಸೀಕೆರೆಯ

ಲಕ್ಷ್ಮೀಸಟ್ಟ, ಬೊಮ್ಮಸೆಟ್ಟಿಯರು ಕಂಚಿನ ತೋರಣ 15 ಕಂಚಿನಟ, ಕಂಚಿನ ಹೂವು ಮತ್ತು 7 ತಾಮ್ರದ ಹೂವನ್ನು ಮತ್ತು ಒಂದು ಕನ್ನಡಿಯನ್ನು ದಾನ ನೀಡಿದ್ದನ್ನು ತಿಳಿಸಿದೆ.

**ಜಿನನಾಥಪುರದ ಅರಗಲ್ಲು ಬಸದಿ**

ಗ್ರಾಮದ ಪ್ರವೇಶ ಭಾಗದಲ್ಲಿರುವ ಈ ಬಸದಿಯನ್ನು ಗಂಗರಾಜನ ಸಹೋದರ ಬರ್ಮನ ಪುತ್ರ ಹಿರಿಏಚಿಮಯ್ಯನು ಕ್ರಿ.ಶ. 12ನೆಯ ಶತಮಾನದಲ್ಲಿ ನಿರ್ಮಿಸಿದ್ದಾನೆ. ಅರೆಗಲ್ಲುಗಳ ಮೇಲೆ ನಿರ್ಮಾಣವಾಗಿರುವುದರಿಂದ ಅರಗಲ್ಲುಬಸದಿ ಎಂದು ಕರೆಯಲಾಗಿದೆ. ಈಗ ಇದು ಇಟ್ಟಿಗೆ ಮತ್ತು ಗಾರೆಯಿಂದ ಬಳಸಲಾಗಿದೆ. ಗರ್ಭಗೃಹದಲ್ಲಿ ಕ್ರಿ.ಶ. 1889ರಲ್ಲಿ ಭುಜಬಲಯ್ಯ ಎಂಬ ಶ್ರಾವಕನು ಪ್ರತಿಷ್ಠಾಪಿಸಿದಿ ಪಾರ್ಶ್ವನಾಥ ತೀರ್ಥಂಕರನ ಪದ್ಮಾಸನದಲ್ಲಿ ಕುಳಿತ ಭಂಗಿಯ ಶಿಲ್ಪವಿದೆ. (ಚಿತ್ರ ಸಂಖ್ಯೆ–89, 90)

ನವರಂಗದಲ್ಲಿರುವ ಕಂಬಗಳು ವಿಜಯನಗರೋತ್ತರ ಶೈಲಿಯಲ್ಲಿವೆ. (ಚಿತ್ರ ಸಂಖ್ಯೆ–91) ಇದು ಜಿನನಾಥಪುರದ ಅತೀ ಪ್ರಾಚೀನ ಬಸದಿಯೆಂಬ ಕೀರ್ತಿಗೆ ಪಾತ್ರವಾಗಿದೆ. ಕ್ರಿ.ಶ. 1889ರ ನಂತರ ಕಾಲದಲ್ಲಿ ಜೀರ್ಣೋದ್ಧಾರವಾಗುತ್ತಾ ಬಂದಿದೆ. (ಚಿತ್ರ ಸಂಖ್ಯೆ–92)

**ಹಳೆಯ ಬೆಳಗೊಳ**

ಹಳೆಯ ಬೆಳಗೊಳವು ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲೂಕಿನಲ್ಲಿದೆ. ಶ್ರವಣಬೆಳಗೊಳದ ಸಮೀಪದಲ್ಲಿ ಅನೇಕ ಬೆಳಗೊಳಗಳಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ಗುರುತಿಸಲು ಅವುಗಳಿಗೆ ಹಳೆಯ ಕೋಡಿ ಶ್ರವಣ ಮುಂತಾದ ಹೆಸರುಗಳನ್ನು ಸೇರಿಸಲಾಗಿದೆ, ಹಳೆಯ ಬೆಳಗೊಳದಲ್ಲಿ ದುಸ್ಥಿತಿಯಲ್ಲಿ ಜೈನ ಬಸದಿ ಇದೆ. ಇದು ಗರ್ಭಗೃಹ, ಶುಕನಾಸ ಮತ್ತು ನವರಂಗ ಅಲ್ಲದೆ ಮುಖಮಂಟಪವನ್ನು ಸಹ ಹೊಂದಿದೆ. ದೇವಾಲಯದ ಅಧಿಷ್ಠಾನವು ಕಪೋತ ಭದ್ರವನ್ನು ಹೊಂದಿದ್ದು ಅದರ ಮೇಲೆ ಪಾರಬಂಧ ಅಧಿಷ್ಠಾನವಿದೆ. ಕಪೋತ ಭದ್ರದಲ್ಲಿ ಮೂಲೆಗಳಲ್ಲಿ ಆನೆಗಳು ದೇವಾಲಯವನ್ನು ಹೊತ್ತಿರುವಂತೆ ಬಿಡಿಸಿದೆ. ತ್ಯಾಗದ ಬ್ರಹ್ಮ ದೇವರ ಕಂಬದ ಪೀಠ, ಮಾರಸಿಂಹನ ಕೂಗೆ ಬ್ರಹ್ಮದೇವರ ಕಂಬ ಮುಂತಾದವುಗಳಲ್ಲಿ ಇಂತಹ ಅಲಂಕಾರವನ್ನು ಕಾಣಬಹುದಾಗಿದೆ. ಕಪೋತದಲ್ಲಿ ಉಬ್ಬು ಕೆತ್ತನೆಯುಳ್ಳ ನಾಸಿಗಳನ್ನು ಬಿಡಿಸಿದೆ, ಜಗತಿ, ತ್ರಿಪಟ್ಟ ಕುಮುದಗಳ ಪಟ್ಟಿಯನ್ನು ಪಡೆದಿದೆ. ಭಿತ್ತಿಯಲ್ಲಿ ಬ್ರಹ್ಮಕಾಂತ ಉಬ್ಬು ಕಂಬಗಳಿದ್ದು ಕಂಬದ ಭಾಗದಲ್ಲಿ ಅಲಂಕಾರವಿದೆ. ದೇವಕೋಷ್ಠಗಳಲ್ಲಿ ಅರೆ ಕಂಬಗಳಿದ್ದು ಕಂಭದ ಭಾಗದಲ್ಲಿ ಅಲಂಕಾರವಿದೆ, ಅರೆ ಕಂಬಗಳ ಮೇಲೆ ಬಳ್ಳಿಗಳ ಅಲಂಕಾರವಿದೆ, ವಲ್ಲಭಿ ಭಾಗದಲ್ಲಿ ಹಂಸಮಾಲಾ ಇದೆ. ಕಪೋತದಲ್ಲಿ

ಕ್ಷುದ್ರನಾಸಿಗಳನ್ನು ಬಿಡಿಸಿದೆ, ಕಪೋತದ ಅಂಚಿನಲ್ಲಿ ಚಂದ್ರಮಂಡಲ ಅಲಂಕಾರವಿದೆ. ನಾಸಿಯ ಗೂಡುಗಳು ಆಳವಾಗಿದ್ದು ಬಳ್ಳಿಗಳ ಅಲಂಕಾರವನ್ನು ಹೊಂದಿದೆ, ಮೇಲೆ ವ್ಯಾಳಗಳ ಸಾಲಿದೆ. ಬಸದಿಯ ನವರಂಗದಲ್ಲಿ ರುದ್ರಕಾಂತ ರೀತಿಯ 16 ಮೂಲೆಯ ಕಂಬವಿದ್ದು ಮಧ್ಯೆ ಬಳ್ಳಿಗಳ ಅಲಂಕಾರವಿದೆ. ಅದರ ಮೇಲಿನ ಎಡೆಕಟ್ಟಿನ ಭಾಗದಲ್ಲಿಯೂ ಬಳ್ಳಿಯ ಕಟ್ಟದೆ ಕೊಡದ ಮೇಲೆ ಮುಚ್ಚಳವಿದ್ದು ಅದರ ಮೇಲೆ ಪದ್ಮಫಲಕವಿದೆ. ಸರಳ ಭೋಧಿಗೆ ಇದ್ದು ಅದರಲ್ಲಿ ಮಧ್ಯೆ ಪಟ್ಟಿ ಬಂದಿದೆ. ವೃತ್ತಾಕಾರದ ಸ್ತಂಭವು ಚಿಕ್ಕದಾಗಿರುವುದರಿಂದ ಇದರ ಎತ್ತರವನ್ನು ಸರಿಮಾಡಲು ಬೋಧಿಗೆಗೂ ಪದ್ಮಫಲಕಕ್ಕೆ ಮಧ್ಯೆ ಚೌಕಾಕಾರದ ಕಲ್ಲನ್ನು ನೀಡಿದೆ. ಈಗ ಗರ್ಭಗೃಹದಲ್ಲಿ ಮಾಧ ಶಿಲ್ಪವು ಇಲ್ಲ, ನವರಂಗದಲ್ಲಿ ಧರಣೇಂದ್ರನು ಅಷ್ಟದಿಕ್ಪಾಲಕರ ಸಮೇತವಿರುವ ಶಿಲ್ಪವನ್ನು ಬಿಡಿಸಿದೆ.

ಈ ಎಲ್ಲಾ ಬೆಳವಣಿಗೆಯನ್ನು ಗಮನಿಸಿದರೆ ಶ್ರವಣಬೆಳಗೊಳದ ಪರಿಸರದಲ್ಲಿ ಧಾರ್ಮಿಕ ವಾಸ್ತು ರಚನೆಗಳ ನಿರ್ಮಾಣದೊಂದಿಗೆ ಇವುಗಳ ಸಂಕೀರ್ಣದಲ್ಲಿ ಲೌಕಿಕ ವಾಸ್ತು ರಚನೆಗಳು ಬೆಳೆದುಬಂದಿವೆ. ಅವುಗಳಲ್ಲಿ ಸುತ್ತಾಲಯಗಳು, ಸ್ತಂಭಗಳು, ದೋಣೆಗಳು, ನಿಷಧಿಮಂಟಪಗಳು, ತೋರಣಗಳು, ದ್ವಾರವಾಡಗಳು, ಭವನಗಳೂ, ಮಠಗಳು ಮೊದಲಾದವುಗಳು ಸಮಕಾಲೀನ ವಾಸ್ತು ಕಲೆಯ ದೃಷ್ಟಿಯಿಂದ ಪ್ರಮುಖವಾಗಿದೆ.

**ವೀರಗಲ್ಲುಗಳು**

ಕರ್ನಾಟಕದ ಶಿಲಾ ಶಾಸನಗಳಲ್ಲಿ ಕಂಡುಬರುವಂತಹ ಮೂಲ ಸಾಮಾಗ್ರಿಗಳನ್ನು ಹಲವು ರೀತಿಯ ಹಿನ್ನೆಲೆಯಿಂದ ಶೋಧಿಸಿದ ಶ್ರೇಯಸ್ಸು ಖ್ಯಾತ ಸಂಶೋಧಕರಾದ ಎಂ. ಚಿದಾನಂದಮೂರ್ತಿರವರಿಗೆ ಸಲ್ಲುತ್ತದೆ. ಇವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವ ಕೆಲವು ವಿಚಾರಗಳನ್ನು ಇಲ್ಲಿ ತಿಳಿಸುವುದು ಔಚಿತ್ಯವೆಂದೆನಿಸುತ್ತದೆ. ರಾಜರು ಕಾಲದಿಂದ ಕಾಲಕ್ಕೆ ರಾಜಕೀಯವಾಗಿ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಮುಖವಾಗಿರುತ್ತದೆ. ಜನ ಸಾಮಾನ್ಯರು ಬಾಳಿ ಬದುಕಿದ ರೀತಿ, ಅವರುಗಳು ಅನುಸರಿಸಿದ ಧರ್ಮ, ಅವರು ಬೆಳೆಸಿದ ಕಲೆ ಅವರ ಜೀವನ ಸಮಸ್ಯೆಗಳು ಅವರ ಜೀವನ ಮೌಲ್ಯಗಳು ಇನ್ನಿತರ ವಿಚಾರವೇ ಆದೇಶದ ಮತ್ತು ಜನತೆಯ ಇತಿಹಾಸ ಎಂಬುದು ತಿಳಿದುಬರುತ್ತದೆ. [38]. ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು ನಿಧನವಾದ ವ್ಯಕ್ತಿಯನ್ನು ಸಮಾಧಿ ಅಥವಾ ಸಂಸ್ಕಾರ ಮಾಡಿದ ನಿರ್ಧಿಷ್ಟ ಸ್ಥಳದ ಗುರುತಿಗಾಗಿಯೇ ಮಡಿದವರ ಸ್ಮರಣಾರ್ಥವಾಗಿಯೇ ಕೆಲವಾರು ಸಂಕೇತಗಳನ್ನು ಗುರುತುಗಳನ್ನೋ ಒಂದು ನಿಗದಿಯಾದ

ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ಪ್ರದೇಶದಲ್ಲಿನ ದೇಶದಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಟೆಗಳನ್ನು ಅನುಸರಿಸಿಯೇ ಬೆಳೆದಿದೆ. ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಲೆ ತಮ್ಮದೇ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು. [39] ಜೀವನದ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ ಗೋವು ಕಳ್ಳರ ಜೊತೆ ಹೋರಾಡಿ ಅಬಲೆಯರ ಮೇಲೆರಗುವ ಕಾಮುಕರ ವಿರುದ್ಧ ಹೋರಾಡಿ ಹಾಗೂ ತಮ್ಮ ಅರಸರ ಪರವಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳನ್ನು ವೀರಗಲ್ಲುಗಳು ಎಂದು ಕರೆಯುತ್ತಾರೆ. ಹೋರಾಟದಲ್ಲಿ ಮಡಿದ ವ್ಯಕ್ತಿಯ ಜ್ಞಾಪಕಾರ್ಥಕವಾಗಿ ನಿಲ್ಲಿಸಿರುವ ಕಲ್ಲುಗಳೇ ವೀರಗಲ್ಲು. [40]

ಅವರು ಮಾಡಿದ ಹೋರಾಟ ಇಂದಿನ ನಮ್ಮ ದೃಷ್ಠಿಯಲ್ಲಿ ಏನಾದರೂ ಆಗಿರಲಿ ಸಮಾಜದ ಒಳಿತಿಗಾಗಿ ಜೀವನದ ಹಂಗನ್ನು ತೊರೆದ ಅವರ ಧೀಮಂತಿಕೆಯನ್ನು ಊಹಿಸಲು ಸಾಧ್ಯವಾದುದು ಅವರ ಹೋರಾಟವು ಸಾಮಾಜಿಕ ನಿಷ್ಟೆ, ಸ್ವಾಮಿಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದ್ದಾಗಿದೆ. [41] ಯುದ್ಧದಲ್ಲಿ ಗೆದ್ದರೆ ಲಕ್ಷ್ಮೀ ದೊರಕುವಳು ಸತ್ತರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು ಎಂಬ ನಂಬಿಕೆ ಇತ್ತು. ಈ ನಂಬಿಕೆಯ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದಲ್ಲಿ ದೇವಕನ್ಯೆಯರು ಕಾದು ಕೊಂಡಿರುತ್ತಿದ್ದರಷ್ಟೇ ಅಲ್ಲ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯು ನಡೆಯುತ್ತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೂ, ಶಿವನೋಲಗಕ್ಕೂ ಕೊಂಡೊಯ್ಯುತ್ತಾರೆ ಎಂದು ಜನರು ನಂಬಿದ್ದರು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣಬಿಡುವುದು ಎರಡಕ್ಕೂ ಸಮಾನವಾದ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದುದು ಎಂಬ ನಂಬಿಕೆ ಸಮಾಜದಲ್ಲಿತ್ತು. ಆದರೆ ಯುದ್ಧ ಪ್ರಾಣತ್ಯಾಗವನ್ನು ಮಾಡಿದ ವೀರರ ಹೆಸರು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯು ಪ್ರಶಂಸೆಗೊಳಗಾಗುತ್ತಿತ್ತು.

ಆದುದರಿಂದಲೇ ವೀರನನ್ನು ಕುರಿತು ಕಥೆಗಳು ಹುಟ್ಟಿಕೊಳ್ಳುತ್ತಿದ್ದವು. ಈ ಕಾರಣಗಳಿಂದಲೇ ಪ್ರಪಂಚದಾದ್ಯಂತ ವೀರ ಕಾವ್ಯಗಳೆಂಬ ಶಿಷ್ಟ ಮತ್ತು ಜನಪದ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡವು, ವೀರಗಲ್ಲುಗಳು ಸಾಮಾನ್ಯವಾಗಿ ಶಿಲ್ಪದ ಮೂರು ಹಂತಗಳನ್ನು ಒಳಗೊಂಡಿರುತ್ತದೆ. ಕೆಳಗಿನ ಹಂತದಲ್ಲಿ ವೀರನು ಶತ್ರು ಪಕ್ಷದವರೊಡನೆ ಹೋರಾಟ ಮಾಡುತ್ತಿರುವ ಶಿಲ್ಪವಿರುತ್ತದೆ. ಮಧ್ಯದ ಹಂತದಲ್ಲಿ ಅವನ್ನು ಕೈಲಾಸಕ್ಕೆ ಕೊಂಡೊಯುತ್ತಿರುವ ಅಪ್ಸರೆಯರನ್ನು ಶಿಲ್ಪಿಸಲಾಗಿರುತ್ತದೆ. ಮೇಲಿನ ಹಂತದಲ್ಲಿ ಅವನು ಶಿವನ ಸಾನಿಧ್ಯದಲ್ಲಿರುವುದನ್ನು ಶಿಲ್ಪಿಸಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ವೀರಗಲ್ಲಿನ ಮೇಲ್ಭಾಗದಲ್ಲಿ ಒಂದು

ಕಡೆ ಸೂರ್ಯ ಮತ್ತೊಂದು ಕಡೆ ಚಂದ್ರರನ್ನು ಕೆತ್ತಿರುತ್ತಾರೆ. ಚನ್ನರಾಯಪಟ್ಟಣದ ಪ್ರದೇಶದಲ್ಲಿನ ಸಮಕಾಲೀನದಲ್ಲಿ ಕಣ್ಣಾರೆ ಕಂಡ ನೈಜ ಘಟನೆಗಳ ಹಿನ್ನೆಲೆಗಳನ್ನು ಕಾಣಬಹುದಾಗಿದೆ.

**ಮಹಾಸತಿಕಲ್ಲುಗಳು**

ಪತಿಯೊಡನೆ ಸಹಗಮನ ಮಾಡಿದ ನಾರಿಯರ ಸ್ಮಾರಕಕ್ಕಾಗಿ ನಿಲ್ಲಿಸಿದ ಕಲ್ಲುಗಳನ್ನು ಮಾಸ್ತಿಕಲ್ಲು ಅಥವಾ ಮಹಾಸತಿಕಲ್ಲು ಎಂದು ಕರೆಯಲಾಗಿರುತ್ತದೆ. ಸತಿ ಅಥವಾ ಸಹಗಮನ ಪದ್ಧತಿ ಸಾರ್ವತ್ರಿಕವಾಗಿರಲಿಲ್ಲ. ಬಲತ್ಕಾರವೂ ಅಲ್ಲಿರಲಿಲ್ಲವೆಂಬುದನ್ನು ಅರಿಯಬೇಕಾಗುತ್ತದೆ. ಪತಿಯೇ ಪರದೈವವೆಂಬ ಭಾವನೆಯಲ್ಲಿ ಬೆಳೆದ ಹೆಣ್ಣು ಪತಿಯ ಮರಣವನ್ನು ಸಹಿಸಲಾಗಿದೆ ಏಕೈಕ ನಿಷ್ಠೆಯಿಂದ ಆತನನ್ನು ಹಿಂಬಾಲಿಸಿ ಸ್ವಸಂತೋಷದಿಂದ ಒಪ್ಪಿ ಸಹಗಮನವನ್ನು ಮಾಡುತ್ತಿದ್ದಳು. [42] ಏಕೆಂದರೆ ಧರ್ಮಶಾಸ್ತ್ರಗಳಲ್ಲಿಯೂ ಬಲತ್ಕಾರದ ಸಹಗಮನಕ್ಕೆ ಒಪ್ಪಿಗೆಯನ್ನು ನೀಡಿಲ್ಲ. ಆದರೂ ಕೆಲವು ಕಡೆಗಳಲ್ಲಿ ಅಪರೂಪವಾಗಿ ಹೆಣ್ಣಿಗೆ ಇಷ್ಟವಿಲ್ಲದಿದ್ದರೂ ವಿಧಿ ನಡೆಯುತ್ತಿದ್ದಂತೆ ತೋರುತ್ತದೆ. ಕೆಲವು ಸಮಯದಲ್ಲಿ ಪತಿಯ ಸಾವನ್ನು ಕೇಳಿ ಸ್ತ್ರೀಯರು ಸಹಗಮನ ಮಾಡಿಕೊಳ್ಳುತ್ತಿದ್ದರು. [43] ಪ್ರಾಚೀನ ಜನಾಂಗಗಳು ಈ ಪರಲೋಕಕ್ಕೆ ಹೋಗುವನೆಂದು ಅಲ್ಲಿಯ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು ಕಳುಹಿಸಬೇಕೆಂದು ಭಾವಿಸಿದ್ದರು.

ಗಂಡನು ಯುದ್ಧದಲ್ಲಿಯೋ ಆತ್ಮಬಲಿ ಮಾಡಿಕೊಂಡೋ ಅಥವಾ ಸಹಜವಾದ ಮರಣವನ್ನೋ ಪಡೆದಿರಬಹುದು. ಗಂಡನು ಯಾವ ಕಾರಣಕ್ಕಾಗಿ ಸತ್ತಿರಬಹುದು ಎಂಬುದನ್ನು ತಿಳಿಯಲು ಶಿಲೆಯಲ್ಲಿರುವ ಶಿಲ್ಪವನ್ನು ನೋಡಿ ನಿರ್ಣಯಿಸುವುದು ಬಹಳ ಕಷ್ಟವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಆ ಸ್ಮಾರಕ ಶಿಲೆಗಳನ್ನು ನೋಡಿ ಯಾವ ಕಾರಣಕ್ಕಾಗಿ ಸತ್ತಿರಬಹುದು ಎಂಬುದನ್ನು ತಿಳಿಯಲು ಶಿಲೆಯಲ್ಲಿರುವ ಶಿಲ್ಪವನ್ನು ನೋಡಿ ನಿರ್ಣಯಿಸುವುದು ಬಹಳ ಕಷ್ಟವಾಗುತ್ತದೆ. ಅಂತಹ ಸಮಯದಲ್ಲಿ ಆ ಸ್ಮಾರಕ ಶಿಲೆಗಳ ಪಾಠದ ಮೊರೆ ಹೋಗ ಬೇಕಾಗುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಸ್ಮಾರಕ ಶಿಲೆಗಳ ಪಾಠವನ್ನಾಗಲೀ ಶಿಲ್ಪವನ್ನಾಗಲೀ ಗಮನಿಸಿದಾಗ ಅವುಗಳನ್ನು ವೀರಗಲ್ಲು ಎಂಬುದಾಗಿ ಗುರುತಿಸಬೇಕೇ ಅಥವಾ ಮಹಾಸತಿ ಕಲ್ಲುಗಳೆಂದು ಗುರುತಿಸಬೇಕೇ ಅಥವಾ ವೀರನಿಗೂ ಮಹಾಸತಿಗೂ ಇಬ್ಬರಿಗೂ ಸ್ಮಾರಕವಾಗಿದೆಯೇ ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಾಗದೇ ಹೋಗಬಹುದು.

ಆದುದರಿಂದಲೇ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯರ ಸ್ಮರಣೆಗಾಗಿ ನೆಟ್ಟಂತಹ ಕಲ್ಲುಗಳೇ ಮಹಾಸತಿ ಕಲ್ಲುಗಳೆಂದು ನಿರ್ಧಾರಕ್ಕೆ ಬರಬಹುದು. [44] ಮಹಾಸತಿ ಕಲ್ಲುಗಳೇ

ಅಲ್ಲದೇ ನಿಷಿದಿ ಕಲ್ಲಿಗೂ ಪೂಜೆಯ ವ್ಯವಸ್ಥೆ ಮಾಡುತ್ತಿದ್ದ ವಿಷಯವನ್ನು ಶಾಸನಗಳಿಂದ ತಿಳಿಯಬಹುದು. ಜೈನ ಸನ್ಯಾಸಿಗಳು ಸಲ್ಲೇಖನ ವ್ರತವನ್ನು ಕೈಗೊಂಡು ಆಹಾರವನ್ನು ಸ್ವೀಕರಸಿದೇ ದೇಹ ತ್ಯಾಗ ಮಾಡಿ ಪರಮ ಸಿದ್ಧಿ ಪಡೆದುದರ ಸ್ಮಾರಕವಾಗಿ ನೆಟ್ಟಂತಹ ಕಲ್ಲುಗಳೇ ನಿಸದಿ ಕಲ್ಲುಗಳು, ಇವುಗಳು ಶ್ರವಣಬೆಳಗೊಳದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತದೆ.

**ಆನೆಕೆರೆಯ ವೀರಗಲ್ಲು**

ಆನೆಕೆರೆ ಗ್ರಾಮದಲ್ಲಿ ಪ್ರಾಚೀನ ಅವಶೇಷಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡು ಬರುತ್ತವೆ. ಅವುಗಳಲ್ಲಿ ವೀರಗಲ್ಲುಗಳು ಸಹ ಇವೆ. ಈ ವೀರಗಲ್ಲು ಗ್ರಾನೈಟ್ ಕಲ್ಲಿನಿಂದ ಕೂಡಿದ್ದು ಮೂರು ಹಂತಗಳಲ್ಲಿ ನಿರ್ಮಿತಗೊಂಡಿವೆ. ಕೆಳಗಿನ ಹಂತದಲ್ಲಿ ನಿರ್ಮಿತಗೊಂಡಿವೆ ಕೆಳಗಿನ ಹಂತದಲ್ಲಿ ವೀರರು ಹೋರಾಟ ನಡೆಸುತ್ತಿರುವುದು ಕಂಡು ಬರುತ್ತದೆ. ಈ ಯುದ್ಧದಲ್ಲಿ ಇಬ್ಬರು ಮರಣಹೊಂದಿದ್ದಾರೆ. ಆದ ಕಾರಣ ಎರಡನೆಯ ಹಂತದಲ್ಲಿ ಇಬ್ಬರು ವ್ಯಕ್ತಿಗಳನ್ನು ಪಲ್ಲಕ್ಕಿಯಲ್ಲಿ ಕುರಿಸಿಕೊಂಡು ದೇವಲೋಕ ಸುಂದರಿಯರು ದೇವಲೋಕಕ್ಕೆ ಕರೆದುಕೊಂಡು ಹೋಗುವಂತೆ ಕಂಡು ಬರುತ್ತದೆ. ಮೇಲ್ಭಾಗದ ಹಂತದಲ್ಲಿ ಶಿವಭಕ್ತ, ಪೂಜಾರಿ, ಸೇವಕ ಇವರೆಲ್ಲರು ಸಹ ಶಿವನಿಗೆ ಭಕ್ತಿಯಿಂದ ಪೂಜೆ ಮಾಡುತ್ತಿರುವುದು ಕಂಡು ಬರುತ್ತದೆ. (ಚಿತ್ರ ಸಂಖ್ಯೆ–93)

**ವೀರಗಲ್ಲು–ಆನೆಕೆರೆ**

ಇದೊಂದು ವಿಶೇಷವಾದ ವೀರಗಲ್ಲಾಗಿದೆ. ಕಾರಣವೇನೆಂದರೆ ಯುದ್ಧವನ್ನು ತೋರಿಸದೆ ಮೊದಲನೆಯ ಭಾಗದಲ್ಲಿಯೇ ದೇವಲೋಕದ ಭಕ್ತರು ಪಲ್ಲಕ್ಕಿಯಲ್ಲಿ ಮರಣ ಹೊಂದಿದ ವ್ಯಕ್ತಿಯನ್ನು ಕುಳಿರಿಸಿಕೊಂಡು ಹೋಗುತ್ತಿರುವುದು ವಿಶೇಷವಾಗಿದೆ. ಅಲ್ಲದೆ ಶಿವಭಕ್ತ, ಭಕ್ತ ಹಾಗೂ ಶಿವಲಿಂಗಕ್ಕೆ ನಂದಿಗೆ ಪೂಜೆ ಸಲ್ಲಿಸುತ್ತಿರುವುದು ಕಂಡು ಬಂದರೂ ಕೂಡ ಮೇಲಿನ ಹಂತದಲ್ಲಿ ಶಿವ ಪಾರ್ವತಿಯರನ್ನು ತೋರಿಸಿದ್ದು ಶಿವಭಕ್ತರು ಇನ್ನಿತರ ದೇವತೆಗಳನ್ನು ಹಾಗೂ ನಂದಿಯನ್ನು ತೋರಿಸಲಾಗಿದೆ. ಆದಕಾರಣ ಇದೊಂದು ಪ್ರಮುಖ ಹಾಗೂ ವಿಶೇಷತೆಯನ್ನು ಹೊಂದಿರುವ ವೀರಗಲ್ಲಾಗಿದೆ. (ಚಿತ್ರ ಸಂಖ್ಯೆ–94)

**ವೀರಗಲ್ಲು–ಆನೆಕೆರೆ**

ಇದೊಂದು ಸರಳ ವೀರಗಲ್ಲು ಕೆಳಭಾಗದಲ್ಲಿ ಯೋಧರ ಉಬ್ಬುಶಿಲ್ಪಗಳಿವೆ. ಮಧ್ಯದಲ್ಲಿ ಮಡಿದವರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವುದು ಮೇಲ್ಭಾಗದಲ್ಲಿ ಭಕ್ತಿ ಶಿವಲಿಂಗಕ್ಕೆ ನಂದಿಗೆ ಪೂಜೆ ಸಲ್ಲಿಸುತ್ತಿರುವುದು ಕಂಡು ಬರುತ್ತದೆ. (ಚಿತ್ರ ಸಂಖ್ಯೆ–95)

**ದ್ವಾರಬಾಗಿಲು–ಆನೆಕೆರೆ**

ಆನೆಕೆರೆಯ ಗ್ರಾಮದಲ್ಲಿ ಒಂದು ಪ್ರಾಚೀನ ಕಾಲದ ದ್ವಾರವಿದೆ. ಪ್ರಾಯಶಃ ಅಂದಿನ ಕಾಲದಲ್ಲಿ ಈ ದ್ವಾರದ ಮೂಲಕ ಪ್ರವೇಶ ಪಡೆಯಬಹುದಾಗಿತ್ತೆಂದು ತೋರುತ್ತದೆ. ಅಲ್ಲದೆ ಇದರ ಪಕ್ಕದಲ್ಲಿಯೇ ಚಪ್ಪಡಿಗಳನ್ನು ನಿಲ್ಲಿಸಿರುವುದರಿಂದ ಪ್ರಾಯಶಃ ಅಂದಿನ ಕಾಲದ ಒಂದು ಶಿಲಾ ಸಮಾಧಿಯಾಗಿರಬಹುದೆಂದು ತೋರುತ್ತದೆ. ಒಟ್ಟಾರೆ ಹೇಳುವುದಾದರೆ ಇದೊಂದು ಪ್ರಮುಖವಾದ ಅವಶೇಷವೆಂದು ಮಾತ್ರ ಹೇಳಬಹುದಾಗಿದೆ. (ಚಿತ್ರ ಸಂಖ್ಯೆ–96)

**ವೀರಗಲ್ಲು–ಅಕ್ಕನಹಳ್ಳಿ (ಅಂಕನಹಳ್ಳಿ)**

ಈ ವೀರಗಲ್ಲು ವಿಶೇಷವಾಗಿದೆ. ಕೆಳಭಾಗದಲ್ಲಿ ರಾಜ ಕುದುರೆ ಮೇಲೆ ಕುಳಿತು ಯುದ್ಧಕ್ಕೆ ಹೊರಟಿರುವುದು ಕಂಡು ಬಂದು ಸುಂದರವಾದ ಕುದುರೆ ಮೇಲೆ ಕುಳಿತರಾಜ ಭರ್ಜಿ ಮತ್ತು ಖಡ್ಗವನ್ನು ಹೊಂದಿದ್ದಾನೆ. ಈತನ ಜೊತೆಗೆ ಆತನ ಹೆಂಡತಿಯರು ಸಹ ಭಾಗವಹಿಸಿರುವುದು ಕಂಡು ಬರುತ್ತದೆ. ಹೆಂಡತಿಯರು ಸಹ ಸುಂದರವಾಗಿ ಇರುವುದರಿಂದ ಇವರು ರಾಜನ ಹೆಂಡತಿಯರೆ ಎಂದು ಹೇಳಬಹುದು. ಇವರು ವಸ್ತ್ರ, ಆಭರಣ ಮತ್ತು ಕಿರೀಟವನ್ನು ಧರಿಸಿರುತ್ತಾರೆ. ಈ ಯುದ್ಧದಲ್ಲಿ ಮೂರು ಜನರು ಸಹ ಮರಣ ಹೊಂದಿರಬೇಕು ಅಥವಾ ಜಯವನ್ನು ಪಡೆದಿರಬಹುದು. ಈ ಹಿನ್ನೆಲೆಯಿಂದ ಮೂರು ಜನರು ಕೂಡ ಭಕ್ತಿಯಿಂದ ಕೈಮುಗಿದು ಕುಳಿತಿದ್ದು ಪಕ್ಕದಲ್ಲಿಯೇ ನಂದಿಯಿದ್ದು ಕರುವಿಗೆ ಹಾಲು ಕುಡಿಸುತ್ತಿರುವುದು ಕಂಡು ಬರುತ್ತದೆ. ಇದೊಂದು ವಿಶೇಷವಾದ ವೀರಗಲ್ಲು. ಎರಡನೆಯ ಹಂತದಲ್ಲಿ ಶೈವ ಧರ್ಮಕ್ಕೆ ಪೂರಕವಾಗಿದ್ದು ಮೇಲ್ಭಾಗದಲ್ಲಿ ವೈಷ್ಣವ ಧರ್ಮದ ಚಿಹ್ನೆಗಳನ್ನು ತೋರಿಸಲಾಗಿದೆ, ಆದ ಕಾರಣ ಈ ಮೂವರಲ್ಲಿ ಶೈವ ಮತ್ತು ವೈಷ್ಣವ ಧರ್ಮಿಯರು ಸಹ ಆಗಿದ್ದರು ಎಂಬುದನ್ನು ತಿಳಿಸುವಂತಹ ವೀರಗಲ್ಲಾಗಿದೆ. (ಚಿತ್ರ ಸಂಖ್ಯೆ–98)

**ಕರಿಕಲ್ಲು ಸಮಾಧಿ**

ಅಕ್ಕನ ಹಳ್ಳಿಯಲ್ಲಿ ಕರಿಕಲ್ಲು ಸಮಾಧಿ ಇದೆ. ಇದು ಪ್ರಾಚೀನ ಕಾಲದ ಅವಶೇಷವೆಂದು ಹೇಳಬಹುದು. ಅಂದಿನ ಕಾಲದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಪೂರಕವಾಗಿ ಸಮಾಧಿಯನ್ನು ಮಾಡುತ್ತಿದ್ದರು. ಅದೇ ಸಮಾಧಿಯನ್ನು ದೇವರು ಎಂದು ಪೂಜಿಸುವ ಪರಿಪಾಠ ಸಹ ಇತ್ತು. ಈ ಹಿನ್ನೆಲೆಯಿಂದ ಇದನ್ನು ಕರಿಕಲ್ಲು ಸಮಾಧಿ ಎಂದು ಕರೆಯುತ್ತಾರೆ. (ಚಿತ್ರ ಸಂಖ್ಯೆ–98)

**ಗಂಜಿಗೆರೆ-ಕರಿಗಲ್ಲು ಸಮಾಧಿ**

ಗಂಜಿಕೆರೆಯು ಪ್ರಾಚೀನ ಗ್ರಾಮವಾಗಿದ್ದು ಈ ಗ್ರಾಮದಲ್ಲಿ ಕೆಲವೊಂದು ಕಲ್ಲುಗಳನ್ನು ನಿಲ್ಲಿಸಿರುತ್ತಾರೆ. ಸ್ಥಳೀಯ ಇದನ್ನು ಕರಿಗಲ್ಲು ಎಂದು ಕರೆಯುತ್ತಾರೆ. ಇದರ ಉದ್ದೇಶವೇನೆಂದರೆ ಇದು ಅಂದಿನ ಕಾಲದಲ್ಲಿ ಒಂದು ಸಮಾಧಿಯಾಗಿತ್ತು. ಈಗ ದುಸ್ಥಿತಿಯನ್ನು ಹೊಂದಿದೆ. (ಚಿತ್ರ ಸಂಖ್ಯೆ-೯೯)

**ಬಳುಗಟ್ಟಿ-ಸಮಾಧಿ**

ಬಳುಗಟ್ಟಿ ಅತ್ಯಂತ ಪ್ರಾಚೀನ ನೆಲೆ, ಈ ಗ್ರಾಮದಲ್ಲಿ ದುಸ್ಥಿತಿ ಹೊಂದಿರುವ ದೇವಾಲಯಗಳ ಅವಶೇಷಗಳ ಕಂಡು ಬರುತ್ತವೆ. ಅದೇ ಸ್ಥಳದಲ್ಲಿ ಸಮಾಧಿಗೆ ಬಳಸಿರುವ ಅನೇಕ ಚಪ್ಪಡಿಗಳು ಸಹ ಇರುವುದರಿಂದ ಇದು ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಸಮಾಧಿಯೇ ಎಂದು ಇಲ್ಲಿ ಪರಿಗಣಿಸಲಾಗಿದೆ. (ಚಿತ್ರ ಸಂಖ್ಯೆ-100)

**ಕಬ್ಬಳ್ಳಿ-ಸಮಾಧಿಗಳು**

ಕಬ್ಬಳ್ಳಿ ಎಂಬ ಗ್ರಾಮದಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ನೆಲೆಯನ್ನು ಗುರುತಿಸಲಾಗಿರುತ್ತದೆ. ಈ ಊರಿನಲ್ಲಿ ಅನೇಕ ಪ್ರಾಚೀನ ಬೃಹತ್ ಸಂಸ್ಕೃತಿಗೆ ಸೇರಿದ ಸಮಾಧಿಗಳಿವೆ. ಕೆಲವೊಂದು ನೆಲೆಯಲ್ಲಿ ದೇವಾಲಯ, ದೇವರು ಎಂದು ಪೂಜಿಸುತ್ತಾರೆ. ಅದೇ ಮಾದರಿಯಲ್ಲಿ ಕಬ್ಬಳ್ಳಿಯ ಜನರು ಸಹ ಇದನ್ನು ದೇವಾಲಯ ದೇವರು ಎಂದು ಪೂಜಿಸುವ ಪರಿಪಾಠವಿದೆ (ಚಿತ್ರ ಸಂಖ್ಯೆ-101, 102)

**ಮಾದಲಗೆರೆ-ಹೆಬ್ಬಾಗಿಲು**

ಮಾದಲಗೆರೆಯಲ್ಲಿ ಒಂದು ಪ್ರಾಚೀನ ಕಾಲದ ಹೆಬ್ಬಾಗಿಲು ಇದೆ. ಇದಕ್ಕೆ ದೊಡ್ಡ ದೊಡ್ಡ ಕಲ್ಲುಕಂಬಗಳನ್ನು ಮತ್ತು ಚಪ್ಪಡಿಯನ್ನು ಬಳಸಲಾಗಿರುತ್ತದೆ. ಇದು ಊರಿಗೆ ಕಿರೀಟವಾಗಿದೆ. ಈ ಊರಿನಲ್ಲಿ ಅನೇಕ ದೇವಾಲಯವಿತ್ತೆಂದು ಹೇಳುವುದಾದರೂ ಕೂಡ ಈಗ ಎಲ್ಲವೂ ದುಸ್ಥಿತಿ ಹೊಂದಿವೆ. ಆದರೆ ಹೆಬ್ಬಾಗಿಲು ಮಾತ್ರ ದುಸ್ಥಿತಿಯ ಹಂತದಲ್ಲಿದೆ. (ಚಿತ್ರ ಸಂಖ್ಯೆ-103)

**ಸಮಾಧಿ**

ಮಾದಲಗೆರೆಯಲ್ಲಿಯೂ ಸಹ ಒಂದು ಸಮಾಧಿ ಇದೆ. ಇದನ್ನು ದೇವಾಲಯವೆಂದು ಪರಿಗಣಿಸಿ ಜನರು ಪೂಜೆ ಮಾಡುತ್ತಿರುವುದು ಕಂಡು ಬರುತ್ತದೆ. ಇದು ಸಹ ಒಂದು ಪ್ರಾಚೀನ ಶಿಲಾ ಸಮಾಧಿಯಾಗಿದೆ. (ಚಿತ್ರ ಸಂಖ್ಯೆ-104) ಮಾದಲಗೆರೆಯಲ್ಲಿ ವೀರಗಲ್ಲು ಮತ್ತು

ಶಾಸನವಿದೆ. ತಲಕಾಡಿನ ಗಂಗರ ಕಾಲಕ್ಕೆ ಸೇರಿದ ವೀರಗಲ್ಲಾಗಿರಬೇಕು. ಏಕೆಂದರೆ ಕೆಳಭಾಗದಲ್ಲಿ ಮತ್ತು ಮೇಲ್ಭಾಗದಲ್ಲಿ ಆನೆಯ ಉಬ್ಬು ಶಿಲ್ಪಗಳಿವೆ. ಕೆಳಭಾಗದಲ್ಲಿ ಕುದುರೆಗಳು ಕಂಡು ಬಂದು ಮೇಲ್ಭಾಗದಲ್ಲಿ ವೀರರು ಹೋರಾಟ ನಡೆಸಿದ್ದು ಅದರಲ್ಲಿ ಮಡಿದವರ ಬಗ್ಗೆಯೂ ಕೂಡ ಚಿತ್ರದಲ್ಲಿ ತೋರಿಸಲಾಗಿದೆ. ಆದಕಾರಣ ಇದೊಂದು ವಿಶೇಷವಾದ ವೀರಗಲ್ಲು ಎಂದು ಪರಿಗಣಿಸಬಹುದಾಗಿದೆ. ಅಲ್ಲದೆ ಪಕ್ಕದಲ್ಲಿಯೇ ಒಂದು ಕನ್ನಡ ಶಾಸನವಿರುವ ಚಪ್ಪಡಿ ಇದೆ. ಈ ಶಾಸನದ ಪ್ರಕಾರ ಗಂಗರ ದೊರೆ ಮಾರಸಿಂಹನ ಬಗ್ಗೆ ಮಾಹಿತಿಯನ್ನು ತಿಳಿಸುತ್ತದೆ. ಆದ ಕಾರಣ ಈ ವೀರಗಲ್ಲು ತಲಕಾಡಿನ ಗಂಗರ ಕಾಲಕ್ಕೆ ಸೇರಿದ ವೀರಗಲ್ಲಾಗಿದೆ. [45]

## ಅಡಿ ಟಿಪ್ಪಣಿಗಳು

1 ಕರ್ನಾಟಕ ರಾಜ್ಯ ಗ್ಯಾಸೆಟಿಯರ್– 1986, ಪು–502 –

2 ಎ.ಕ. ಸಂಪುಟ–10 ಶಾಸನ ಸಂಖ್ಯೆ– 97, (ವಿ.ಚ.ಪ. 247) –

3 ಎ.ಕ. ಸಂಪುಟ–10, ಶಾಸನ ಸಂಖ್ಯೆ– 98 –

4 ಎ.ಕ. ಸಂಪುಟ–10, ಶಾಸನ ಸಂಖ್ಯೆ– 93 ಮತ್ತು 94, ಅಗ್ರಹಾರ ಬೆಳಗುಲಿ –

5 ಎ.ಕ. ಸಂಪುಟ–10, ಶಾಸನಸಂಖ್ಯೆ– 96, ಅಗ್ರಹಾರ ಬೆಳಗುಲಿ, –

6 ಎ.ಕ. ಸಂಪುಟ–10, ಶಾಸನ ಸಂಖ್ಯೆ– 125, ಚನ್ನರಾಯಪಟ್ಟಣ –

7 ಅದೇ –

8 ಎ.ಕ. ಸಂಪುಟ–10, ಶಾಸನ ಸಂಖ್ಯೆ– 138 (ವಿ. ಚ.ಪ.171) –

9 ಎ.ಕ. ಸಂಪುಟ–10, ಶಾಸನ ಸಂಖ್ಯೆ– 37, (ವಿ. ಚ.ಪ. 170) –

10 ಎ.ಕ. ಸಂಪುಟ–10, ಶಾಸನ ಸಂಖ್ಯೆ– 102, (ವಿ. ಚ.ಪ. 262) –

11 ಎ.ಕ. ಸಂಪುಟ–10, ಶಾಸನ ಸಂಖ್ಯೆ– 101, (ವಿ. ಚ.ಪ.261) –

12 ಎ.ಕ. ಸಂಪುಟ–10, ಶಾಸನ ಸಂಖ್ಯೆ– 70, (ವಿ. ಚ.ಪ.203) –

13 ಎ.ಕ. ಸಂಪುಟ–10, ಶಾಸನ ಸಂಖ್ಯೆ– 71, 72, 73, 74 –

14 ಎ.ಕ. ಸಂಪುಟ–10, ಶಾಸನ ಸಂಖ್ಯೆ– 43, 44 –

15 ಎಂ.ಎ.ಆರ್–1939, ಪುಟ–74–76 –

16 ಎ.ಕ. ಸಂಪುಟ–10, ದಿಂಡಗೂರು ಶಾಸನ ಸಂಖ್ಯೆ–40 –

17 ಎ.ಕ. ಸಂಪುಟ–10, ಶಾಸನ ಸಂಖ್ಯೆ–122, ಕಬ್ಬಳ್ಳಿ, (ವಿ. ಚ.ಪ. 263) –

18 ಎ.ಕ. ಸಂಪುಟ–10, ಕಬ್ಬಳ್ಳಿ, ಶಾಸನ ಸಂಖ್ಯೆ–123, (ವಿ. ಚ.ಪ. 264) –

19 ಎ.ಕ. ಸಂಪುಟ–10, ಬಾಗೂರು ಶಾಸನ ಸಂಖ್ಯೆ–51, (ವಿ.ಚ.ಪ.186) –

20 ಎ.ಕ. ಸಂಪುಟ–10, ಬಾಗೂರು, ಶಾಸನ ಸಂಖ್ಯೆ–50 (ವಿ.ಚ.ಪ.185) –

21 ಎ.ಕ. ಸಂಪುಟ–10, ಬಳಗಟ್ಟಿ, ಶಾಸನ ಸಂಖ್ಯೆ–75 (ವಿ. ಚ.ಪ. 209) –

22 ಎ.ಕ. ಸಂಪುಟ–10, ಶಾಸನ ಸಂಖ್ಯೆ–77 (ವಿ. ಚ.ಪ. 251) –

23 ಎ.ಕ. ಸಂಪುಟ–10, ಶಾಸನ ಸಂಖ್ಯೆ–129 (ವಿ.ಚ.ಪ. 250) –

24 ಎ.ಕ. ಸಂಪುಟ–10, ಶಾಸನ ಸಂಖ್ಯೆ–100 (ವಿ. ಚ.ಪ. 228) –

25 ಎ.ಕ. ಸಂಪುಟ–10, ಶಾಸನ ಸಂಖ್ಯೆ–127 (ವಿ. ಚ.ಪ. 266) –

26 ಎ.ಕ. ಸಂಪುಟ–10, ಶಾಸನ ಸಂಖ್ಯೆ–54 (ವಿ.ಚ.ಪ.192) –

27 ಎ.ಕ. ಸಂಪುಟ–10, ಶಾಸನ ಸಂಖ್ಯೆ–55 (ವಿ.ಚ.ಪ–191) –

28 ಎ.ಕ. ಸಂಪುಟ–10, ಶಾಸನ ಸಂಖ್ಯೆ–59 (ವಿ.ಚ.ಪ–195) –

| | | | |
|---|---|---|---|
| 29 | ಎ.ಕ. ಸಂಪುಟ–10, ಶಾಸನ ಸಂಖ್ಯೆ–76 (ವಿ.ಚ.ಪ. 210) | – | |
| 30 | ಎ.ಕ. ಸಂಪುಟ–10, ಶಾಸನ ಸಂಖ್ಯೆ–81 (ವಿ.ಚ.ಪ. 202) | – | |
| 31 | ಎ.ಕ. ಸಂಪುಟ–10, ಶಾಸನ ಸಂಖ್ಯೆ–78 | – | |
| 32 | ಎ.ಕ. ಸಂಪುಟ–10, ಶಾಸನ ಸಂಖ್ಯೆ–79 | – | |
| 33 | ಎ.ಕ. ಸಂಪುಟ–10, ಶಾಸನ ಸಂಖ್ಯೆ–64 | – | |
| 34 | ಎ.ಕ. ಸಂಪುಟ–10, ಶಾಸನ ಸಂಖ್ಯೆ–65 | – | |
| 35 | ಎ.ಕ. ಸಂಪುಟ–10, ಶಾಸನ ಸಂಖ್ಯೆ–63 | – | |
| 36 | ಎ.ಕ. ಸಂಪುಟ–10, ಶಾಸನ ಸಂಖ್ಯೆ–84 | – | |
| 37 | ಹಾಸನ ಜಿಲ್ಲೆಯ ಗ್ಯಾಸೆಟಿಯರ್‌ಗಳು | – | |
| 38 | ಎಂ. ಚಿದಾನಂದ ಮೂರ್ತಿ. | – | ಕರ್ನಾಟಕ ಶಾಸನ ಸಂ.6, ಪುಟ–1 |
| 39 | ಆರ್. ಶೇಷಶಾಸ್ತ್ರಿ | – | ಕರ್ನಾಟಕದ ವೀರಗಲ್ಲುಗಳು, ಪು–11 |
| 40 | ಪಿ.ಕೆ. ಆಚಾರ್ಯ | – | ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು–561 |
| 41 | ಆರ್. ಶೇಷಶಾಸ್ತ್ರಿ | – | ಪೂರ್ವೋಕ್ತ, ಪುಟ–4 |
| 42 | ಶೇಠೆ. ಬಿ.ಎಸ್ | – | ಕರ್ನಾಟಕದಲ್ಲಿ ಸತಿಪದ್ಧತಿ, ಪು–11–36 |
| 43 | ನಿರಂಜನ | – | ಜ್ಞಾನಗಂಗೋತ್ರಿ, ಸಂ–1, ಪು–488 |
| 44 | ಶೇಠೆ. ಬಿ.ಎಸ್ | – | ಪೂರ್ವೋಕ್ತ, ಪು–281–82 |
| 45 | ಎ.ಕ. ಸಂ–10, ಶಾಸನ ಸಂಖ್ಯೆ–128 (ಮಾದಲಗೆರೆ) | – | |

# ಅಧ್ಯಾಯ–5

## ಧಾರ್ಮಿಕ ಕೇಂದ್ರವಾಗಿ, ಆರ್ಥಿಕ ಕೇಂದ್ರವಾಗಿ ದೇವಾಲಯಗಳು

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ಪ್ರದೇಶವು ಧಾರ್ಮಿಕ ಕೇಂದ್ರಗಳನ್ನು ಒಳಗೊಂಡಂತೆ ಅನೇಕ ಪ್ರಾಂತ್ಯಗಳು ಕಂಡುಬರುತ್ತವೆ. ಈ ಪ್ರಾಂತ್ಯ ಪ್ರಾಚೀನ ಕಾಲದಿಂದಲೂ ಧಾರ್ಮಿಕ ಪರಂಪರೆಗೆ ಪೂರಕವಾಗಿ ಹಲವಾರು ವೈದಿಕ ಧರ್ಮಗಳು ಹಾಗೂ ಬೌದ್ಧ, ಜೈನ, ಮುಸ್ಲಿಂ, ವೀರಶೈವ ಧರ್ಮಗಳು ಕಂಡುಬಂದಿವೆ.

ಚನ್ನರಾಯಪಟ್ಟಣದ ಶ್ರವಣಬೆಳಗೊಳ ಧಾರ್ಮಿಕ ಶ್ರದ್ಧೆ, ಸಮನ್ವಯತೆ, ಔದಾರ್ಯ ಹಾಗೂ ಇಲ್ಲಿನ ವಾತಾವರಣ ಪ್ರಾಚೀನ ಕಾಲದಿಂದಲೂ ಧಾರ್ಮಿಕ ನಂಬಿಕೆಗಳನ್ನು ಮತ್ತು ಆಯಾ ಧರ್ಮಗಳನ್ನು ಬೆಳೆಸಿರುವುದು ಕಾಣಬರುತ್ತದೆ. ಭಾರತ ದೇಶದಲ್ಲಿ ಧಾರ್ಮಿಕ ಸಂಸ್ಕೃತಿಯ ಬೆಳವಣಿಗೆಯನ್ನು ನೋಡಿದಾಗ, ಅದು ಪ್ರಾಚೀನ ವೈದಿಕ ಧರ್ಮವನ್ನು ಅತ್ಯಂತ ಪ್ರಾಚೀನ ಧರ್ಮವೆಂದು ತಿಳಿದುಬರುತ್ತದೆ.

ಈ ಹಿನ್ನೆಲೆಯನ್ನು ಗಮನಿಸಿದರೆ ಹಲವಾರು ವೈದಿಕ ಪಂಥಗಳು, ಜೈನ, ಬೌದ್ಧ, ಶಾಕ್ತ ಪಂಥಗಳು ಬೆಳೆದುಬಂದಿವೆ ಕ್ರಿ.ಪೂರ್ವ 6–5ನೇ ಶತಮಾನದಲ್ಲಿ ಹುಟ್ಟಿದಂತಹ ಜೈನ ಮತ್ತು ಬೌದ್ಧ ಧರ್ಮಗಳು ಭಾರತ ದೇಶದ ನಾನಾ ಭಾಗಗಳಲ್ಲಿ ಅಲ್ಲದೆ ಕರ್ನಾಟಕದ ನಾನಾ ಭಾಗಗಳಲ್ಲಿ ಬೆಳೆದು ಹಾಸನ ಜಿಲ್ಲೆಯ ಚನ್ನರಾಯಪಟ್ಟಣದಲ್ಲಿಯೂ ಕೂಡ ಧಾರ್ಮಿಕ ಸಂಸ್ಕೃತಿಯ ಬೆಳವಣಿಗೆಯ ಇತಿಹಾಸದಲ್ಲಿ ತಮ್ಮದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಭಾರತದಲ್ಲಿ ಶೈವ ಧರ್ಮವು ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಈ ಧರ್ಮ ಭಾರತದ ಅವಿಭಾಜ್ಯ ಅಂಗವಾಗಿದೆ. ಕರ್ನಾಟಕದ ಎಲ್ಲಾ ಕಡೆ ಶೈವ ಪರಂಪರೆಗೆ ಪೂರಕವಾದ ದೇವಾಲಯಗಳು ಕಂಡುಬರುತ್ತವೆ. ಶೈವ ಧರ್ಮದ ಮೂಲವನ್ನು ಗುರುತಿಸಲು ಇನ್ನೂ ಸಾಧ್ಯವಾಗಿಲ್ಲ. ವೈದಿಕ ಪೂರ್ವ ಕಾಲದಿಂದಲೂ ಅಲ್ಲದೆ ಆರ್ಯತರವೆಂದೂ ಕೆಲವು ಇತಿಹಾಸ ಚಿಂತಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇದಕ್ಕೆ ಪೂರಕವಾದ ಆಧಾರಗಳು ಕಂಡುಬರುವುದಿಲ್ಲ.[1] ಭಾರತದ ಪ್ರಾಚೀನ ನೆಲೆಗಳಾದ ಹರಪ್ಪ, ಮೆಹೆಂಜೋದಾರೋಗಳಲ್ಲಿ ಪಶುಪತಿಯ ಶಿಲ್ಪ ಇರುವ ಮುದ್ರಿಕೆಗಳು ಕಂಡುಬಂದಿವೆ. ಅಲ್ಲದೆ ಶೈವ ಧರ್ಮಕ್ಕೆ ಪೂರಕವಾದ ಪ್ರಾಣಿಗಳನ್ನು ಗುರುತಿಸಲಾಗಿದೆ. ಪಶುಅಪ್ತಿಯು ಆದ ಶಿವನು ಶೈವ ಧರ್ಮಿಯರೆಂದು ವಿದ್ವಾಂಸರು ಅಬಿಪ್ರಾಯಪಟ್ಟಿದ್ದಾರೆ. [2] ಈ ಅಂಶವನ್ನು ಗಮನಿಸಿದಾಗ ಶೈವ ಸಂಸ್ಕೃತಿಯು

ಭಾರತದಲ್ಲಿ ಸಿಂಧೂ ಬಯಲಿನ ನಾಗರೀಕತೆಯಿಂದಲೂ ಬೆಳೆದು ಬಂದಿದೆ. ಶೈವ ಧರ್ಮದ ತತ್ವಗಳು ವೇದ, ಆಗಮ ಗ್ರಂಥದಲ್ಲಿಯೂ ಕಂಡುಬರುತ್ತದೆ. ಇವು ಅಲ್ಲದೆ ಶೈವ ಆಗಮ, ಶೈವ ಉಪನಿಷತ್, ಲಿಂಗಪುರಾಣ, ಶಿವಪುರಾಣ, ಸಕಂದ ಪುರಾಣ, ಮತ್ಸ್ಯಪುರಾಣ ಕೂಡು ಪುರಾಣ ಮೊದಲಾದವುಗಳಲ್ಲಿಯೂ ಶೈವ ಪರಂಪರೆಯ ವಿಚಾರಗಳು ತಿಳಿದುಬರುತ್ತದೆ. [3] ಶಿವನನ್ನು ಆರಾಧ್ಯ ದೈವನಾಗಿ ನಂಬಿರುವ ಆಗಮ ಗ್ರಂಥಗಳು ಶೈವಾಗಮಗಳೆಂದು ಕರೆಯಲಾಗಿದೆ. ಶಿವನನ್ನು ರುದ್ರನಿಗೆ ಸೇರಿಸಲಾಗಿದೆ. [4] ರುದ್ರ ಎಂದರೆ ಗರ್ಜಿಸುವವನು ಎಂಬ ನಂಬಿಕೆ ಇದೆ. ಈತನ ನೆಲೆ ಬೆಟ್ಟಗುಡ್ಡಗಳು. ಈತನು ಜಟೆಯನ್ನು ಎತ್ತಿಕಟ್ಟಿ ಚರ್ಮದ ವಸ್ತುವನ್ನು ಧರಿಸಿರುತ್ತಾನೆ. ಸ್ವಭಾವತಃ ಭಯಂಕರನಾದ ಈತನನ್ನು ಶೈವ ಪರಂಪರೆಯ ಧರ್ಮದವರು ಶಿವ ಎಂದು ಕರೆದು ಪೂಜಿಸುವ ಪರಿಪಾಠವಿದೆ. [5]

ಶೈವ ಸಂಪ್ರದಾಯಕ್ಕೆ ಸೇರಿದವರು ಶಿವನನ್ನು ಲಿಂಗದ ಮಾದರಿಯಲ್ಲಿ ಶಿಲ್ಪಕ್ಕೆ ಪೂಜಿಸುವ ಪರಿಪಾಠವನ್ನು ಆರಂಭಿಸಿ ಕಾಲದಿಂದ ಇತ್ತೀಚಿನ ಕಾಲದೆನ್ನಬಹುದಾದರೂ ಸಹ ಇದರ ಬೆಳವಣಿಗೆ ಬಹುದೀರ್ಘಕಾಲದ್ದಾಗಿದೆ. ಶಿವಲಿಂಗವು ಶಿವನ ಸಪೇತವಾಗಿ ಬೆಳೆದು ಬಂದು ನಂತರದಲ್ಲಿ ಶಿವನ ವಿವಿಧ ಬೆಳವಣಿಗೆಗೆ ಬಂದಿವೆ. ಚನ್ನರಾಯಪಟ್ಟಣ ತಾಲ್ಲೂಕಿನ ಆಯಾ ಪ್ರದೇಶದಲ್ಲಿ ಶೈವ ಧರ್ಮಕ್ಕೆ ಸೇರಿದ ದೇವಾಲಯಗಳಿವೆ ಚೆನ್ನರಾಯಪಟ್ಟಣವಲ್ಲ ಇದೇ ದಕ್ಷಿಣ ಭಾರತದಲ್ಲಿಯೇ ಇತಿಹಾಸ ಪೂರ್ವ ಕಾಲದಿಂದಲೂ ಶೈವ ಮತ ಧರ್ಮ ಪ್ರಚಾರಕ್ಕೆ ಬಂದಿತ್ತೆಂದೂ ಶೈವ ಪರಂಪರೆಯ ಸಂಪ್ರದಾಯಗಳು ತಿಳಿಸುತ್ತವೆ. [6] ದಕ್ಷಿಣ ಭಾರತದಲ್ಲಿ ನಟರಾಜಮೂರ್ತಿ ಶಿಲ್ಪವನ್ನು ಕೆತ್ತಿ ಹೆಚ್ಚಾಗಿ ಪ್ರಚಾರ ಮಾಡಿದ ಕೀರ್ತಿ ಬಾದಾಮಿಯ ಚಾಲುಕ್ಯರಿಗೆ ಸೇರಬೇಕು. ನಟರಾಜನ ಶಿಲ್ಪವಲ್ಲದೆ ಹರಿಹರ, ಅರ್ಧನಾರೀಶ್ವರ, ಮಹಿಷಮರ್ದಿನಿ ಮುಂತಾದ ಶಿಲ್ಪಗಳನ್ನು ಕಡೆಸಿದರು. ಬಾದಾಮಿ ಚಾಲುಕ್ಯರ ಸ್ಫೂರ್ತಿ ಪಡೆದ ಪಲ್ಲವರು, ರಾಷ್ಟ್ರಕೂಟರು, ಚೋಳರು, ಪಾಂಡ್ಯರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರ್‌ರವರು ಶಿವನ ಮೂರ್ತಿಯ ಶಿಲ್ಪಗಳಿಗೆ ಪ್ರಾಮುಖ್ಯತೆ ಕೊಟ್ಟರು. ಈ ಮಾದರಿಯಲ್ಲಿ ಶಿವನ ಪೂಜೆಯು ಲಿಂಗ ರೂಪದಲ್ಲಿ ಮತ್ತು ಮೂರ್ತಿ ರೂಪದಲ್ಲಿ ಬೆಳವಣಿಗೆಯಾಯಿತು. ಶಿವನ ಜೊತೆಯಲ್ಲಿ ಅವನ ಶಕ್ತಿ ದೇವತೆಯಾದ ಪಾರ್ವತಿ, ಸುಕಂದ, ವೃಷಭ, ಗಣಪತಿ ಇವರಿಗೂ ಪೂಜೆಸಲ್ಲಿಸುವ ಸಂಪ್ರದಾಯ ಬಂದಿತು. ತದನಂತರದಲ್ಲಿ ಲಕುಲೀಶ ಮತ್ತು ಪಾಶಪತರೆಂಬ ಎರಡು ಪಂಥಗಳು ಹುಟ್ಟಿಕೊಂಡವು. [8] ಪಾಶುಪಥರಿಗೆ ಕಾಳಾಮುಖರೆಂದು ಕರೆಯುತ್ತಾರೆ. ಬಾಕುಲ ಎಂಬ ಪಂಥದಲ್ಲಿ ದಂಡವನ್ನು ಹಿಡಿದು ಕುಳಿತು ಲಕುಲೀಶ ಎಂಬ ವ್ಯಕ್ತಿಯನ್ನು ಸೂಚಿಸುವುದಾಗಿರುತ್ತದೆ. [9] ಲಕುಲೀಶ ಮೂರ್ತಿಗಳನ್ನು ಕ್ರಿ.ಶ.7–8ನೇ ಶತಮಾನದಲ್ಲಿ ಪಟ್ಟದ ಕಲ್ಲು ಪ್ರದೇಶದ ಮಲ್ಲಿಕಾರ್ಜುನ ದೇವಾಲಯದಲ್ಲಿ

ಕಾಣಬಹುದಾಗಿದೆ. ಕಾಳಾಮುಖರು ಒಬ್ಬ ಯತಿಯೆಂದು (ಸನ್ಯಾಸಿ) ಎಂದು ಪೂಜಿಸುತ್ತಾರೆ. ಈ ರೀತಿಯ ಶಿಲ್ಪಗಳನ್ನು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಕಾಣಬಹುದು. ಹೀಗೆ ಹಲವಾರು ವಿಷಯಗಳನ್ನು ಹೊಂದಿಕೊಂಡು ಹುಟ್ಟಿದ ಶೈವ ಧರ್ಮದ ದೇವಾಲಯಗಳು ಕಂಡುಬರುತ್ತದೆ. [10]

ಶೈವ ಧರ್ಮವು ಪುರಾತನ ಕಾಲದಿಂದಲೂ ಭಾರತ ದೇಶದಾದ್ಯಂತ ಆಚರಿಸಿಕೊಂಡು ಬೆಳೆದು ಬಂದಿರುವ ಪ್ರಾಚೀನ ಧರ್ಮವಾಗಿದೆ. ಇದು ಜನಪದರಲ್ಲಿಯೂ ಏಕ ಪ್ರಕಾರವಾಗಿ ತನ್ನ ಹಿರಿಮೆಯನ್ನು ಹೊಂದಿದೆ. ಶೈವಧರ್ಮ ಆಚರಣೆಯನ್ನು ಲಿಂಗದ ರೂಪದಲ್ಲಿ ಅಥವಾ ಮೂರ್ತಿರೂಪದಲ್ಲಿ ಶಿವನನ್ನು ಪೂಜಿಸುವರು. ಸಮಾಜದ ಎಲ್ಲಾ ವರ್ಗಗಳಲ್ಲೂ ಇದ್ದರು. ಚನ್ನರಾಯಪಟ್ಟಣ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸಿದ ಎಲ್ಲಾ ರಾಜವರ್ಗದವರ ಕಾಲದಲ್ಲಿಯೇ ಹಿಂದಿನಿಂದಲೂ ಗ್ರಾಮ, ಗ್ರಾಮಗಳಲ್ಲಿಯೂ ಶಿವನ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಈ ಭಾಗದಲ್ಲಿ ಶೈವ ಧರ್ಮದ ಬಗ್ಗೆ ಅತ್ಯಂತ ಗೌರವಾದರಗಳನ್ನು ಹೊಂದಿದ್ದರು. ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಕ್ರಿ.ಶ.1307 ರಲ್ಲಿ ಈತನ ದಂಡನಾಯಕನಾದ ಮದಿಗ ದೇವದಣ್ಣಾಯಕನು ದ್ವಾರ ಸಮುದ್ರದ ಕಲಿಯ ಸೋಮನಾಥ ದೇವಾಲಯಕ್ಕೆ ಭೂದಾನವನ್ನು ನೀಡಿದ ಬಗ್ಗೆ ಬೇಲೂರಿನ ಶಾಸನದಿಂದ ತಿಳಿದುಬರುತ್ತದೆ. [11] ಕ್ರಿ.ಶ.1300 ರ ಶಾಸನದ ಪ್ರಕಾರವಾಗಿ ಮುಮ್ಮಡಿ ವೀರಬಲ್ಲಾಳನು ಕುಂದಾಣಿ ರಾಜ್ಯದಲ್ಲಿ ಮಠಗಳ ಮತ್ತು ಸ್ಥಾನಗಳ ಪ್ರಮುಖರನ್ನು ಸೇರಿಸಿ ಸಮಾವೇಶ ನಡೆಸಿದನೆಂದು ತಿಳಿದುಬರುತ್ತದೆ.[12]

ಮುಮ್ಮಡಿ ವೀರಬಲ್ಲಾಳನ ಕಾಲಕ್ಕೆ ಜೈನಧರ್ಮ ದುಸ್ಥಿತಿಗೆ ಕಾರಣವಾಯಿತು. ಅಲ್ಲದೆ ವೈಷ್ಣವ ಧರ್ಮವು ಜನಸಾಮಾನ್ಯರ ನಿತ್ಯ ಜೀವನದ ಧರ್ಮವಾಗಿ ವಿಫಲವಾದುದರಿಂದ ಮತ್ತೆ ಪುರಾತನ ಪಂಥವಾದ ಶೈವ ಪಂಥವು ಪುನಶ್ಚೇತನಗೊಂಡಿತು. ಇದಕ್ಕೆ ಪೂರಕವಾಗಿ ಭೂಮಿಯನ್ನು ದಾನ ನೀಡಿದ ವಿಚಾರ ತಿಳಿದುಬರುತ್ತದೆ. [13] ಅಲ್ಲದೆ ಈತನ ಕಾಲದಲ್ಲಿ ಕರ್ನಾಟಕ ಅಲ್ಲದೆ ತಮಿಳುನಾಡು ಸೇರಿದಂತೆ ವಿವಿಧ ಧಾರ್ಮಿಕ ಸಂಸ್ಥೆಗಳು ದೇವಾಲಯಗಳಿಗೆ ಪ್ರೋತ್ಸಾಹ ನೀಡಿರುವುದನ್ನು ಶಾಸನಗಳಿಂದ ತಿಳಿದುಬರುತ್ತದೆ. [14] ಚನ್ನರಾಯಪಟ್ಟಣ ತಾಲ್ಲೂಕಿನ ಬಹುತೇಕ ಗ್ರಾಮಗಳಲ್ಲಿ ಶೈವಪರಂಪರೆಗೆ ಸೇರಿದ ಬಹುತೇಕ ದೇವಾಲಯಗಳು ಕಂಡುಬರುತ್ತವೆ. ಅವುಗಳನ್ನು ದೇವಾಲಯಗಳು ಎಂಬ ಅಧ್ಯಯನದಲ್ಲಿ ವಿವರಣೆಯನ್ನು ನೀಡಲಾಗಿರುತ್ತದೆ. ಶೈವ ದೇವಾಲಯಗಳಿರುವುದರಿಂದ ಶೈವ ಧಾರ್ಮಿಕ ಕೇಂದ್ರಗಳಾಗಿ ಮುಂದುವರೆಯುತ್ತಿದೆ.

ವೈಷ್ಣವ ಧರ್ಮವು ಸಹ ಪ್ರಮುಖ ಧರ್ಮಗಳಲ್ಲಿ ಒಂದಾಗಿದೆ. ಇಲ್ಲಿ ವಿಷ್ಣುವಿನ ಪೂಜೆಯು ಪ್ರಮುಖವಾಗಿರುತ್ತದೆ. ವೈಷ್ಣವರು ವಿಷ್ಣುವೇ ಸರ್ವೋತ್ತಮನೆಂದು ನಂಬಿ ಅವನನ್ನು ಆರಾಧಿಸುವ ಧರ್ಮವಾಗಿದೆ. ವೈಷ್ಣವರಲ್ಲಿಯೂ ಆರು ಪಂಥಗಳಿರುವುದನ್ನು ಕಾಣಬಹುದಾಗಿದೆ. ಈ ಆರು ಪಂಥದವರು ಸಹ ವಿಷ್ಣುವಿನ ನಿರೂಪಣಾ ಶಿಲ್ಪವನ್ನು ಪೂಜಿಸುತ್ತಿದ್ದರು. ವಿಷ್ಣುವಿನ ಶಿಲ್ಪಗಳು ಉಗಮವು ಕಾಲಾನಂತರದಲ್ಲಿ ಬೆಳೆಯತೊಡಗಿತು. ವೈಷ್ಣವ ಧರ್ಮದಲ್ಲಿ ಕೇಶವ, ನರಸಿಂಹ, ಸೂರ್ಯನ ಆರಾಧನೆ, ನಾರಾಯಣ ಕಲ್ಪನೆಯ ಜೊತೆಗೆ ಕೃಷ್ಣ, ವಾಸುದೇವ, ಅನಂತರದಲ್ಲಿ ರಾಮನ ಆರಾಧನೆ ಈ ರೀತಿಯಾಗಿ ವೈಷ್ಣವ ಧರ್ಮದಲ್ಲಿ ವಿವಿಧ ಭಾಗಗಳಾಗಿ ಬೆಳೆದುಕೊಂಡವು. ಮತ್ಸ್ಯ (ಮೀನು), ಕೂರ್ಮ (ಆಮೆ), ವರಾಹ (ಹಂದಿ), ನರಸಿಂಹವಾಮನ (ಕಬ್ಬ) ಪರಶುರಾಮ, ರಾಮ ಕೃಷ್ಣ, ಬುದ್ಧ, ಕಲ್ಕಿ ಇವುಗಳು ವಿಷ್ಣುವಿನ ದಶಾವತಾರ ಶಿಲ್ಪಗಳು. [15]

ವೈಷ್ಣವ ಧರ್ಮದ ಪ್ರಾಚೀನತೆಯನ್ನು ಭಾರತದ ಪವಿತ್ರ ಧರ್ಮ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ಖುಗ್ವೇದದಲ್ಲಿ ವಿಷ್ಣುವೂ ಒಬ್ಬ ದೇವತೆಯಾಗಿ ಕಾಣಿಸಿಕೊಳ್ಳುತ್ತಾನೆ. ಆದರೆ ವೈದಿಕ ಸ್ತೋತ್ರಗಳಲ್ಲಿ ಇಂದ್ರನನ್ನೆ ಹೆಚ್ಚಾಗಿ ಪೂಜಿಸಲಾಗುತ್ತದೆ. [16] ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮವು ಯಾವ ಕಾಲಕ್ಕೆ ಬೆಳೆಯಿತು ಎಂಬ ವಿಚಾರದಲ್ಲಿ ಮಾಹಿತಿ ಇಲ್ಲ.

ವೈಷ್ಣವ ಧರ್ಮ ಕ್ರಿ.ಶ.4ನೆಯ ಶತಮಾನದಲ್ಲಿಯೇ ದಕ್ಷಿಣ ಭಾರತಕ್ಕೆ ಬಂದಿತು ಎಂದು ಸಾಹಿತ್ಯಿಕ ಆಧಾರಗಳಿಂದ ತಿಳಿದುಬರುತ್ತದೆ. [17] ಕರ್ನಾಟಕದಲ್ಲಿ ವೈಷ್ಣವ ಧರ್ಮದ ಬಗ್ಗೆ ಹಲ್ಮಿಡಿ ಶಾಸನದಿಂದಲೇ ತಿಳಿಯುತ್ತದೆ. ಈ ಶಾಸನದ ಆರಂಭವು ಮಹವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. [18] ಮಹಾಭಾರತದಲ್ಲಿ ವೈಷ್ಣವ ಧರ್ಮದ ಬಗೆಗೆ ಅನೇಕ ಆಧಾರಗಳು ಕಂಡುಬರುತ್ತವೆ. ಭಾಗವತ ಧರ್ಮ ಮುಂದೆ ಪರಿಪೂರ್ಣ ಸ್ಥಿತಿಯನ್ನು ತಲುಪಿತು. ಕುಶಾನರ ಕಾಲದಲ್ಲಿ ಕೆಲವು ರಾಜರು ವಿಷ್ಣುವಿನ ಆರಾಧಕರಾಗಿದ್ದರು. ವಿಷ್ಣುವಿನ ಅವತಾರಗಳಲ್ಲಿ ಒಂದಾಗಿರುವ ವಾಸುದೇವ ಎಂಬ ಹೆಸರನ್ನು ಇವರು ಹೊಂದಿದ್ದರು. ಭಾರತದಲ್ಲಿ ಮೌರ್ಯರ ಆಳ್ವಿಕೆಯ ನಂತರ ಪ್ರಮುಖವಾಗಿ ಕ್ರಿ.ಶ.100 ರಲ್ಲಿ ಶಾತವಾಹನ ಅರಸರು ಕಾಣಬರುತ್ತಾರೆ. ಇವರು ತಮ್ಮನ್ನು ಬ್ರಾಹ್ಮಣರೆಂದು ಕರೆದುಕೊಂಡಿದ್ದರು. ಇದರ ನಂತರ ಗುಪ್ತರು ಕ್ರಿ.ಶ.335 ರಲ್ಲಿ ಭಾರತದಲ್ಲಿ ಏಳಿಗೆಗೆ ಬಂದರು. ಇವರ ಕಾಲದಲ್ಲಿ ಬೌದ್ಧ ಧರ್ಮವು ರಾಜಾಶ್ರಯವನ್ನು ಕಳೆದುಕೊಂಡು ಭಾಗವತ ತತ್ವ ಪಂಥವು ಬೆಳೆಯಿತು. ಇದರಲ್ಲಿ ವಿಷ್ಣು ಪ್ರಮುಖ ದೇವತೆಯಾದನು. ಈತನನ್ನು ನಾರಾಯಣನೆಂದೂ ಕರೆಯುತ್ತಾರೆ. [19] ಇದಲ್ಲದೆ ವಿಷ್ಣುವನ್ನು ಭಾಗವತ ಎಂದೂ ಕರೆದಿರುವುದರಿಂದ ಶಾತವಾಹನರ ಅರಸೊತ್ತಿಗೆಯ ನಂತರ

ಬನವಾಸಿಯಿಂದ ಆ ಪ್ರದೇಶವನ್ನು ಆಳುತ್ತಿದ್ದ ಚುಟು ಕುಲಾನಂದನನ್ನು ಕಂಚಿಯ ಪಲ್ಲವರು ಸೋಲಿಸಿ ಕರ್ನಾಟಕದ ಭಾಗವನ್ನು ಆಳಲು ಪ್ರಾರಂಭಿಸಿದರು. ಇವರು ತಮ್ಮನ್ನು ಪರಮಭಾಗವತರೆಂದು ಕರೆದುಕೊಂಡಿದ್ದಾರೆ. [20] ಕನ್ನಡದ ಮೊಟ್ಟಮೊದಲ ಅರಸು ಮನೆತನದವಾದ ಕದಂಬ ಮನೆತನದವರು ಕ್ರಿ.ಶ.4ನೆಯ ಶತಮಾನದಲ್ಲಿ ಉತ್ತರ ಹಾಗೂ ಧಕ್ಷಿಣ ಕರ್ನಾಟಕದಲ್ಲಿ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿದರು. ಇಷ್ಟು ಹೊತ್ತಿಗಾಗಲೇ ಕರ್ನಾಟಕದಲ್ಲಿ ವೈಷ್ಣವ ಮತವು ವ್ಯಾಪಕವಾಗಿ ಹರಡಿತ್ತೆಂದು ಹೇಳಬಹುದು. ವಿಷ್ಣುವಿನ ವಿವಿಧ ಅವತಾರಗಳ ಪರಿಕಲ್ಪನೆ ಆಗಲೇ ಸಮಾಜದಲ್ಲಿ ರೂಪುಗೊಂಡಿದ್ದವು. ಗಂಗರ ಪ್ರಾರಂಭಿಕ ಶಾಸನಗಳಲ್ಲಿ ಏಕಪ್ರಕಾರವಾಗಿ ಅನಂತಪದ್ಮನಾಭನ ಸುತ್ತಿಯಿರುವುದು ತಿಳಿದುಬರುತ್ತದೆ. ಹರಿವರ್ಮ, ಕೃಷ್ಣವರ್ಮ, ವಿಷ್ಣುಗೋಪ ಅರಸರಲ್ಲಿ ಈ ದೇವರ ಹೆಸರನ್ನಿಟ್ಟುಕೊಂಡಿದ್ದರು. ಮುಂದೆ ವಿಶಾಲ ಕರ್ನಾಟಕದಲ್ಲಿ ಬಾದಾಮಿಯನ್ನು ತಮ್ಮ ರಾಜಧಾನಿಯಾಗಿ ನೋಡಿಕೊಂಡು ಆಳಿದ ಚಾಲುಕ್ಯರು, ಬಾದಾಮಿ ಚಾಲುಕ್ಯರೆಂದು ಹೆಸರು ಪಡೆದಿರುತ್ತಾರೆ. ಇವರು ಬನವಾಸಿಯ ಕದಂಬರನ್ನು ಸೋಲಿಸಿ ತಮ್ಮ ಆಡಳಿತವನ್ನು ಪ್ರಾರಂಭಿಸಿದರು. ಇವರ ಲಂಛನವಾದ ವರಾಹವು ವಿಷ್ಣುವಿನ ಅವತಾರಗಳಲ್ಲಿ ಒಂದು. ಅವರ ಶಾಸನಗಳು ಪ್ರಾರಂಭದಲ್ಲಿ ವಿಷ್ಣು ಸ್ತುತಿಯಿಂದ ಪ್ರಾರಂಭವಾಗಿರುವುದನ್ನು ಕಾಣಬಹುದು. ಚಾಳುಕ್ಯ ವಂಶದ ಮಂಗಳೇಶನನ್ನು ಅವನ ಒಂದು ಶಾಸನ ಪರಮ ಭಾಗವತನೆಂದು ಕರೆದಿದೆ. ಇವರು ವೈದಿಕ ಧರ್ಮವನ್ನು ಪೋಷಿಸಿ ಬಾದಾಮಿಯ ಗುಹಾದೇವಾಲಯಗಳಲ್ಲಿ ಪ್ರಸಿದ್ಧವಾದ ಮೂರನೆಯ ವೈಷ್ಣವ ಗುಹೆ ಮಹಾ ವಿಷ್ಣುವಿನದಾಗಿದೆ.

ಶ್ರೀರಾಮಾನುಜಾಚಾರ್ಯರು ವೈಷ್ಣವರಾಗಿದ್ದರು. ಶೈವನಾದ ಮೊದಲನೆ ಕುಲೋತ್ತುಂಗ ಚೋಳನಿಗೂ ಮತ ಪ್ರಸಾದದಲ್ಲಿ ಮನಸ್ತಾಪ ಉಂಟಾಗಿ ಇವರು ಶ್ರೀರಂಗ ಪ್ರದೇಶವನ್ನು ಬಿಟ್ಟು ಕರ್ನಾಟಕದ ದೋರಸಮುದ್ರ ಅರಸನಾದ ಬಿಟ್ಟಿದೇವನಲ್ಲಿ ಆಶ್ರಯ ಪಡೆದರು. ಬಿಟ್ಟಿದೇವನನ್ನು ಶ್ರೀ ವೈಷ್ಣವನನ್ನಾಗಿ ಮಾಡಿ ಅವನಿಗೆ ವಿಷ್ಣುವರ್ಧನನೆಂಬುದಾಗಿ ಹೆಸರಿಟ್ಟರು. ಕರ್ನಾಟಕದ ನಾನಾ ಭಾಗಗಳಲ್ಲಿ ವಿಷ್ಣುದೇವಾಲಯಗಳನ್ನು ನಿರ್ಮಿಸಿದರು. ರಾಜರುಗಳು ಮತ್ತು ಅಧಿಕಾರಿಗಳು ಎಲ್ಲಾ ಧರ್ಮಗಳಿಗೂ ಔಚಿತ್ಯ ಮತ್ತು ಪ್ರೋತ್ಸಾಹಿಸುವ ನೀತಿಯನ್ನು ಜಾರಿಗೆ ತಂದರು. ಇದೇ ಸರ್ಕಾರದ ನೀತಿಯಾಗಿತ್ತು. ಕ್ರಿ.ಶ.1318 ರ ಶಾಸನದ ಪ್ರಕಾರವಾಗಿ ಹೊಯ್ಸಳ ಮಹಾ ಪ್ರಧಾನ ಮಾಧವ ದಂಡನಾಯಕನ ಅಪ್ಪಣೆ ಪಡೆದು ಕೆಂಪಣ್ಣನೆಂಬುವನು ಶ್ರೀರಾಮ ದೇವರಿಗೆ ಮೂಲಸ್ಥಾನ ದೇವರಿಗೆ ಮತ್ತು ಹಯಿಗೆಯ ಗ್ರಾಮದೇವತೆಗೂ ಗದ್ದೆಗಳನ್ನು ದಾನ ಮಾಡಿದ ವಿಚಾರವನ್ನು ತಿಳಿಸಲಾಗಿರುತ್ತದೆ. ಚನ್ನರಾಯಪಟ್ಟಣ ತಾಲ್ಲೂಕಿನ ನಾನಾ ಊರುಗಳಲ್ಲಿ ವೈಷ್ಣವ ದೇವಾಲಯಗಳು ಕಂಡುಬರುತ್ತವೆ. ಉದಾಹರಣೆಗೆ ನುಗ್ಗೇಹಳ್ಳಿಯ

ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯ, ಆನೆಕೆರೆಯ ಚನ್ನಕೇಶವ ದೇವಾಲಯ, ವೈಷ್ಣವ ಧರ್ಮಕ್ಕೆ ಪೂರಕವಾದ ದೇವಾಲಯಗಳಾಗಿವೆ.

ಕ್ರಿ.ಶ.1168 ರಲ್ಲಿ ಶಾಂತಿಗ್ರಾಮದಲ್ಲಿ ವರಹ ನರಸಿಂಹ ದೇವರ ದೇವಾಲಯದ ದೀಪ ಅಲಂಕಾರಕ್ಕಾಗಿ ವಾರ್ಷಿಕವಾಗಿ ಒಂದು ಗದ್ಯಾಣ ಮತ್ತು ಎರಡು ಹಣ ವಾರ್ಷಿಕವಾಗಿ ನಿಗದಿಪಡಿಸಿರುವ ವಿಚಾರ ತಿಳಿದುಬರುತ್ತದೆ. ಕ್ರಿ.ಶ.1181 ರ ಚನ್ನರಾಯಪಟ್ಟಣ ಶಾಸನದಲ್ಲಿ ಹೊಯ್ಸಳ ಮಂತ್ರಿ ಮಾಚಿರಾಜನು ಶಾಂತಲದೇವಿ ಶಾಂತಲೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿಸಿ ದೇಚಶಕ್ತಿ ಮಗ ಶಾಂತಿ ಶಕ್ತಿಗೆ ಭೂಮಿ ದಾನ ಮಾಡಿದ ವಿಚಾರ ತಿಳಿದುಬರುತ್ತದೆ. ಇವರು ಶಿಷ್ಯ ಕಲ್ಯಾಣ ಶಕ್ತಿ ಕಲಿದೇವ ದೇವಸ್ಥಾನದ ಆಚಾಯಜ್ಞ ಎಲ್ಲಾ ಗೌಡ ಪೂಜೆಗಳು ದೇವರ ಸೇವೆಗೋಸ್ಕರ ಎಣ್ಣೆಗಾಣ ದೀಪಸ್ತಂಭ ದಾನ ನೀಡಿದ್ದಾರೆ. ಕ್ರಿ.ಶ.1246 ರಲ್ಲಿ ಸೋಮೇಶ್ವರನ ನುಗ್ಗೇಹಳ್ಳಿ ಶಾಸನದ ಪ್ರಕಾರ ಪ್ರಸನ್ನ ಕೇಶವ ನರಸಿಂಹ ಮತ್ತು ಗೋಪಾಲ ದೇವರುಗಳಗೋಸ್ಕರ ಈ ದೇವರುಗಳನ್ನು ಸೋಮನಾಥಪುರ ಅಗ್ರಹಾರದಲ್ಲಿ ಸ್ಥಾಪಿಸಿ ಬೊಮ್ಮಣ್ಣ ದಂಡನಾಯಕ ಕೆಲವು ಭೂಮಿಯನ್ನು ದಾನ ನೀಡಿದ ಬಗ್ಗೆ ತಿಳಿದುಬರುತ್ತದೆ. ಕ್ರಿ.ಶ.1252 ರ ಅಗ್ರಹಾರ ಬೆಳಗುಲಿ ಶಾಸನದಲ್ಲಿ ಕೇಶವ ದೇವರ ಸೇವೆಗೋಸ್ಕರ ತಗಡೂರ ಗ್ರಾಮವನ್ನು ಪಡೆದುಕೊಂಡು ವಾರ್ಷಿಕವಾಗಿ 40 ಗದ್ಯಾಣವನ್ನು ಕೊಟ್ಟ ಬಗ್ಗೆ ತಿಳಿದುಬರುತ್ತದೆ. ಈ ಮೇಲಿನ ಶಿಲಾ ಶಾಸನಗಳ ಪ್ರಕಾರ ರಾಜಮನೆತನದವರು ವೈಷ್ಣವ ಧರ್ಮಕ್ಕೆ ಪೂರಕವಾಗಿ ದೇವಾಲಯಗಳನ್ನು ನಿರ್ಮಿಸಿ ಶಿಲ್ಪಗಳನ್ನು ಪ್ರತಿಷ್ಠಾಪಿಸಿ ಧಾರ್ಮಿಕವಾಗಿ ಹಲವಾರು ಸುಧಾರಣೆಗಳನ್ನು ತಂದಿದ್ದಾರೆ. ಚನ್ನರಾಯಪಟ್ಟಣ ತಾಲ್ಲೂಕಿನ ವೈಷ್ಣವ ದೇವಾಲಯಗಳು ಅಂದಿನ ಕಾಲದಲ್ಲಿ ಶ್ರೀಮಂತ ಸಂಸ್ಥೆಗಳಾದವು. ಪ್ರಾಚೀನ ಕಾಲದಲ್ಲಿ ರೂಢಿಯಲ್ಲಿದ್ದ ಪೂಜಾಪದ್ಧತಿಗಳು ನಡೆಯುತ್ತಿದ್ದವು. ನಾನಾರೀತಿಯ ಉತ್ಸವಗಳು ಪ್ರಾರಂಭವಾದವು ನೂರಾರು ಜನರಿಗೆ ಅನ್ನದಾನ ಏರ್ಪಾಡು ಮಾಡಲಾಗಿತ್ತು. ದೇವರನ್ನು ಒಲಿಸಿಕೊಳ್ಳಲು ಜಪ, ಹೋಮ, ಧ್ಯಾನ ಮತ್ತು ಅರ್ಚನೆ ಎಂಬ ನಾಲ್ಕು ಬಗೆಯ ಪೂಜೆ ಸಂಪ್ರದಾಯಗಳನ್ನು ಮುಖ್ಯವಾಗಿ ಪರಿಗಣಿಸಿತು.

ದೇವಾಲಯಗಳಲ್ಲಿ, ನಡೆಯುವಂತಹ ಪೂಜೆ ಪುನಸ್ಕಾರಗಳನ್ನು ಕೆಲವೊಂದು ಶಾಸನಗಳಲ್ಲಿ ತಿಳಿಸಲಾಗಿರುತ್ತದೆ. ಆಧಾರದಿಂದ ದೇವರ ಕಾರ್ಯದ ಸೇವೆಯಲ್ಲಿ ಪೂಜಾ ವಿಧಿವಿಧಾನಗಳನ್ನು ಹೆಸರಿಸಬಹುದು. ನಿತ್ಯನೈವೇದ್ಯಗಳು ದೀಪಾರಾಧನೆ, ಫಲಪೂಜಾ ನೈಮಿತ್ತಿಕ ಪಂಚಪರ್ವ, ಅಮೃತಪಡಿ, ಅಂಗ ವೈಭವ, ರಂಗವೈಭವ, ನಿತ್ಯಮಹಾವಾದ್ಯ,

ಮಾಸಪೂಜೆ, ಪುಣ್ಯಾತಿಥಿಗಳಲ್ಲಿ ಮಾಡುವ ಮಾಹಾಪೂಜೆ, ನೈವೇದ್ಯ ಇತ್ಯಾದಿ ಪೂಜಾ ಕೈಂಕರ್ಯಗಳು ನಡೆಯುತ್ತಿದ್ದವೆಂದು ತಿಳಿದುಬರುತ್ತದೆ.

ದೇವಾಲಯದಲ್ಲಿ ದೇವರ ಕಾರ್ಯವನ್ನು ನೋಡಿಕೊಳ್ಳಲು ಬ್ರಾಹ್ಮಣ ಅರ್ಚಕರಿರುತ್ತಿದ್ದರು. ಇವರು ದೇವರ ಪೂಜೆ ಪುನಸ್ಕಾರಗಳನ್ನು ನೆರವೇರಿಸಿ ದೇವರ ಉತ್ಸವಗಳನ್ನು ಕರಾರುವಕ್ಕಾಗಿ ನಡೆಸಿಕೊಂಡು ಬರುತ್ತಿದ್ದರು. ದೇವಾಲಯದಲ್ಲಿ ತ್ರಿಕಾಲ ಪೂಜೆಯು ನಡೆಯುತ್ತಿತ್ತು. ನಿತ್ಯಪೂಜೆ, ನಿತ್ಯ ಪೂಜೆಯಲ್ಲಿ ಪ್ರಮುಖವಾಗಿ ಆವಾಹನ, ಅರ್ಚನ ನಿವೇದನೆ ಎಂಬ ತ್ರಿವಿಧೋಪಚಾರಗಳು ನಡೆಯುತ್ತಿದ್ದವು. ದೀಪಾರಾಧನೆಯಲ್ಲಿ ಎಣ್ಣೆ ದೀವಿಗೆ ತುಪ್ಪದ ದೀವಿಗೆಗಳನ್ನು ದೇವರ ಮುಂದೆ ಉರಿಸುತ್ತಿದ್ದರು. ನೈವೇದ್ಯ ದೇವಾಲಯಗಳ ಪೂಜೆಯ ಸಂದರ್ಭದಲ್ಲಿ ದೇವರಿಗೆ ನೈವೇದ್ಯ ಅರ್ಪಿಸುವುದು ಒಂದು ಪದ್ಧತಿಯಾಗಿದೆ. ಇದರಲ್ಲಿ ನೈವೇದ್ಯಕ್ಕೆ ಬೇಕಾದ ತಿನಿಸುಗಳನ್ನು ಹಲವಾರು ಶಾಸನದಲ್ಲಿ ದಾನಿಗಳೇ ಮಾಡಬೇಕಾದ ನೈವೇದ್ಯದ ಬಗ್ಗೆ ಹೇಳಿರುವುದು ಕಂಡುಬರುತ್ತದೆ. ವಿಶೇಷ ಪುಣ್ಯಾತಿಥಿಗಳಲ್ಲಿ ಮಹಾಪೂಜೆ ಮಹಾ ನೈವೇದ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ದೊರಕಿರುವುದು ಕಂಡುಬರುತ್ತದೆ. ನೈವೇದ್ಯವು ಮಹಾ ಪ್ರಸಾದವೆಂದು ಅಂದಿನ ಜನರ ನಂಬಿಕೆಯಾಗಿತ್ತು. ಯಾವುದೇ ದೇವಾಲಯಗಳಿಗೆ ಭೇಟಿ ನೀಡಿದಾಗ ದೇವರ ದರ್ಶನವಾದ ನಂತರ ನೈವೇದ್ಯವನ್ನು ನೀಡುವ ಪರಿಪಾಠ ಇಂದಿಗೂ ಉಳಿದುಕೊಂಡು ಬಂದಿದೆ. ಈ ಹಿನ್ನೆಲೆಯಿಂದ ಎಲ್ಲಾ ಪೂಜೆಗಳ ಜೊತೆಗೆ ನೈವೇದ್ಯಕ್ಕೆ ಕೂಡ ದತ್ತಿಗಳನ್ನು ಬಿಟ್ಟಿರುವುದು ತಿಳಿದುಬರುತ್ತದೆ. ಸಾಮಾನ್ಯವಾಗಿ ಅಮಾವಾಸ್ಯೆ ಪೌರ್ಣಿಮಚೌತಿ, ಏಕಾದಶಿ, ದ್ವಾದಶಿ ಮುಂತಾದ ನಿರ್ದಿಷ್ಟ ತಿಥಿಗಳಲ್ಲಿ ನಡೆಯುತ್ತಿದ್ದವು. ವೇದಾಧ್ಯಯ ವೈಷ್ಣವ ದೇವಾಲಯಗಳಲ್ಲಿ ವಿಷ್ಣುವಿನ ಶ್ಲೋಕವನ್ನೊಳಗೊಂಡ ವೇದಾಪಾರಾಯಣ ನಡೆಯುತ್ತಿದ್ದಿತು. ವೈಷ್ಣವ ದೇವಾಲಯಗಳಲ್ಲಿ ಪ್ರತಿಕಾಲದ ಪೂಜೆಯು ನೀರಾಜನ ಅಂದರೆ ಮಹಾಮಂಗಳಾರತಿ ಸಮಯದಲ್ಲಿ ವಾದ್ಯಗಳನ್ನು ಬಾರಿಸುವ ಅಪ್ಧ್ಧತಿ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದುದಾಗಿದೆ. ದೇವಾಲಯಗಳಲ್ಲಿ ಪಂಚಮಹಾ ವಾದ್ಯಗಳನ್ನು ಬಾರಿಸುತ್ತಿದ್ದರು. ಅವುಗಳಲ್ಲಿ ಕೊಂಬು, ತಮಟೆ, ಶಂಖಭೇರಿ ಮತ್ತು ಜಯಘಂಟೆ ಪ್ರಮುಖವಾಗಿದೆ. ಈ ಎಲ್ಲಾ ಆಧಾರಗಳಿಂದ ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿವೆ.

### ವೀರಶೈವ ದೇವಾಲಯಗಳು

ಶೈವ ಮತ್ತು ವೈಷ್ಣವ ದೇವಾಲಯಗಳ ಜೊತೆಯಲ್ಲಿ ವೀರಶೈವ ದೇವಾಲಯಗಳು ಸಹ ಧಾರ್ಮಿಕ ಕೇಂದ್ರವಾಗಿ ನಿರ್ಮಿತಗೊಂಡಿದೆ. ವೀರಶೈವ ದೇವಾಲಯಗಳನ್ನು ನೋಡಬೇಕಾದರೆ ಮಠಮಾನ್ಯಗಳನ್ನು ನೋಡಬೇಕಾಗುತ್ತದೆ. ಮಠ ಎಂದರೆ ಮಠಚ್ಛಾತ್ರಾದಿ ನಿಲಯ ಎಂಬ

ಅಮರಕೋಶದ ಮಾತಿನಲ್ಲಿ ವಿದ್ಯೆ ಕಲಿಯುವ ನೆಲೆ, ಆಶನವನ್ನು ನೀಡುವ ನೆಲೆ ಎಂಬುದಿದೆ. ವೀರಶೈವ ಧರ್ಮ ಪರಂಪರೆಯಲ್ಲಿ ಮಠೀಯ ಗುರುಪೀಠಗಳನ್ನು ಸಿಂಹಾಸನ ಎಂದು ಕರೆಯುತ್ತಾರೆ. ಧರ್ಮ ಸಂಸ್ಥಾಪನಾಚಾರ್ಯರ ಗುರುಪೀಠಗಳಿಗೆ ಸಿಂಹಾಸನ ರೂಢಿಸಂಪ್ರದಾಯಿಕವಾಗಿ ಐದು ಪೀಠಗಳನ್ನು ಪಂಚಸಿಂಹಾಸನ, ಪಂಚಪೀಠವೆನ್ನುವುದುಂಟು. ಈ ಭಾಗದಲ್ಲಿ ಅನೇಕ ಗುರುಪರಂಪರೆಯುಂಟು.

ಕ್ರಿ.ಶ.1587 ರಲ್ಲಿ ಚನ್ನರಾಯಪಟ್ಟಣದ ಸ್ತಂಭ ಶಾಸನದ ಪ್ರಕಾರ ಫರಂಗಿ ಮಠ ರಾಮೇಶ್ವರಗುಡಿ ಮರದು ಸಿರಸಿನ ಬಸವ ಪ್ರತಿಷ್ಠೆ ಹಾಗೂ ಕೊಳ ಸಹಿತವಾಗಿ ಪಡುವಣ ಮಠವನ್ನು ನಿರ್ಮಿಸಿದ ಕುರಿತು ತಿಳಿದುಬರುತ್ತದೆ. ಚನ್ನರಾಯಪಟ್ಟಣದ ದೊಡ್ಡಕೊಳದ ಮಠವನ್ನು ಕಾನ್‌ಕಾರತನ (ಕಾಣಿಕಾರನ)ಹಳ್ಳಿಯ ಪ್ರಭು ಆಲೂರ ಭೀಮನ ಆಣತಿಯಂತೆ ಪಾತ್ಸಾಹ ಎಂಬುವನು ಕಲ್ಲಿನಕೋಟೆಯ ಜೊತೆಗೆ ಮಂಟಪ ಕೊಳ ಸಹಿತವಾಗಿ ಕಟ್ಟಿಕೊಟ್ಟ ಬಗ್ಗೆ ಶಾಸನಾಧಾರಗಳಿವೆ. ಕ್ರಿ.ಶ.1647 ರಲ್ಲಿ ಇದೇ ಕಾಣಿಕಾರನಹಳ್ಳಿಯ ಪ್ರಭುದಒಡ್ಡಯ್ಯ ಎಂಬುವನು ಚನ್ನರಾಯಪಟ್ಟಣದಲ್ಲಿ ಕಲ್ಲಿನಕೋಟೆ ಕಟ್ಟಿಸಿದ. ಆ ಸಮಯದಲ್ಲಿ ಅವನ ಪಾರುಪತ್ಯೆಗಾರ ಕಲಸುಗೆರೆಯ ಸ್ಥಳದ ಕೆಂಪಣ್ಣಗೌಡನು ಕಲ್ಲುಮಠ ಹಾಗೂ ಕೊಳವನ್ನು ಕಟ್ಟಿಸಿದ.[21] ಕ್ರಿ.ಶ.1664 ರ ಭಕ್ತರ ಹಳ್ಳಿ ಶಾಸನವು ಆಚರಣಾವಾಚಿಯಾಗಿ ವೀರಶೈವ ಮಠವಿರುವುದರ ಬಗ್ಗೆ ತಿಳಿದುಬರುತ್ತದೆ. ಭಕ್ತರಹಳ್ಳಿ ಮಠ ಜಾಸ್ತಿಸಂಖ್ಯೆಯಲ್ಲಿ ಜನರು ಇರುವುದರ ಬಗ್ಗೆ ತಿಳಿಸುತ್ತದೆ. ಕ್ರಿ.ಶ.16–17ನೇ ಶತಮಾನದ ಮೂಡ್ಲಹಳ್ಳಿ ಶಿಲಾಶಾಸನದ ಪ್ರಕಾರವಗಿ ಆಲೂರಿನ ಮಠದ ಗುರುವಿಗೆ ಶಿವಪೂಜೆ, ಜಪತಪ, ಕಂಗಮಾರ್ಚನೆ ಗ್ರಾಮ ಒಂದನ್ನು ದಾನ ನೀಡಿರುವುದರ ಬಗ್ಗೆ ತಿಳಿಸಲಾಗಿದೆ. ಅಲ್ಲದೆ ಗಡಿಲಿಂಗಮುದ್ರೆಯನ್ನು ತಿಳಿಸಲಾಗಿರುತ್ತದೆ. ಕೆಲವೊಂದು ಮಠಗಳು ಪ್ರಸ್ತುತ ತಮ್ಮ ಕಾರ್ಯ ಕಾಲಪದಲ್ಲಿ ತೊಡಗಿದ್ದು, ಪ್ರಾಚೀನ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುತ್ತಿದೆ. ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಕಂಡುಬರುವ ಕೆಲವೊಂದು ಧಾರ್ಮಿಕ ಆಚರಣೆಗಳು ದೇವಾಲಯಗಳನ್ನು ಸೇರಿಸಿಕೊಂಡು ಅಂದಿನ ಜನಪದ ಸಂಸ್ಕೃತಿಯನ್ನು ಬೆಳೆಸಿಕೊಂಡಿದೆ. ದೇವಾಲಯಗಳಲ್ಲಿ ಪ್ರಾಗೈತಿಹಾಸಿಕ ಹಿನ್ನೆಲೆಯುಳ್ಳ ಚಿತ್ರಗಳು ಕಂಡುಬರುತ್ತವೆ. ಸಾಮಾಜಿಕ ಸನ್ನಿವೇಶಕ್ಕೆ ಅನುಗುಣಾಅಗಿ ಮಠಮಾನ್ಯಗಳು ಒಂದಕ್ಕೊಂದು ಸ್ಪಂದಿಸಿ ಶೈಕ್ಷಣಿಕ ವಸತಿ ಶಾಲೆಗಳನ್ನು ನಡೆಸಿಕೊಂಡು ಹೋಗುತ್ತಿರುವಂತಹ ಮಠಗಳು ಸಹ ಈ ನೆಲೆಯಲ್ಲಿವೆ. ಈ ಮೇಲಿನ ವೀರಶೈವ ಧರ್ಮಗಳಿಗೆ ಪೂರಕವಾಗಿ ಪೂಜೆ ಪುನಸ್ಕಾರಗಳು ನಡೆಯುವುದರಿಂದ ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿವೆ. ಅಂದಿನ ಕಾಲದಲ್ಲಿ ರಾಜ–ಮಹಾರಾಜರುಗಳ ಉದ್ದೇಶವೇನೆಂದರೆ, ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸುವುದು ಆಗಿತ್ತು. ಅದರ

ಜೊತೆಯಲ್ಲಿ ಧರ್ಮ ಸಮನ್ವಯವನ್ನು ಬೆಳೆಸುವಲ್ಲಿ ಅವರು ಕೈಗೊಂಡ ಕಾರ್ಯಕ್ರಮಗಳು ಉತ್ತಮವಾಗಿದ್ದು. ಧಾರ್ಮಿಕ ಬೆಳವಣಿಗೆಯಲ್ಲಿ ದೇವಾಲಯಗಳನ್ನು ನಿರ್ಮಿಸಿ ಅವುಗಳ ಜೀರ್ಣೋದ್ಧಾರ ಕಾರ್ಯಕ್ಕೂ ಸಹ ದಾನದತ್ತಿಗಳನ್ನು ನೀಡುತ್ತಿದ್ದರು. ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹವನ್ನು ನೀಡುವುದು ಸಹ ಕಂಡುಬರುತ್ತದೆ. ಈ ಎಲ್ಲಾ ಬೆಳವಣಿಗೆಯಿಂದ ದೇವಾಲಯಗಳು ಮಠಗಳು ಧಾರ್ಮಿಕ ಕೇಂದ್ರಗಳಾಗಿವೆ. ಸಾಮಾನ್ಯವಾಗಿ ವೀರಶೈವ ಮಠಗಳು ದೇವಾಲಯಗಳ ಅವಿಭಾಜ್ಯ ಅಂಗವಾಗಿರುವುದು ಕಂಡುಬರುತ್ತದೆ. ಮಠಗಳು ಸಹ ದೇವಾಲಯಗಳ ನಿರ್ವಹಣೆ ಕೇಂದ್ರಗಳಾಗಿದ್ದವು. ಶ್ರೀ ಮಠಗಳಿಗೆ ಅಧಿಕಾರ ಇರುತ್ತಿದ್ದ ಮಠಗಳು ದೇವಾಲಯದ ಆಡಳಿತದ ಜೊತೆಗೆ ವಿದ್ಯಾಕೇಂದ್ರವಾಗಿಯೂ ಅನ್ನಛತ್ರವಾಗಿಯೂ ಇರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಮಠಗಳು ಕಾಳಾಮುಖ ಶೈವ ಸಂಪ್ರದಾಯದಲ್ಲಿ ನಿರ್ಮಾಣವಾದ ದೇವಸ್ಥಾನಗಳು ಚನ್ನರಾಯಪಟ್ಟಣ ಪ್ರದೇಶಗಳಲ್ಲಿ ಕಂಡುಬರುತ್ತದೆ. ಮಠಗಳಿಗೆ ಸ್ಥಾನಪತಿಗಳ ಹೆಸರುಗಳಿಂದಲೇ ಕರೆಯಲಾಗುತ್ತಿತ್ತು. ಕೆಲವೊಂದು ಸಾರಿ ಮಠಗಳು ವಂಶಪಾರಂಪರ್ಯವಾಗಿ ಬೆಳೆದುಕೊಂಡು ಬಂದಿರುವಂತಹ ದಾಖಲೆಗಳು ಸಹ ಇವೆ. ಇದರಲ್ಲಿ ಗುರುಪರಂಪರೆಯನ್ನು ಕೂಡ ಕಾಣಬಹುದಾಗಿದೆ. ಮಠಮಾನ್ಯಗಳನ್ನು ಮೂಲಸ್ಥಾನಗಳೆಂದು ಕರೆಯಲಾಗಿದೆ. ಚಿದಾನಂದಮೂರ್ತಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವಂತೆ ಸಂಸ್ಥೆ ದೃಷ್ಟಿಯಿಂದ ನೋಡಿದರೆ ದೇವಸ್ಥಾನವು ಮಠವು ವಿಭಿನ್ನವಾಗಿರುವುದರಿಂದ ಇವೆರಡು ಬೇರೆ ಬೇರೆಯಾಗಿದ್ದರೂ ಒಂದೇ ವಿಚಾರವನ್ನು ತಿಳಿಸುತ್ತವೆ.[22]

ಜೈನಧರ್ಮದ ಧಾರ್ಮಿಕ ಹಿನ್ನೆಲೆಯನ್ನು ನೋಡಿದರೆ ಪ್ರಾಯಶಃ ಕರ್ನಾಟಕದ ಮಟ್ಟಿಗೆ ಜೈನಧರ್ಮದ ನಂಬಿಕೆಗಳೇ ಅತ್ಯಂತ ಪ್ರಾಚೀನ ಕಾಲದ ದಾಖಲೆಗಳು ಎಂದು ಹೇಳಬಹುದಾಗಿದೆ. ಜೈನಧರ್ಮದ ಪರಂಪರೆಯ ಪ್ರಕಾರ ಚಂದ್ರಗುಪ್ತನು ಶೃತಕೇವಲಿ ಭದ್ರಬಾಹುವಿನೊಂದಿಗೆ ಮತ್ತು ಆತನ ಸ್ನೇಹಿತರೊಂದಿಗೆ ಉತ್ತರಭಾರತದ ಪಾಟಲೀಪುತ್ರದಿಂದ ಹಾಸನಜಿಲ್ಲೆಯ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿ ನೆಲೆಸಿದರು ಎಂಬ ವಿಚಾರ ಹಲವಾರು ಪ್ರಮುಖ ದಾಖಲೆಗಳಿಂದ ತಿಳಿದುಬರುತ್ತದೆ. ಬಹುಶಃ ಈ ಘಟನೆ ನಡೆದಿರುವುದು ಕ್ರಿ.ಪೂರ್ವ. 4ನೇ ಶತಮಾನದಲ್ಲಿ ಎನ್ನಬಹುದು. ಚಂದ್ರಗುಪ್ತನು ಇಲ್ಲಿಯೇ ಸಲ್ಲೇಖನ ವ್ರತ ಪ್ರಾರಂಭಿಸಿ ಇಲ್ಲಿಯೇ ಪ್ರಾಣತ್ಯಾಗ ಮಾಡಿದನು ಎಂದು ಕೂಡ ತಿಳಿದುಬರುತ್ತದೆ. ನಂತರ ಕಾಲದಲ್ಲೂ ಹಲವಾರು ರಾಜಮನೆತನಗಳು ಅಧ್ಯಾತ್ಮಿಕವಾಗಿ ಜೈನಧರ್ಮವನ್ನು ಪೋಷಿಸಿ ಬೆಳೆಸಿದರು. ಹಾಸನಜಿಲ್ಲೆಯಲ್ಲಿ ಜೈನಧರ್ಮವು ಒಂದು ಪ್ರಮುಖ ಪ್ರಬಲ ಧರ್ಮವಾಗಿ ಬೆಳೆಯಿತು. [23] ಕರ್ನಾಟಕಕ್ಕೆ ಬಂದ ಹೊಸ ಜೈನ ಧರ್ಮ ಸುಮಾರು ಒಂದು ಸಾವಿರ ವರ್ಷಗಳವರೆಗೆ ಒಂದು

ಪ್ರಬಲ ಪಂಥವಾಗಿ ಬೆಳೆಯಿತು. [24] ಕರ್ನಾಟಕಕ್ಕೆ ಕ್ರಿ.ಪೂರ್ವದಲ್ಲಿಯೇ ಜೈನರು ವಲಸೆ ಬಂದರೆಂದು ಪ್ರತೀತಿ ಇದ್ದರೂ, ಇದರ ವಾಸ್ತುಶಿಲ್ಪಗಳು ದೊರೆಯುವುದು ಕ್ರಿ.ಶ.6–7ನೇ ಶತಮಾನದಿಂದ ಇತ್ತೀಚಿಗೆ ಹಾಸನ ಜಿಲ್ಲೆಯಲ್ಲಿ ಕ್ರಿ.ಶ.5–6ನೇ ಶತಮಾನದಿಂದ ಕ್ರಿ.ಶ.13ನೇ ಶತಮಾನದವರೆಗೂ ದೇಶದ ನಾನಾ ಭಾಗಗಳನ್ನು ಜೈನಯತಿಗಳು ವಾಸಕ್ಕಾಗಿಯೇ ಜಿನಮಂದಿರಗಳಗಾಗಿಯೇ ಗುಹೆಗಳನ್ನು ಮಾರ್ಪಡಿಸಿರುವುದು ಕಂಡುಬರುತ್ತದೆ. [25] ಕರ್ನಾಟಕದ ಹಾಸನಜಿಲ್ಲೆಯಲ್ಲಿ ಅನೇಕ ರಾಜಮನೆತನಗಳು ನೀಡಿದ ಪ್ರೋತ್ಸಾಹದಿಂದ ಜೈನ ವಾಸ್ತುಶಿಲ್ಪ ದೇವಾಲಯಗಳು, ಗುಹೆಗಳು, ಬಸದಿಗಳು, ಶಿಲ್ಪಗಳು, ಮಾನಸ್ತಂಭಗಳು ಶಾಸನಗಳು ವಿಸ್ತಾರವಾಗಿಯೂ–ವೈವಿಧ್ಯಮಯವಾಗಿಯೂ ಬೆಳೆಯುವುದಕ್ಕೆ ಕಾರಣವಾಯಿತು. ತಲಕಾಡಿನ ಗಂಗರ, ಜೈನವಾಸ್ತುಶಿಲ್ಪ ವಿಫಲವಾಗಿತ್ತು. ಶ್ರವಣಬೆಳಗೊಳದ ದೊಡ್ಡಬೆಟ್ಟದಲ್ಲಿ ಜೈನಮೂರ್ತಿ ಶಿಲ್ಪದ ಪರಾಕಾಷ್ಠೆಯಾದ ಗೊಮ್ಮಟೇಶ್ವರನ ಶಿಲ್ಪ ಚಾವುಂಡರಾಯನಿಂದ ನಿರ್ಮಾಣವಾಯಿತು. [26] ಶ್ರವಣಬೆಳಗೊಳದಲ್ಲಿ ಜೈನಬಸದಿಗಳು ನಿಸದಿ ಕಲ್ಲು ಶಾಸನ ಶಿಲ್ಪಗಳು ಸುಂದರ ಹಾಗೂ ವೈರಾಗ್ಯಪರ ಜನರ ಮೂರ್ತಿ ಶಿಲ್ಪಗಳು ಕಾಮೋತ್ಸರ್ಗದಲ್ಲಿರುವ ಗೊಮ್ಮಟ ಶಿಲ್ಪ ಬೃಹದಾಕಾರದ ಮಾನಸ್ತಂಭಗಳು ಕಲಾಕುಸುರಿ ಕೆತ್ತನೆಯಿಂದ ಕೂಡಿದ ಯಕ್ಷಯಕ್ಷಿಯರ ಮೂರ್ತಿ ಶಿಲ್ಪಗಳು, [27] ಜೈನ ವಾಸ್ತುವಿನಲ್ಲಿ ಕೆಲವು ಜೈನ ಧರ್ಮದ ಕಥಾನಿರೂಪಣಾ ಶಿಲ್ಪಗಳನ್ನು ಬಿಟ್ಟರೆ ಉಳಿದಂತೆ ವಾಸ್ತುರೀತಿಯ ಬಸದಿಗಳು ಕಂಡುಬರುತ್ತವೆ. ಜೈನ ಬಸದಿಗಳ ನಿರ್ಮಾಣ ಗಂಗರ ಕಾಲದಲ್ಲಿ ಮತ್ತು ಹೊಯ್ಸಳರ ಕಾಲದಲ್ಲಿ ಶ್ರವಣಬೆಳಗೊಳದಲ್ಲಿ ಜನಪ್ರಿಯವಾಗಿತ್ತೆಂದು ತಿಳಿದುಬಂದಿರುವ ವಿಚಾರವಾಗಿದೆ. ಶ್ರವಣಬೆಳಗೊಳದಲ್ಲಿ ಗಂಗರ ಮಂತ್ರಿ ಚಾವುಂಡರಾಯನು ನಿರ್ಮಿಸಿದ ಪಾರ್ಶ್ವನಾಥ ಬಸದಿ ಒಂದು ಉತ್ತಮ ಉದಾಹರಣೆಯಾಗಿದೆ.

ಕ್ರಿ.ಶ.4ನೇ ಶತಮಾನದ ಸಮಯಕ್ಕೆ ವೈದಿಕ ಮತಗಳ ಆಚರಣೆಯಲ್ಲಿ ಮತ ಬೇಧಗಳು ಉಂಟಾಗಿ ದೇವಾಲಯಗಳ ನಿರ್ಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಅದೇ ಸಮಯದಲ್ಲಿ ಜೈನ ಧರ್ಮವು ಸ್ತೂಪದ ವಾಸ್ತು ರಚನೆಯನ್ನು ನಿಲ್ಲಿಸಿ ಚೈತ್ಯದ ಹಂತವನ್ನು ಮಾಡತೊಡಗಿದರು. ವೈದಿಕ ಧರ್ಮದ ಪರಂಪರೆಯ ದೇವಾಲಯಗಳ ವಾಸ್ತುರಚನೆಯಂತೆ ತಮ್ಮ ದೇವಾಲಯಗಳ ವಾಸ್ತುರಚನೆಯ ಅನುಕರಣೆಯನ್ನು ಸೇರಿಸಿಕೊಂಡರು.

ಕ್ರಿ.ಶ.3–4ನೇ ಶತಮಾನದಲ್ಲಿ ಮುನಿಸಂಘಗಳಲ್ಲಿ ಗಣಗಳ ರಚನೆ ಮಾಡಿ, ಸಂಘದ ವ್ಯವಸ್ಥೆಯನ್ನು ತಂದರು. ಗುಣಪ್ರಮುಖರು ನಿಶ್ಚಿತ ಸ್ಥಳಗಳಲ್ಲಿ ನೆಲೆಸಿ ಧರ್ಮ ಪ್ರಭಾವನೆಗೆ ತೊಡಗಿರುವುದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಬಸದಿ ಎಂಬ ಪದ ಪ್ರಯೋಗವು

ಮೊದಲಿಗೆ ಬಂದದ್ದು ಕ್ರಿ.ಶ.8ನೇ ಶತಮಾನದ ಶ್ರವಣಬೆಳಗೊಳದ ಶಿವಮಾರನ ಬಸದಿ ಶಾಸನದಿಂದ ವ್ಯಕ್ತವಾಗುತ್ತದೆ. [28]

ಕ್ರಿ.ಶ.6–7ನೇ ಶತಮಾನದಿಂದ ಕೆಲವೊಂದು ಧಾರ್ಮಿಕ ಆಚರಣೆಯು ಬೆಳೆದು ಬಂದಿದ್ದು, ನೇಮಿನಾಥ ಜಿನ ಶಾಸನ ದೇವತೆಯಾದ ಕೂಷ್ಮಾಂಡಿನಿಯು ಶ್ರವಣ ಬೆಳಗೊಳ ಕ್ಷೇತ್ರದ ದೇವತೆಯಾಗಿದ್ದಾಳೆ. ಒಂದು ಗರ್ಭಗೃಹದಲ್ಲಿ ನೇಮಿನಾಥ ಜಿನನ ಬಿಂಬವು ಇರುತ್ತದೆ.

ಕ್ರಿ.ಶ.9ನೇ ಮತ್ತು 10ನೇ ಶತಮಾನ ಕಾಲಕ್ಕೆ ಆದಿನಾಥ, ಚಂದ್ರನಾಥ, ನೇಮಿನಾಥ, ಪಾರ್ಶ್ವನಾಥ, ಮಹಾವೀರ, ತೀರ್ಥಂಕರ ಅನೇಕ ಬಸದಿಗಳು ನಿರ್ಮಾಣಗೊಂಡವು. ಯಕ್ಷ ಆರಾಧನೆಯು ಶ್ರಾವಕರ ಮೇಲೆ ಬೀರಿದ ಪ್ರಭಾವದ ಪ್ರರಿಣಾಮವಾಗಿ ಬಸದಿಗಳಲ್ಲಿ ಹಲವಾರು ಉತ್ಸವಗಳು ನಡೆದವು. ಬಸದಿಗಳು ದಾನ ಧರ್ಮದ ಕೇಂದ್ರವಾಗಿ ವಿದ್ಯಾಕೇಂದ್ರವಾಗಿ ಜೈನ ಸಮಾಜದ ಪ್ರತೀಕವಾಗಿ ರೂಪುಗೊಂಡಿದೆ ಎನ್ನಬಹುದು.

ಯಾತ್ರಿಕರ ಹೆಚ್ಚಾದಂತೆ ಶ್ರವಣಬೆಳಗೊಳ ಸಾಧನಾ ತಾಣವಾಗಿ ಇಂದಿಗೂ ಉಳಿದಿದೆ. ಧಾರ್ಮಿಕ ಸಮಾಜದ ಚಟುವಟಿಕೆಯ ಕೇಂದ್ರವಾಗಿ ಬೆಳೆದುಕೊಂಡಿದೆ. ಶ್ರವಣ ಬೆಳಗೊಳದ ದೊಡ್ಡಬೆಟ್ಟ ಯಾತ್ರಿಕರ ಆಕರ್ಷಣೆಯ ಧಾರ್ಮಿಕ ಕೇಂದ್ರವಾಗಿದೆ. ವಿವಿಧ ರಾಜವಂಶಗಳು ಅರಸರುಗಳು ಹಾಕಿಸಿರುವ ಶಾಸನಗಳು ಸಾಕಷ್ಟು ಸಂಖ್ಯೆ ಕಂಡುಬಂದಿದೆ. ಗಂಗ, ರಾಷ್ಟ್ರಕೂಟ, ಚಾಲುಕ್ಯ ಹೊಯ್ಸಳ, ವಿಜಯನಗರ, ಚಂಗಾಳ್ವ, ಕೊಂಗಾಳ್ವ, ಮೈಸೂರು ಒಡೆಯರ್ ಮುಂತಾದವರನ್ನು ಉದಾಹರಿಸಬಹುದು. ಧಾರ್ಮಿಕ ಪರಂಪರೆಯ ಮತ್ತು ಐತಿಹಾಸಿಕ ಪರಂಪರೆಗಳೆರಡೂ ಮೇಳೈಸಿಕೊಂಡು ಬಂದಿರುವುದು ಶ್ರವಣ ಬೆಳಗೊಳದ ವಿಶೇಷವಾಗಿದೆ.

ಶ್ರವಣ ಬೆಳಗೊಳದಲ್ಲಿ ಬಾಹುಬಲಿಗೆ ಹನ್ನೆರಡು ವರ್ಷಗಳಿಗೊಮ್ಮೆ ಮಾಡುವ ಮಹಾಮಸ್ತಕಾಭಿಷೇಕವು ಜಗತ್‌ಪ್ರಸಿದ್ಧವಾಗಿದ್.ಎ ಮೊತ್ತಮೊದಲನೆಯ ಮಹಾಮತಕಾಭಿಷೇಕ ಗಂಗರ ಮಂತ್ರಿ ಚಾವುಂಡರಾಯನಿಂದ ನೆರವೇರಿತ್ತು. 1595 ರಲ್ಲಿ ಮೈಸೂರಿನ ಅರಸು ದೇವರಾಜ ಒಡೆಯರ್‌ರವರು ನಡೆಸಿದರು. ನಂತರ ಚಿಕ್ಕದೇವರಾಯ ಒಡೆಯರ್, ಮುಮ್ಮಡಿ ಕೃಷ್ಣರಾಜ ಒಡೆಯರ್ ಸಹಯೋಗದಿಂದ ಮಸ್ತಕಾಭಿಷೇಕಗಳಾದವು. 1910 ರಲ್ಲಿ ಶ್ರೀಮಠದ ಶಾತರಾಜಸ್ವಾಮಿಗಳಿಂದ 1925 ರಲ್ಲಿ ಶೆಲ್ವಸರು ಸ್ವಾಮಿಗಳ ಕಾಲದಲ್ಲಿ 1953 ಮತ್ತು 1967 ರಲ್ಲಿ ಭಟ್ಟಾಕಲಕ ಸ್ವಾಮಿಗಳಿಂದಲೂ ತಡೆದವು. 1981 ರಲ್ಲಿ ಬಾಹುಬಲಿಯ ಪ್ರತಿಷ್ಠಾಪನೆಯ ಸಾವಿರ ವರ್ಷಗಳಾದ ಕಾರಣ ಸಹಸ್ರಾಬ್ಧ ಪ್ರತಿಷ್ಠಾಪನೆಯ ಅಂಗವಾಗಿ ಮಹಾಮಸ್ತಕಾಭಿಷೇಕವು ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳವರ ನೇತೃತ್ವದಲ್ಲಿ ನಡೆಯಿತು. 1993 ರಲ್ಲಿ ನಡೆದುದು ಸಹಸ್ರಮಾನದ ಕೊನೆಯ ಮಹಾಮಸ್ತಕಾಭಿಷೇಕವಾಗಿತ್ತು. ಒಟ್ಟಾರೆಯಾಗಿ ನೋಡುವುದಾದರೆ

ಶ್ರವಣಬೆಳಗೊಳವು ಸತ್ವಮೌಲ್ಯವನ್ನು ಎತ್ತಿಹಿಡಿಯುವ ತವಕ, ಮೋಕ್ಷದ ಗುರಿಯೆಡೆಗೆ ಧಾವಿಸುವ ಸಾಧಕ ಜೀವಿಗಳ ಮನೋಭಾವ ಧಾರ್ಮಿಕ ಪರಂಪರೆಯನ್ನು ಆರಂಭದಿಂದ ಇಂದಿನವರೆಗೂ ಎತ್ತಿ ಹಿಡಿಯುತ್ತಾ ಬಂದಿದೆ. ವಿವಿಧ ರಾಜ–ಅರಸರು, ಮಂತ್ರಿಗಳು, ದಂಡನಾಯಕಾಧಿಕಾರಿಗಳು, ವ್ಯಾಪಾರಿ ಸಂಘಗಳು, ಭಕ್ತಾದಿಗಳು, ಜನಸಾಮಾನ್ಯರು ಎಲ್ಲರೂ ಮಾಡಿದ ಸಹಕಾರದಿಂದ ದೇವಾಲಯಗಳು ಬಸದಿಗಳು ನಿರ್ಮಾಣಗೊಂಡ ಅವುಗಳ ಪೋಷಣೆಗಳಗಾಗಿ ನೀಡಿರುವ ಅನೇಕ ದಾನದತ್ತಿಗಳು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಇಂದಿಗೂ ಧಾರ್ಮಿಕ ಪರಂಪರೆಯನ್ನು ಮುಂದುವರೆಸಿದೆ.

ಒಂದನೇ ಬುಕ್ಕರಾಯನ ಕಾಲದಲ್ಲಿ ಕ್ರಿ.ಶ.1368 ರಲ್ಲಿ ಶಾಸನವನ್ನು ಹಾಕಿಸಿದ್ದು, ಇದು ನ್ಯಾಯನಿಷ್ಪಕ್ಷಪಾತ ನೀತಿ ಮತ್ತು ಧಾರ್ಮಿಕ ಸಮನ್ವಯತೆಯನ್ನು ತಿಳಿಸುತ್ತದೆ. [29] ಬುಕ್ಕನ ಕಾಲದಲ್ಲಿ ಶ್ರೀ ವೈಷ್ಣವರಿಗೂ ಜೈನರಿಗೂ ಸಂಘರ್ಷ ನಡೆದವು. ಪ್ರಬಲರಾದ ಶ್ರೀ ವೈಷ್ಣವರು ಜೈನರ ಮೇಲೆ ಹಲ್ಲೆ ನಡೆಸಿದರು. ಜೈನರ ಅರಸನಿಗೆ ದೂರು ನೀಡಿದರು. ಅರಸನು ಇಬ್ಬರ ಮಧ್ಯೆ ಜಂಗಳ ನಿಲ್ಲಿಸಿ ನಿಲ್ಲಿಸಿ ನ್ಯಾಯ ಸಂಧಾನ ನಡೆಸಿ ವೈಷ್ಣವರು ಜೈನರನ್ನು ಪ್ರೀತಿಯಿಂದ ಗೌರವದಿಂದ ಕಾಣುವಂತೆ ಮಾಡಿದನು. [30]

ವಿಜಯನಗರದ ಅರಸರು ಮತ್ತು ಅಧಿಕಾರಿಗಳು ಅಷ್ಟೇ ಅಲ್ಲದೆ ಮಾಂಡಲೀಕರು ಅನೇಕ ಜನಹಿತ ಕಾರ್ಯಗಳನ್ನು ನಡೆಸಿದ್ದಾನೆ. ಶ್ರವಣಬೆಳಗೊಳದ ಭಂಡಾರದ ಬಸದಿಯಲ್ಲಿರುವ ಶಾಸನವು ಅಲ್ಲಿರುವ ಸರಸ್ವತಿ ಮಂಟಪದ ಜೀರ್ಣೋದ್ಧಾರ ಕ್ರಿ.ಶ.1526 ರಲ್ಲಿ ಮಾಡಿಸಿರುವ ಬಗ್ಗೆ ತಿಳಿದುಬರುತ್ತದೆ. [31] ನಂಜರಾಜಪಟ್ಟಣದ ಮಹಾಮಂಡಲೇಶ್ವರ ಕುಲೋತ್ತುಂಗ ಚಂಗಾಳ್ವ ನಂಜುಂಡೊಡೆಯನ ಮಹಾಪ್ರಧಾನ (ಬುಕ್ಕರಾಯನ ಮಗ) ದೇವಪ್ಪನು ಈ ಜೀರ್ಣೋದ್ಧಾರ ಕಾರ್ಯವನ್ನು ನಡೆಸಿದ ನುಗ್ಗೇಹಳ್ಳಿಯ ಪ್ರಭುದೇವ ತಿಮ್ಮರಾಜ ಮತ್ತು ವಿರುಪಾಂಭಿಕರ ಪುತ್ರರಾಯ ನೃಪನು ನುಗ್ಗೆಹಳ್ಳಿಯ ತಿರುವಂಗಳನಾಥ ದೇವಾಲಯವನ್ನು ಹದಿನಾರನೇ ಶತಮಾನದಲ್ಲಿ ನಿರ್ಮಿಸಿ ಕಟ್ಟಿಗೆ ಹಳ್ಳಿಯನ್ನು ದಾನ ನೀಡಿದ ವಿಚಾರ ತಿಳಿದುಬರುತ್ತದೆ.

**ಸಾಮಾಜಿಕ ಚಟುವಟಿಕೆಗಳ ಕೇಂದ್ರವಾಗಿ**

ಭಾರತೀಯ ಸಮಾಜದಲ್ಲಿ ಪ್ರಾಚೀನ ಕಾಲದಿಂದ ವಿವಿಧ ಸಂಸ್ಕೃತಿಯನ್ನು ಕಾಣುತ್ತವೆ. ಭಾರತದಲ್ಲಿ ಹಿಂದೂ ಧರ್ಮದ ಜೊತೆಗೆ ಅನೇಕ ಧರ್ಮಗಳು ಬೆಳೆದುಬಂದಿರುವುದನ್ನು ಸಹ ಕಾಣುತ್ತವೆ. ಈ ಹಿನ್ನೆಲೆ ಪ್ರಾಚೀನ ಕಾಲದಿಂದಲೂ ರಾಜಕೀಯವಾಗಿ ಆಳ್ವಿಕೆಯನ್ನು

ನಡೆಸಿರುವಂತಹ ರಾಜ–ಮಹಾರಜರು ವೈದಿಕ ಧರ್ಮದ ಎಲ್ಲಾ ಸಂಸ್ಕೃತಿಯನ್ನು ವೈಶಿಷ್ಠತೆಗಳನ್ನು ರೂಢಿಸಿಕೊಂಡು ಪುನಃಶ್ಚೇತನಗೊಳಿಸಿ ಇನ್ನಿತರ ಬೇರೆ ಬೇರೆ ಧರ್ಮಗಳಿಗೂ ಪ್ರೋತ್ಸಾಹ ನೀಡಿರುವುದು ತಿಳಿದುಬರುತ್ತದೆ. [31] ಹಿನ್ನೆಲೆಯನ್ನು ಗಮನಿಸಿದರೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶಗಳಲ್ಲಿಯೂ ಆಳ್ವಿಕೆಯನ್ನು ನಡೆಸಿದಂತಹ ರಾಜರುಗಳು ತಮ್ಮ ಆಡಳಿತದ ಸಂದರ್ಭದಲ್ಲಿ ದೇವಾಲಯಗಳನ್ನು ಬಸದಿಗಳನ್ನು ನಿರ್ಮಿಸಿರುವುದು ಅಲ್ಲದೆ ಅನೇಕ ಮಂಟಪಗಳನ್ನು ಗೋಪುರಗಳನ್ನು, ಶಿಲ್ಪಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. [32]

ಅಂದಿನ ಪ್ರಾಚೀನ ದೇವಾಲಯಗಳನ್ನು ಹೊಸದಾಗಿ ನವೀಕರಣಗೊಳಿಸುವುದು, ದೇವಾಲಯಕ್ಕೆ ಮತ್ತು ಮಠಗಳಿಗೆ ದಾನದತ್ತಿಗಳನ್ನು ನೀಡುವುದು. ವಿವಿಧ ಮಾದರಿಯ ಉತ್ಸವಗಳನ್ನು ಆಚರಿಸುವುದು ಕಂಡುಬರುತ್ತದೆ. ದೇವಸ್ಥಾನಗಳು ಧಾರ್ಮಿಕ ಹಿನ್ನೆಲೆಯನ್ನು ಪೂರೈಸುವುದಕ್ಕಿಂತ ಜನಸಾಮಾನ್ಯರ ಮನರಂಜನೆಯ ಸ್ಥಳಗಳಾಗಿದ್ದವು. ಕೆಲವೊಂದು ದೇವಸ್ಥಾನಗಳಲ್ಲಿ ಭಕ್ತಿ ಪೂರಕವಾದ ಹರಿಕಥೆಗಳನ್ನು ಮತ್ತು ಧರ್ಮಪ್ರಸರಣ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ವೈಭವಯುತ ಪೂಜೆಪುನಸ್ಕಾರಗಳು, ಉತ್ಸವಗಳು ನಡೆದು ನೂರಾರು ಜನರಿಗೆ ಅನ್ನದಾನ ಮಾಡುತ್ತಿದ್ದುದ್ದು ತಿಳಿದುಬರುತ್ತದೆ. [33]

ಪ್ರಾಚೀನ ಕಾಲದ ದೇವಾಲಯಗಳನ್ನು ಅಧ್ಯಯನ ಮಾಡಿದರೆ ಒಂದು ಸಾಮಾಜಿಕ ಸಂಸ್ಥೆಯಾಗಿ ಕೆಲಸ ನಿರ್ವಹಿಸುತ್ತಿದ್ದನು ಹಾಗೂ ಅಂತಹ ಕಾರ್ಯದಲ್ಲಿ ಎಲ್ಲಾ ಸಮುದಾಯ ಜನಸಾಮಾನ್ಯರ ಭಾಗವಹಿಸುತ್ತಿರುವುದು ಬೆಳೆದುಬಂದ ದಾರಿಯಾಗಿದೆ.

ಅಲ್ಲಿ ಮೇಲು–ಕೀಳು, ಬಡವ– ಬಲ್ಲಿದ ಎಂಬ ವಿಚಾರ ಬರುತ್ತಿರಲಿಲ್ಲ. ದೇವಸ್ಥಾನಗಳು ಒಂದು ರೀತಿಯಲ್ಲಿ ಒಂದು ಸಂಸ್ಥೆಯಾಗಿ ಬೆಳೆದು ಬಂದಿರುವ ಕಾರಣ ಇದರಲ್ಲಿ ಆಡಳಿತದ ಹಿತದೃಷ್ಟಿಯಿಂದ ಸಾಕಷ್ಟುಜನರು ಕೆಲಸ ಕಾರ್ಯದಲ್ಲಿ ತೊಡಗಿರುವುದು ಸಹ ತಿಳಿದುಬರುತ್ತದೆ. ದೇವಾಲಯದ ನಿರ್ವಹಣೆಯಲ್ಲಿ ಸ್ಥಾನಿಕರು, ಆಡಳಿತ ಮಂಡಳಿಯವರು, ಅರ್ಚಕರು, ಪರಿಚಾರಕರು ಇರುತ್ತಿದ್ದರು. ಭಾರತ ದೇಶದ ಚರಿತ್ರೆಯನ್ನು ಗಮನಿಸಿದರೆ ರಾಜ್ಯಾಡಳಿತದ ಕ್ರಮದಲ್ಲಿ ದೇವಾಲಯದ ಆಡಳಿತವು ಆಯಾ ಪ್ರಾಂತ್ಯದ ಸ್ಥಳೀಯ ಸರ್ಕಾರದ ಒಂದು ಅಂಗವಾಗಿತ್ತು. ಇದು ಒಂದು ಪ್ರಾಂತೀಯ ಜನ ಸಾಮಾನ್ಯರ ಜೀವನದ ರೂಪ ನೀಡುವಂತಹ ಕೇಂದ್ರವೂ ಸಹ ಆಗಿತ್ತು. ಇದು ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಜೀವನ ಚಟುವಟಿಕೆಯ ಪಾತ್ರವನ್ನು ನಿರ್ವಹಿಸುವುದರಲ್ಲಿ ಅಗತ್ಯವಾಗಿತ್ತು. [34]

ಸಮಾಜದಲ್ಲಿ ಹಲವು ಜಾತಿ ಮತ್ತು ಉಪಜಾತಿಗಳಿದ್ದವು ಎಂಬುದರ ಬಗ್ಗೆ ಪ್ರಾಚೀನ ಕಾಲದ ಗ್ರಂಥಗಳಿಂದಲೂ ತಿಳಿದುಬರುತ್ತದೆ. ಅದರಲ್ಲಿ ಪ್ರಮುಖವಾಗಿ ನಾಲ್ಕು ಜಾತಿಗಳಿವೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. ಶೂದ್ರವರ್ಗದಲ್ಲಿ ಅನೇಕ ಉಪಜಾತಿಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಕರಕುಶಲ ಕರ್ಮಿಗಳು, ಕಾರ್ಮಿಕರು, ವ್ಯವಸಾಯ ವೃತ್ತಿಯಲ್ಲಿ ಬೆಳೆದವರೆಲ್ಲರೂ ಶೂದ್ರ ವರ್ಗದಲ್ಲೇ ಬೆಳೆದುಬಂದವರೆಂದು ಗುರುತಿಸಿದ್ದಾರೆ. ಈ ಮೇಲೆ ತಿಳಿಸಿರುವ ಪ್ರಮುಖ ನಾಲ್ಕು ಜಾತಿಗಳಿಂದ ಪ್ರಾಮುಖ್ಯತೆಯ ಪಡೆಯದ ಇನ್ನಿತರ ಹಲವಾರು ಜಾತಿಗಳಿದ್ದವು. ಈ ಜಾತಿಗಳು ತಮ್ಮದೇ ಆದ ನಡೆ-ನುಡಿ, ಆಚಾರ-ವಿಚಾರಗಳನ್ನು ರೂಪಿಸಿಕೊಂಡು ಬಂದಿರುವುದು ಸಹ ತಿಳಿದುಬರುತ್ತದೆ. ಬಿ.ಎಲ್.ರೈಸ್‌ರವರ ಪ್ರಕಾರ ಹಳೆಯ ಮೈಸೂರು ಪ್ರಾಂತ್ಯದಲ್ಲಿ ಸಾಂಪ್ರದಾಯಿಕವಾಗಿ 101 ಜಾತಿಗಳು ಇದ್ದವೆಂದೂ ತಿಳಿದುಬಂದಿದ್ದರೂ ಸಹ ಅವುಗಳ ಸಂಖ್ಯೆಯನ್ನು ಹೆಚ್ಚಾಗಿ 864 ಜಾತಿಗಳು ಇದ್ದವೆಂದು ತಿಳಿಸಿದ್ದಾರೆ. [35]

ಕ್ರಿ.ಶ.180 ರ ಸಮಯದಲ್ಲಿದ್ದ ಜಾತಿಗಳನ್ನು ಮೆಕೆಂಜಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಅವರ ಪ್ರಕಾರ ಬ್ರಾಹ್ಮಣರು, ಲಿಂಗಾಯಿತ, ವೈಶ್ಯ, ಒಕ್ಕಲಿಗ, ಬಲಿಜ, ಬಣಜಿಗ, ಕುರುಬ, ಬೇಡ, ಕಮ್ಮಾರ, ಗೊಲ್ಲ, ತಿಗಳ, ಉಪ್ಪಾರ, ರಜಪೂತ, ನಾಯಿಂದ, ನೇಕಾರ, ಅಗಸ, ಬಡಗಿ, ಅಕ್ಕಸಾಲಿ, ಗಾಣಿಗ, ಲಂಬಾಣಿ, ಬೋವಿ, ಈಡಿಗ, ಹೊಲೆಯ, ಮಾದಿಗ, ಕೊರಮ, ಮುಸಲ್ಮಾನ, ಕುಮ್ಬಾರ, ನೇಕಾರ, ದರ್ಜಿ, ಜೈನ, ಸಾದರ, ಮೇಚಿ, ನಾಯಕ, ಮನೆತನ, ದಳವಾಯಿ, ಭೈಇಂದದ, ಕೋಮಟಿಗ, ಸಾಧರು, ಕುಂಚಿಟಿಗರು, ತೊಗಟರು, ಜಲಗಾರರು, ಸುಣ್ಣಕಲ್ಲರು, ಉಪ್ಪಾರ, ಕೆಲಸಿಗಳು, ಬಲಗೈನವರು, ಎಡಗೈನಾರು, ಬೊಕ್ಕಸದಗೊಲ್ಲರು, ತೆಲುಗರು, ಕಂಚುಗಾರರು, ಮರಾಠಿಗಳು, ತುರುಕರು, ಹಂಡರಾಹುತರು, ಹಗ್ಗಾಣಿಗರು, ರಾಜೋರ್‌ದರ್, ದೇವಾಂಗದವರು, ಹಳ್ಳೀಕಾರ, ಚಲವಾದಿ, ಬಡಗಿ ಈ ರೀತಿಯಾಗಿ ಗುರುತಿಸಿ ದ್ವಾರ ಮೆಕೆಂಜಿಯವರು ಗುರುತಿಸುವ ಈ ಜಾತಿಗಳನ್ನು ರೈಸ್ ಮತ್ತು ಬುಕನಾನ್‌ರವರು ಸಹ ಗುರುತಿಸಿರುತ್ತಾರೆ.

ಚನ್ನರಾಯಪಟ್ಟಣದಲ್ಲಿ ಕಲ್ಯಾಣ ಚಾಲುಕ್ಯರ ದೊರೆ ತ್ರಿಭುವನ ಮಲ್ಲದೇವರು ರಾಜ್ಯಭಾರ ಮಾಡುತ್ತಿದ್ದಾಗ, ಜೈನಧರ್ಮದಲ್ಲಿ ಪ್ರಮುಖನಾದ ವ್ಯಕ್ತಿ ನಾಗವರ್ಮನ ಮಗನಾದ ಮಾರಯ್ಯನ ಪುತ್ರನು ಏಚಿದೇವನ ಮಗನಾದ ಕೌಂಡಿಲ್ಯ ಗೋತ್ರದ ಪೋಚಿಕಬ್ಬೆಯ ಪುತ್ರನಾದ ಬೊಮ್ಮದೇವನ ತಮ್ಮನಾದ ದಂಡನಾಯಕ ಗಂಗರಾಜನು ಬಿಲಗೌಡನು ನಿರ್ಮಿಸಿದ ಬಿಲೇಶ್ವರ ದೇವಾಲಯಕ್ಕೆ ಎರಡು ಸಲಗೆ ಭೂಮಿಯನ್ನು ಮತ್ತು ನಂದಾದೀಪಕ್ಕೆ ಒಂದು ಗಾಣವನ್ನು 5 ಕೊಳಗದ ಗದ್ದೆಯನ್ನು ಕೊಟ್ಟಂತೆ ಶಿಲಾಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಿಂದ ಗಂಗರಾಜನಿಗೆ ಹೊಯ್ಸಳರ ಬಿರುದುಗಳಿದ್ದಾಗ್ಯೂ ಈ ಹೊಯ್ಸಳರ ರಾಜ್ಯವನ್ನು ಚಾಲುಕ್ಯ

ಚಕ್ರವರ್ತಿ ತ್ರಿಭುವನ ಮಲ್ಲ ಎಂಬುವವನು ಆಳುತ್ತಿದ್ದಂತೆ ತಿಳಿದುಬರುತ್ತದೆ. ಆದರೆ ಹೊಯ್ಸಳರ ಅರಸರ ಹೆಸರನ್ನು ಈ ಶಾಸನದಲ್ಲಿ ತಿಳಿಸಿಲ್ಲ. ನೇರವಾಗಿ ಗಂಗರಾಜನನ್ನು ಚಾಲುಕ್ಯರ ಪಾದಪದ್ಮೋಪಜೀವಿ ಎಂದು ಕರೆಯಲಾಗಿದೆ. ಆದ್ದರಿಂದ ಈ ಸಮಯದಲ್ಲಿ ಚಾಲುಕ್ಯರ ಹೊಯ್ಸಳರ ರಾಜ್ಯವನ್ನು ಜಯಿಸಿ ತಮಗೆ ಶರಣಾದ ದಂಡನಾಯಕ ಗಂಗರಾಜನನ್ನು ತಮ್ಮ ದಂಡನಾಯಕನ್ನಾಗಿ ಮುಂದುವರೆಸಿರುವುದನ್ನು ತಿಳಿಸಲಾಗಿದೆ. ಏಚದೇವನ ಮಗನೆಂದು ಹೇಳಿಕೊಂಡಿದ್ದರೂ ಬೊಮ್ಮದೇವನ ತಮ್ಮನೆಂದು ಹೇಳಿರುವುದರಿಂದ ಅರ್ಥವೇನೆಂದರೆ, ಬೊಮ್ಮದೇವನು ಈ ವಂಶದಲ್ಲಿ ಬಹಳ ಪ್ರಮುಖವ್ಯಕ್ತಿಯಾಗಿದ್ದನೆಂದು ತಿಳಿದು ಬರುತ್ತದೆ. ಆದ್ದುದರಿಂದಲೇ ಬೊಮ್ಮದೇವನ ತಮ್ಮನೆಂದು ಕರೆದುಕೊಂಡಿದ್ದಾನೆಂದು ತಿಳಿಯ ಬಹುದಾಗಿದೆ. [37]

ಏಪ್ರಿಲ್ 9, 1133 ರ ಒಂದು ಶಿಲಾಶಾಸನದ ಪ್ರಕಾರ ಗ್ರಂಗರಾಜನ ಸಾಧನೆಗಳನ್ನು ತಿಳಿಸಲಾಗಿರುತ್ತದೆ. ಅಲ್ಲದೆ ಇಲ್ಲಿನ ಗಂಗೇಶ್ವರ ದೇವಾಲಯಕ್ಕೆ ಬೊಪ್ಪದಂಡೇಶ್ವರನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಗಂಗೇಶ್ವರವು ಗಂಗರಾಜನ ಸ್ಮರಣಾರ್ಥವಾಗಿ ನಿರ್ಮಿಸಿದ ದೇವಾಲಯವನ್ನು ತಿಳಿಸುತ್ತದೆ. [38] ಗಂಗರಾಜನ ತಾಯಿ ಪೋಚಬ್ವೆಯು ಸಲ್ಲೇಖನ ವ್ರತವನ್ನು ಅನುಸರಿಸಿ 3 ಜೂನ್ 1120 ರ ಸಂದರ್ಭದಲ್ಲಿ ಸ್ವರ್ಗ ಸೇರಿದಳೆಂದು ತಿಳಿದುಬರುತ್ತದೆ. ಇಂತಹ ಸಂದರ್ಭದಲ್ಲಿ ಗಂಗರಾಜನು ನಿಶಿಧಿಯನ್ನು ನಿಲ್ಲಿಸಿ ಪ್ರತಿಷ್ಠೆಯನ್ನು ಮಾಡಿಸಿ ಮಹಾಪೂಜೆ ಅಭಿಷೇಕಗಳನ್ನು ಮಾಡಿಸಿ ದಾನಧರ್ಮಗಳನ್ನು ಮಾಡಿದನೆಂದು ತಿಳಿದುಬರುತ್ತದೆ. [39] ಏಚ ಅಥವಾ ಮೊದಲನೇ ಏಚಿರಾಜನ ಹೆಂಡತಿಯಾದ ಪೋಚಿಕಬ್ಬೆಯೂ ಆಕೆಯ ಸೊಸೆ ಲಕ್ಷ್ಮಿಯು ಜಿನಾಲಯವೊಂದನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಪ್ರಾಯಶಃ ಇದು ಶಾಸನ ಬಸದಿಯಾಗಿರಬಹುದು. ಫೆಬ್ರವರಿ 22, 1119 ರಂದು ಶ್ರವಣಬೆಳಗೊಳದಲ್ಲಿ ಗಂಗರಾಜನು ಚೋಳರು ಆಕ್ರಮಿಸಿಕೊಂಡಿದ್ದ ಗಂಗವಾಡಿ ಪ್ರದೇಶವನ್ನು ತಲಕಾಡು ಯುದ್ಧದಲ್ಲಿ ಸೋಲಿಸಿ ಕಂಚಿಯವರೆಗೂ ನುಗ್ಗಿ ಚೋಳರ ಭೂಭಾಗವನ್ನು ಆಕ್ರಮಿಸಿಕೊಂಡಂತೆ ತಿಳಿದುಬರುತ್ತದೆ. [40] ಚೋಳರ ಸಾಮಂತರೆಲ್ಲರನ್ನು ಜಯಿಸಿದಂತೆಯೂ ಬಹಳ ಜನರು ಇವನ ಖಡ್ಗಕ್ಕೆ ಆಹುತಿಯಾದಂತೆಯೂ ತಿಳಿದುಬರುತ್ತದೆ. ಗಂಗರಾಜನು ತಂದುಕೊಟ್ಟ ವಿಜಯಸಿರಿಗೆ ಸಂತೃಪ್ತನಾದ ವಿಷ್ಣುವರ್ಧನನು ನಿನಗೆ ಬೇಕಾದ್ದದ್ದನ್ನು ಕೇಳು, ಕೊಡುವೆನೆಂದೂ ಹೇಳಲು ಗೋವಿಂದಪಾಡಿಯನ್ನು ಕೊಡು ಎಂದು ಕೇಳಿದನು. ಆ ಗೋವಿಂದ ಪಾಡಿಯನ್ನು ಪಡೆದು ಗೊಮ್ಮಟೇಶ್ವರ ದೇವರಿಗೆ ಅರ್ಪಿಸಿದನು. [41] ಗಂಗರಾಜನ ಪತ್ನಿಯಾದ ಲಕ್ಷ್ಮಿಯು ಸ್ವತಃ ಸೈನ್ಯದಲ್ಲಿ ದಂಡನಾಯಕಿಯಾಗಿದ್ದು, ಕುದುರೆ ಸಾಹಿಣಿಯಾಗಿದ್ದಳು. ಲಕ್ಷ್ಮಿಯು ಒಂದಾದ ಬಳಿಕ ಒಂದರಂತೆ ಈಕೆಯ ಮನೆತನದಲ್ಲಿನ ಈ ವಿಯೋಗಗಳ ಬ್ಗೆಕೆ ಲಕ್ಷ್ಮೀಮತಿ ಕಂತಿಯರ್

ಆಗಿ ತಾನು ಕಟ್ಟಿಸಿದ ಎರಡು ಬಸದಿ ಬಳಿ ಸಂಕಲ್ಪ ಮಾಡಿ ಸಲ್ಲೇಖನ ವ್ರತ ಕೈಗೊಂಡು[42] ಆಗಸ್ಟ್ 26, 1121 ಅಥವಾ ಜನವರಿ 20, 1122 ರಲ್ಲಿ ಮರಣ ಹೊಂದಿ ಸ್ವರ್ಗಸ್ಥಳಾದಳೆಂದು ತಿಳಿದುಬರುತ್ತದೆ. ನಂತರ ಗಂಡ ಗಂಗರಾಜನು ನಿಶಿಧಿಯನ್ನು ನಿಲ್ಲಿಸಿ ಪ್ರತಿಷ್ಠೆ ಮಾಡಿಸಿ, ಜಿನದೇವರಿಗೆ ಪೂಜಾಧಿಗಳನ್ನು ಮಾಡಿಸಿ ದಾನ ಧರ್ಮವನ್ನು ಮಾಡಿದ ವಿಚಾರ ತಿಳಿದುಬರುತ್ತದೆ. [43] ಗಂಗರಾಜನು ತನ್ನ ಅತ್ತಿಗೆಯಾದ ಜಕ್ಕಣಬ್ಬೆಯು ಜಕ್ಕಿಕೆರೆಯನ್ನು ಕಟಿಸಿ ನಮಣದೇವರ ಪ್ರತಿಮೆಯನ್ನು ಮಾಡಿಸಿದಳು ಎಂದು ತಿಳಿದುಬರುತ್ತದೆ. [44] ವಿಷ್ಣುವರ್ಧನನ ಹಿರಿಯ ದಂಡನಾಯಕನಾದ ಗಂಗರಾಜನು ಶ್ರವಣಬೆಳಗೊಳದ ಪುಣ್ಯಕ್ಷೇತ್ರದಲ್ಲಿ ಜಿನನಾಥಪುರವನ್ನು ಸ್ಥಾಪಿಸಿ, ಇಲ್ಲಿ ಒಂದು ಅಗ್ರಹಾರ ಪ್ರಾರಂಭಿಸಿದಂತೆ ತಿಳಿದುಬರುತ್ತದೆ. [45]

ಅಗ್ರಹಾರ ಬೆಳಗುಲಿಯ ಗ್ರಾಮದ ಶಾಸನದ ಪ್ರಕಾರವಾಗಿ ನೋಡುವುದಾದರೆ, ವೀರಬಲ್ಲಾಳ ದೇವನ ಮಹಾಪ್ರಧಾನಿಯ ಬಾಹತ್ತರನಿಯೋಗಾಧಿಪತಿಯು ಆದ ಕೇಶಿರಾಜನು ನ್ರ್ುಗಂದ ನಾಡಿನ ಪಂಜಾಡಿಯ ಬೆಳಗುಲಿಯನ್ನು ಕೇಶವಪುರ ಎಂಬ ಹೆಸರಿನ ಅಗ್ರಹಾರವನ್ನು ಮಾಡಿದನೆಂದು ತಿಳಿದುಬರುತ್ತದೆ. [46] ಕೇಶವ ಸಮುದ್ರ ಲಕ್ಷ್ಮೀ ಸಮುದ್ರಗಳೆಂಬ ಕೆರೆಗಳನ್ನು ಕಟ್ಟಿಸಿ ಕೇಶನಾಯಕತನವನ್ನು ನಿರ್ಮಿಸುತ್ತಾನೆ. ಈ ಕೇಶವ ದೇವರ ಶ್ರೀ ಕಾರ್ಯಕ್ಕೆಂದು ಬಲ್ಲಾಳ ದೇವನು ತಗಡೂರನ್ನು ಬಿಡುತ್ತಾನೆ. ತಗಡೂರಿನ ವೃತ್ತಿಗಳ ವಿತರಣೆಯ ಬಗೆಗೆ ತಿಳಿಯುವುದಾದರೆ, ಕಂಚವ್ವೆಯ ಮಗ ಕೇಶವಂಗೆ ಗದ್ದೆ ಸ2 ಬೆದ್ದಲು, ಕರು 400, ಪಾರಿಸ ಪಂಡಿತರಿಗೆ ಸಲಗೆ 1, ಬೆದ್ದಲು ಕಂಬ 200, ಸೇನಬೋದ ಸೋವಣ್ಣಂಗೆ ಗದ್ದೆ ಕೊ 10, ಬೆದ್ದಲು ಕಂ 100, ಜಾಗಣಂ ಗದೆ ಕೊ 5, ಬೆದ್ದಲುಕಂಬ 100, ಬಡಗಿಗಳಿಗೆ ಗದ್ದೆ ಕೊ 5, ಬೆದ್ದಲು ಕಂಬ 100, ಕಮ್ಮಾರರಿಗೆ ಗದ್ದೆ ಕೊ 5, ಬೆದ್ದಲುಕಂಬ 100, ಅಗಸರಿಗೆ ಗದ್ದೆ ಕೊ 5, ಬೆದ್ದಲುಕಂಬ 100, ಕುಂಬಾರರಿಗೆ ಗದ್ದೆ 5, ಬೆದ್ದಲುಕಂಬ 100, ಜಾರಿಕರಿಗೆ ಗದ್ದೆ ಕೊ 5, ಬೆದ್ದಲು ಕಂಬ 100 ನ್ನು ನೀಡಿ, ಇವರೆಲ್ಲರನ್ನೂ ಕೇಶವ ದೇವನಿಗೆ ಬೆಸಕಮ್ಮೆ ಪರಿವಾರದವರೆಂದು ತಿಳಿದುಬರುತ್ತದೆ. ಇದರಿಂದ ಕೇಶವಪುರದಲ್ಲಿ ವಿವಿಧ ಜಾತಿಗಳಿಗೆ ಸೇರಿ ಆದರೆ ಕೇಶವ ದೇವರಿಗೆ ಭಕ್ತರಾಗಿ, ದೇವಾಲಯದ ಪೂಜೆಯ ಕೈಂಕರ್ಯದಲ್ಲಿ ತೊಡಗಿದ ಜನರಿದರೆಂದು ನಿಖರವಾಗಿ ತಿಳಿಯುತ್ತದೆ. ಕೇಶವಪುರ ಬೆಳಗುಲಿಯು ಕೇಶವೇಶ್ವರ ದೇವಾಲಯದ ದೇವದಾನದ ಬಗೆಗೆ ತಿಳಿಯುತ್ತದೆ. ಅದರಲ್ಲಿ ಕೇಶಿಯಣ್ಣ, ಪಾರಿಪಂಡಿತ ಮಗ ಸಾತಯ್ಯ, ಸೇನಬೋವ ಸೋವಣ್ಣ, ಗಣಪಯ್ಯ, ಮಾಳಯ್ಯ, ಯೆಡವ ಮಾಯಿದೇವ, ಹರಪದ ವಿಠಲ, ಜೋಯ್ಯ, ವಿಠಲ ಚಂದಪ್ಪ, ಇವರೆಲ್ಲರಿಗೆ ಸೇರಿದ ಬಟ್ಟುಗದ್ದೆ ಸಲಗೆ 12, ಮಾಳಯ್ಯ ಯೆಡವ ಮಾಯಿದೇವ, ಹರಪದ ವಿಠಲ ಜ್ಯೋಯ್ಯ, ವಿಠಲ ಚಂದಪ್ಪ ಇವರೆಲ್ಲರಿಗೆ ಸೇರಿದ ಬಟ್ಟುಗದ್ದೆ ಸಲಗೆ 12 ಬೆದ್ದಲು ಕಂಬ 1200 ಇದ್ದು, ಇವೆಲ್ಲರನ್ನು ಕೇಶವೇಶ್ವರ ದೇವರ

ಕಾವಲುಗಾಹಿನ ವೀರರು ಎಂದು ಕರೆಯಲಾಗಿದೆ. ಇದರಿಂದ ಕ್ರಿ.ಶ. 13ನೇ ಶಾಮಾನದಲ್ಲಿ ಈ ಭಾಗದಲ್ಲಿ ಶೈವ, ವೈಷ್ಣವ ಮತ್ತು ಜೈನ ಮೂರು ಮತಧರ್ಮಗಳು ಪ್ರಬಲವಾಗಿತ್ತಲ್ಲದೇ ಈ ಮೂರು ಧರ್ಮಗಳ ನಡುವೆ ಪರಸ್ಪರ ತಾಕಲಾಟ, ತಿಕ್ಕಾಟಗಳು ನಡೆಯುತ್ತಿತ್ತು. ಇದರಿಂದಲೇ ದೇವಾಲಯಗಳ ವ್ಯವಸ್ಥೆಯನ್ನು ಸುಗಮವಾಗಿ ನಡೆಯಲು ದೇವಾಲಯದ ಸಂರಕ್ಷಣೆಗಾಗಿ ಕಾವಲುಗಾಹಿನ ವೀರರನ್ನು ನೇಮಿಸುತ್ತಿದ್ದರೆಂಬುದು ವಿಧಿತವಾಗುತ್ತದೆ. ಈ ವೀರರು ಆ ಮತದ ಅನುಚರರಾಗಿದ್ದರು.

ಕೇಶವ ದೇವಾಲಯದ ಕಾವಲುಗಾಹಿನ ವೀರರಾಗಿದ್ದ ಈ ಸಮುದಾಯದಲ್ಲಿ ವಿವಿಧ ಮತೀಯರಿದ್ದು, ಇದರಲ್ಲಿ ಶ್ರೀವೈಷ್ಣಾ ಮತಕ್ಕೆ ಸೇರಿದವರೆಂಬುದು ಸ್ಪಷ್ಟವಾಗುತ್ತದೆ. ಈ ಮೇಲಿನ ವಿಚಾರವನ್ನು ಗಮನಿಸಿದರೆ. ಕೇಶವಪುರಗಳು ಕೇವಲ ಅಗ್ರಹಾರವಾಗಿರದೇ ಎಲ್ಲಾ ಮತದ ವೈಷ್ಣವ ಭಕ್ತರು ನೆಲೆಸುತ್ತಿದ್ದ ದೇವದಾನದ ಭಾಗವಾಗುತ್ತಿತ್ತೆಂದು ತಿಳಿಯಬಹುದಾಗಿದೆ. ರಾಮಾನುಜಾಚಾರ್ಯರ ಶ್ರೀವೈಷ್ಣವ ಮತದ ಪ್ರಕಾರ ಕೆಳಜಾತಿಯವರೆನಿಸಿದ್ದ ಅಗಸ, ಹಡಪದ, ಯೆಡವ, ಕುಂಬಾರ, ಬಾರಿಕ, ಜೈನ ಮತದವರಾದ ಪಾರಿಸಯ್ಯ ಪಂಡಿತ, ಅಕ್ಕಸಾಲಿ, ಬಡಗಿ ಎಲ್ಲರೂ ಚೆನ್ನರಾಯಪಟ್ಟಣ ತಾಲ್ಲೂಕಿನ ಪ್ರಾಂತ್ಯದಲ್ಲಿದ್ದರೆಂದೂ ತಿಳಿದುಬರುತ್ತದೆ. [47] 12ಶ್ತಮಾನದಲ್ಲಿ ಸಂಗಶಿವರದ ಬಾಚರಸನು ದೇವರಿಗಾಗಿ ಹೊಸಕೆರೆಯನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. [48] ಬಾಳಗಂಬಿಯಲ್ಲಿ ಕ್ರಿ.ಶ.1132–1133 ರಲ್ಲಿ ಕುಬೇರಜೀಯ ಎಂಬುವವನು ಕೆರೆಯನ್ನು ಕಟ್ಟಿಸಿದ್ದಾನೆ. [49] ಬೊಮ್ಮನಹಳ್ಳಿಯ ಕ್ರಿ.ಶ.1138 ರಲ್ಲಿ ಕಿರಿಯ ಬಸವಾಚಾರಿ ಎಂಬುವವನು ಕೆರೆಯನ್ನು ಕಟ್ಟಿಸಿ ದೇವಾಲಯ ನಿರ್ಮಿಸಿ, ಸನ್ಯಾಸ ಸ್ವೀಕರಿಸಿದನೆಂದು ತಿಳಿದುಬರುತ್ತದೆ. [50] ಕ್ರಿ.ಶ1181 ರ ಸಮಯದಲ್ಲಿ ವೇದಿರಾಜನ ಮಡದಿ ಶಾಂತಲಾದೇವಿ ಕೊಳತೂರಿನಲ್ಲಿ ಶಾಂತಿ ಸಮುದ್ರ ಎಂಬ ಕೆರೆಯನ್ನು ನಿರ್ಮಿಸಿ ಶಾಂತೀಶ್ವರನನ್ನು ಪ್ರತಿಷ್ಠಾಪಿಸಿದಳೆಂದು ತಿಳಿದುಬರುತ್ತದೆ. [51] ಶ್ರವಣ ಬೆಳಗೊಳದ ಪರಿಸರದ ಜಿನನಾಥಪುರದಲ್ಲಿ ಕ್ರಿ.ಶ.6ನೇ ಶತಮಾನದ ಶಾಸನದಲ್ಲಿ ಈಚಿಯ ಮರಣಾನಂತರ ಪುಣ್ಯವಾಗಲೆಂದು ಬಸದಿಗಳಿಗೆ ಅನ್ನದಾನಕ್ಕೆ 10 ಖಂಡುಗ ಗದ್ದೆ ಹೂವಿನ ತೋಟ ಮತ್ತು ಬಸದಿಯ ಪೂರ್ವಕ್ಕೆ ಇರುವ ಸಣ್ಣಕೆರೆಯನ್ನು ಅಚ್ಚುಕಟ್ಟನ್ನು ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ. [52]

ಸಾಮಾಜಿಕ ಕಾರ್ಯಗಳಿಗಾಗಿಯೇ ದಾನಬಿಟ್ಟ ವಿಚಾರ ಶಾಸನಗಳಲ್ಲಿ ಕಂಡುಬರುತ್ತದೆ. ಬಡವರ ಮದುವೆಗಳಿಗೆ ಅದರಲ್ಲೂ ಬಡವರಾದ ಬ್ರಾಹ್ಮಣ ಮದುವೆಗಳಿಗೆ ಧನಸಹಾಯ ಮಾಡುವುದು ಪುಣ್ಯದ ಕೆಲಸ ಎಂದು ಜನಭಾವಿಸಿದ್ದರು. ಅಗಸ ಸಮಾಜದಲ್ಲಿ ಮದುವೆಯಾಗುವ ಸಂದರ್ಭದಲ್ಲಿ ಅಗಸ ಕನ್ಯೆಗೆ ಕೊಡಬೇಕಾದ ತೆರಲು ನಿಗದಿಪಡಿಸಿರುವುದು

ತಿಳಿದುಬರುತ್ತದೆ. ಅಂದಿನ ಸಮಾಜದಲ್ಲಿ ದಾನದತ್ತಿ ಧರ್ಮಗಳಿಗೆ ಪ್ರಸಿದ್ಧರಾಗಿದ್ದ ಗಂಗರಾಜನ ಸಾಲಿಗೆ ಸೇರಬಹುದಾದ ತಮಿಳುನಾಡಿನ ಮೂಲದ ಪೆರುಮಾಳ್ ಮೂರನೇ ನರಸಿಂಹನ ದಂಡನಾಯಕ ಈತ ಅನೇಕ ದೇವಾಲಯಗಳನ್ನು, ಕೆರೆಕಟ್ಟೆಗಳನ್ನು, ಅನ್ನಛತ್ರಗಳನ್ನು ಕಟ್ಟಿಸಿದ ಬಗ್ಗೆಯೂ ತಿಳಿದುಬರುತ್ತದೆ. [53]

ಸಂತೆ, ಜಾತ್ರೆಗಳು ಏರ್ಪಟ್ಟಿದ್ದರಿಂದ ಗ್ರಾಮಗಳು ಅಭಿವೃದ್ಧಿ ಹೊಂದುವಂತಾಯಿತು. ಪಟ್ಟಣಗಳಲ್ಲಿ ಸಂತೆಗಳು ಜರುಗುತ್ತಿದ್ದವೆಂದು ಅವುಗಳಲ್ಲಿ ವಿಜಯನಗರ, ಹಸ್ತಿನಾವತಿ, ದೋರಸಮುದ್ರ ಗುತ್ತಿ, ಪೆನುಕೊಂಡ, ಅದವಾನಿ, ಉದಯಗಿರಿ, ಚಂದ್ರಗಿರಿ ಮೊದಲಾದ ಕಡೆ ಸಂತೆಗಳ ಹೆಸರು ಕಂಡುಬರುತ್ತವೆ. ಗ್ರಾಮಗಳ ಗಡಿ ನಿರ್ಧಾರ ಭೂಮಿ ಮಾರಾಟ, ಸಾರ್ವಜನಿಕ ಗೋಮಾಳ, ಹೂದೋಟಗಳು, ಕುಡಿಯುವ ನೀರು, ಬಾವಿಗಳನ್ನು ನಾಶಪಡಿಸದೇ, ಊರಿನ ಬಸವನನ್ನು ಹೊಡೆದು ಓಡಿಸದೇ ಅಥವಾ ಕೊಲ್ಲದೆ, ತೋಟಗಳನ್ನು ರಕ್ಷಿಸುವ ಕೆಲಸವನ್ನು ಸಾರ್ವಜನಿಕರು ಮಾಡಬೇಕಾಗಿತ್ತು. ಉದ್ಯಾನವನ್ನು ಸಾರ್ವಜನಿಕರ ಉದ್ದೇಶಕ್ಕಾಗಿ ನಿರ್ಮಾಣ ಮಾಡಲಾಗುತ್ತಿದ್ದ ಉಲ್ಲೇಖವೂ ಇದೆ. ದನಗಳ ಗೋಪುರ ಹರಾಜು ಹಾಕಿ ಸಾರ್ವಜನಿಕರ ಕೆಲಸಗಳಿಗಾಗಿ ಬಳಸಲಾಗುತ್ತಿತ್ತು. ದವಸ ದಾನ್ಯಗಳನ್ನು ತುಂಬಲು ಊರೊಟ್ಟಿನ ಕಣಜಗಳಿದ್ದವು. ಸಾಮೂಹಿಕ ಗ್ರಾಮೀಣ ಹಬ್ಬಗಳು ನಡೆಯುತ್ತಿದ್ದವು. ಶಾಸನಗಳಲ್ಲಿ ಅವುಗಳನ್ನು ಪರ, ಪರವ್ವ, ಪರೇವು, ಮಹಾನವಮಿ, ಯುಗಾದಿ, ವಿನಾಯಕನ ಜಾತ್ರೆ ಎಂದು ತಿಳಿದುಬರುತ್ತದೆ. ದೇವಾಲಯದ ಸಿಬ್ಬಂದಿಯ ಸೇವಾ ವಸತಿಗಾಗಿ ಪುರವರ್ಗವಾಗಿ ದಾನ ನೀಡಿದ ಬಗ್ಗೆ ತಿಳಿದುಬರುತ್ತದೆ. [54] ಕಾರು ಹುಣ್ಣಿಮೆಯ ದಿನ ಎತ್ತುಗಳ ಪಂದ್ಯ ಏರ್ಪಡಿಸುತ್ತಿದ್ದರು. ಗ್ರಾಮಗಳಲ್ಲಿ ವಿವಿಧ ವೃತ್ತಿಗಳನ್ನವಲಂಬಿಸಿದ್ದ ಕುಮಾರ, ಕೆಲಸಿಗ, ಕೂಲಿ, ನಾವಿಂದ ತಳಾರ, ತೋಟಿಗ, ತೆಲ್ಲಿಗ, ಅರವತ್ತೊಕ್ಕಲು ಉಗುರು ಮುನ್ನೂರರು, ಬಾಣಂಜುಗ, ನಕರಂಗಗಳು, ಮುಮ್ಮುರಿದಂಡ, ಎಲೆಯ ಭೋಜಂಗರು, ಅಗದರು, ಕುಂಬಾರರು, ಪಾಂಚಾಳರು, ಭೂಮಿಪುತ್ರರು ಮುಂತಾದವರು ಕಂಡುಬರುತ್ತಾರೆ. ಅಂದಿನ ಕಾಲದಲ್ಲಿ ಭೂಮಿಯನ್ನು ಅಡವು ಇಟ್ಟುಕೊಳ್ಳುವುದು ದೊಡ್ಡ ಲಾಭದ ವ್ಯವಹಾರವಾಗಿತ್ತು. ಅಂದಿನ ಅಡವು ವ್ಯವಹಾರ ವರ್ತಕರಿಗೆ ಸೀಮಿತವಾಗಿರದೆ ಶ್ರೀಮಂತ ಭೂ ಒಡೆಯ ವರ್ಗಕ್ಕೂ ಹಬ್ಬಿತ್ತೆಂದು ತಿಳಿದುಬರುತ್ತದೆ. ಅದರಲ್ಲಿ ಗೌಡರು, ಆಚಾರ್ಯರು, ಕವಿಗಳು, ವ್ಯಾಪಾರಿಗಳು, ಲೆಕ್ಕಿಗರು, ಲೇಖಕರು, ಸೇನಬೋವರು ಸೇರಿಕೊಂಡಿದ್ದರೆಂಬುದು ತಿಳಿದುಬರುತ್ತದೆ. [55]

ಚನ್ನರಾಯಪಟ್ಟಣ ತಾಲ್ಲೂಕಿನ ಪ್ರಾಚೀನ ಇತಿಹಾಸವನ್ನು ಗಮನಿಸಿದರೆ, ಪ್ರಾಚೀನ ಕಾಲದಿಂದಲೂ ಸಾಮಾಜಿಕ ವ್ಯವಸ್ಥೆಯಲ್ಲಿ ಕಲೆಗೆ ಹೆಸರುವಾಸಿಯಾಗಿದೆ. ವಿಶ್ವವಿಖ್ಯಾತ ಬೃಹತ್

ಶಿಲಾಮೂರ್ತಿ ಶಿಲ್ಪಗಳು, ದೇವಾಲಯಗಳು, ಮನೆಗಳು, ಕೋಟೆಗಳು, ಅರಮನೆಗಳು, ಕೆರೆಕಟ್ಟೆಗಳು, ವೀರಗಲ್ಲುಗಳು ಹಾಗೂ ಇನ್ನೂ ಮುಂತಾದ ಕುಶಲಕರ್ಮಿಗಳ ದೊಡ್ಡ ಪಡೆಯೇ ಕೆಲಸದಲ್ಲಿ ನಿರತವಾಗಿತ್ತು. ಅಂದು ಪರಿಣತರು, ತಂತ್ರಜ್ಞರು, ಕೂಲಿಗಳು, ಶ್ರಮಜೀವಿಗಳು, ಶಿಲ್ಪಿಗಳು ಇದ್ದರು. ಶ್ರವಣಬೆಳಗೊಳದ ಹೊಯ್ಸಳಾಚಾರಿಯ ಮಕ್ಕಳಾದ ಗಂಗಾಚಾರಿ, ವರ್ಧಮಾನಚಾರಿ ಇದ್ದರು. ಚನ್ನರಾಯಪಟ್ಟಣ ತಾಲ್ಲೂಕಿನ ಶಾಂತವೇಶ್ವರ ದೇವಾಲಯವನ್ನು ನಿರ್ಮಿಸಿದ ಶಿಲ್ಪಿಗಳು ಮಾಕೋಜ ಎಂಬುವವನು ವೀರಗಲ್ಲುಗಳನ್ನು ಮಾಡುವುದರಲ್ಲಿ ನಿಪುಣನಾಗಿದ್ದನು. ಇವರು ತಾವು ಮಾಡಿದ ಕೆಲಸಕ್ಕೆ ಪ್ರತಿಯಾಗಿ ದಾನದತ್ತಿಗಳನ್ನು ಪಡೆಯುತ್ತಿದ್ದರು.

ವೈಯಕ್ತಿಕವಾಗಿ ಆದಾಯವು ಬರುತ್ತಿತ್ತು. ಗುಂಡೋಜ ಎಂಬ ರೂವಾರಿ ವೀರಗಲ್ಲೊಂದನ್ನು ಸಿದ್ಧಪಡಿಸಲು ಹತ್ತು ಗದ್ಯಾಣ ಪಡೆದಿದ್ದನು. ಪಾಂಚಾಳರೆಂಬ ಕುಶಲಕವಿಗಳು ಆಯಗಾರಿಕೆಯಿಂದ ಸುಗ್ಗಿಯ ಕಾಲದಲ್ಲಿ ಕಾಳನ್ನು ವಾರ್ಷಿಕ ಆದಾಯವಾಗಿ ಪಡೆಯುತ್ತಿದ್ದರು. ಅರಮನೆ, ದೇವಾಲಯಗಳಲ್ಲಿ ಕೆಲಸ ಕಾರ್ಯದಲ್ಲಿ ತೊಡಾಗಿದ್ದವರಿಗೆ ಆ ಸಂಸ್ಥೆಗಳೇ ವೇತನ ಕೊಡುತ್ತಿದ್ದವು.

ಈ ಮೇಲಿನ ಕೆಲವೊಂದು ಅಂಶಗಳನ್ನು ಗಮನಿಸಿದರೆ ಭಾರತೀಯ ಸಮಾಜವು ಪುರಾತನವಾದ ಸಂಸ್ಕೃತಿ ಮತ್ತು ಆಯಾ ಪ್ರಾಂತ್ಯದ ನಾಗರೀಕತೆಯನ್ನು ಹೊಂದಿದೆ. ಸಮಾಜದ ಮಾರ್ಗದರ್ಶನಕ್ಕೆ ಗುರುಗಳು ಹಾಗೂ ಪುರೋಹಿತರುಗಳಾದ ಬ್ರಾಹ್ಮಣರ ಅಗತ್ಯವಿದೆ. ಚಿಂತನೆ ಹಾಗೂ ದಾರ್ಶನಿಕತೆಯ ಕ್ಷೇತ್ರದಲ್ಲಿ ಇತರರು ಪರಿಣಿತರಾದ್ದರಿಂದಾಗಿ ಉತ್ತಮ ಅಂತಸ್ತನ್ನು ಅವರಿಗೆ ನೀಡಲಾಗಿತ್ತು. ಅಲ್ಲದೆ ದೇವಾಲಯಗಳಲ್ಲಿ ಇವರಿಗೆ ಪೂಜೆ ಪುನಸ್ಕಾರಗಳಿಗೆ ಅವಕಾಶವಿತ್ತು. ಕ್ಷತ್ರಿಯರು ಸಮಾಜದ ರಕ್ಷಕರಾಗಿದ್ದಾರೆ. ಧೈರ್ಯಶಾಲಿಗಳಾದ ಕ್ಷತ್ರಿಯ ಸಮಾಜದ ರಕ್ಷಣೆಗೆ ಯುದ್ಧದಲ್ಲಿ ಸಕ್ರಿಯ ಪಾತ್ರವಹಿಸಿದ್ದಾರೆ. ಅಧಿಕಾರದ ಭಂಡಾರವೇ ಅವರಾದ್ದರಿಂದ ಅವರೆ ಆಳುವವರಾಗಿರುತ್ತಾರೆ ಹಾಗೂ ಆಡಳಿತಗಾರರಾಗಿರುತ್ತಾರೆ. ಆದುದರಿಂದ ಕ್ಷತ್ರಿಯರಲ್ಲಿ ಬಲಯುತರಾಗಿ ರಾಜಮಹಾರಾಜರಾಇ ಸಮಾಜದ ಕೆಲಸ ಕಾರ್ಯವನ್ನು ಸುಧಾರಿಸುತ್ತಾರೆ. ವೈಶ್ಯರು ವರ್ತಕರಾಗಿದ್ದಾರೆ. ಇವರು ಸಮಾಜದಲ್ಲಿ ಸಂಪತ್ತನ್ನು ಸೃಷ್ಠಿಸುವವರಿದ್ದಾರೆ. ವ್ಯಾಪಾರ ಮಾಡುವುದರಲ್ಲಿ ಇವರು ಉತ್ತಮರು. ಇವರು ಕೆಲವೊಂದು ದೇವಾಲಯಗಳನ್ನು ಸಹ ನಿರ್ಮಿಸಿದ್ದಾರೆ. ಶೂದ್ರರು ದುಡಿಯುವ ವರ್ಗದವರಾಗಿದ್ದಾರೆ. ಸ್ತ್ರೀಯರ ಸ್ಥಾನಮಾನ ಕುರಿತಂತೆ ಒಂದು ಪ್ರಾಂತ್ಯದ ಬೆಳವಣಿಗೆಯಲ್ಲಿ ಸ್ತ್ರೀಯರ ಪಾತ್ರ ಬಹುಮುಖ್ಯವಾದದ್ದು. ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಸಮಾಜದಲ್ಲಿ

ಸ್ಥಾನಮಾನ ಅಲ್ಲದೆ ಅವರಿಗೆ ವಿಶೇಷವಾದ ಮರ್ಯಾದೆ ಕುರಿತು ಈ ಭಾಗದ ಶಾಸನಗಳು ತಿಳಿಸುತ್ತವೆ. [56] ಮಹಿಳೆಯರು ಅದರಲ್ಲೂ ರಾಣಿಯರು ಧಾರ್ಮಿಕ ಹಾಗೂ ಸಾಮಾಜಿಕವಾಗಿ ಸ್ಥಾನಗಳನ್ನು ಪಡೆದಿದ್ದು, ರಾಣಿಯರು ಕಟ್ಟಿಸಿರುವ ದೇವಾಲಯಗಳು ಬಸದಿಗಳು ಕಂಡುಬರುತ್ತವೆ. [57] ಸ್ತ್ರೀಯರು ಗಣಿಕೆಯಲ್ಲಿ ಸತಿಪದ್ಧತಿಯ ಆಚರಣೆ, ವೀರಮಹಾಸತಿ, ಆಹಾರಪದ್ಧತಿ, ಉಡುಗೆ–ತೊಡುಗೆ, ಸಾರ್ವಜನಿಕ ಮನರಂಜನೆ ಇವೆಲ್ಲವು ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದ ಪರಂಪರೆಯನ್ನು ಗಮನಿಸಿದರೆ ರಾಜಕೀಯ ಹಿನ್ನೆಲೆಯಿಂದಲೇ ಪ್ರೇರೇಪಿತವಾಗಿ ಕಲೆ, ಧರ್ಮ ಜೀವನದ ಸಮಸ್ಯೆಗಳು, ಜೀವನ ಮೌಲ್ಯಗಳು ಕಂಡುಬಂದಿವೆ. ಸಾಮಾಜಿಕ ಜನಜೀವನದ ವ್ಯವಸ್ಥೆಯಲ್ಲಿ ಕುಟುಂಬ ಅವಿಭಕ್ತ ಕುಟುಂಬ, ಬಂಧುತ್ವ, ಸಂಸಾರ, ವಿವಾಹ ನಂತರದ ಜೀವನದ ಪದ್ಧತಿ, ಜಾತಿಪದ್ಧತಿ, ನರಬಲಿ, ದೇವದಾಸಿಯರು, ವೇಶ್ಯೆಯರು, ಸತಿಪದ್ಧತಿ, ಸಹಗಮನಪದ್ಧತಿ, ಗೃಹಿಣಿಯಾಗಿ ಯುದ್ಧದಲ್ಲಿ ಹೋರಾಟಗಾರ್ತಿಯಾಗಿ, ಮಹಿಳೆ ವ್ಯಾಪಾರಿಯಾಗಿ, ಜಾತ್ರೆ ರಥೋತ್ಸವದ ಸಂಗೀತ, ನಾಟ್ಯ, ನೃತ್ಯ, ಶಿಕ್ಷಣ ತಂತ್ರಜ್ಞಾನ ಆಹಾರ ಪದ್ಧತಿ ಇವೆಲ್ಲವೂ ಚನ್ನರಾಯಪಟ್ಟಣದ ನಾನಾ ಭಾಗಗಳಲ್ಲಿ ಕಾಣಬಹುದಾಗಿದೆ.

ಪ್ರಾಚೀನ ಕಾಲದಿಂದಲೂ ಭಾರತ ದೇಶವು ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ಭಾರತ ದೇಶದ ಇತಿಹಾಸವನ್ನು ನೋಡಿದರೆ ಹಳ್ಳಿಗಳ ಅಭಿವೃದ್ಧಿ ಇನ್ನೂ ಸಂಪೂರ್ಣವಾಗಿ ಆಗಿಲ್ಲ. ಅದಕ್ಕಾಗಿ ಸರ್ಕಾರ ಹಳ್ಳಿಗಳ ಅಭಿವೃದ್ಧಿಗೆ ಪ್ರಯತ್ನಿಸುತ್ತಿದೆ. ಆದರೆ ಪ್ರಾಚೀನ ಇತಿಹಾಸವನ್ನು ನೋಡಿದರೆ ಇಂತಹ ಹಳ್ಳಿಗಳಲ್ಲಿ ಭವ್ಯವಾದ ದೇವಾಲಯಗಳ್ನನು, ಬಸದಿಗಳನ್ನು, ಸೌಧಗಳನ್ನು ಕೆರೆಕಟ್ಟೆಗಳನ್ನು ನಿರ್ಮಿಸಿದ್ದಾರೆ. ಇದರ ಉದ್ದೇಶವೇನೆಂದರೆ, ಸಮಾಜದಲ್ಲಿ ಜನರ ಸಮಸ್ಯೆಗಳನ್ನು ಪರಿಹರಿಸುವ ದೃಷ್ಟಿಯಿಂದ ವಸತಿಯ ಸಮಸ್ಯೆ ಒಂದು ಹಳ್ಳಿಯಲ್ಲಿ ವಾಸಿಸುವ ಜನರಿಗೆ ಇರಲು ವ್ಯವಸ್ಥಿತವಾದ ಮನೆ ಇಲ್ಲ. ಚರಂಡಿ ಹರಿದು ಬರುವ ಪಕ್ಕದಲ್ಲೇ ಅವ್ಯವಸ್ಥಿತವಾದ ಜೋಪಡಿಯನ್ನು ನಿರ್ಮಿಸಿ ಅದರಲ್ಲೇ ತಮ್ಮ ಜೀವನ ನಡೆಸುತ್ತಿದ್ದಾರೆ. ಇದು ಹಳ್ಳಿಗಳಲ್ಲಿ ವಾಸಿಸುವ ಜನರ ಘೋರಸ್ಥಿತಿಯಾಗಿದೆ. ಈ ಹಿನ್ನೆಲೆಯನ್ನು ನೋಡಿದರೆ ಅಂದಿನ ಕಾದಲ್ಲಿಯೇ ರಾಜರುಗಳು ದೇವಾಲಯಗಳನ್ನು ನಿರ್ಮಿಸಿ ರಸ್ತೆಗಳನ್ನು ನಿರ್ಮಿಸಿರುವುದು ಅನೇಕ ಕಡೆ ಕಂಡುಬಂದಿದೆ. ಆಹಾರದ ಸಮಸ್ಯೆಯೂ ಒಂದಾಗಿದೆ. ಹಿಂದಿನ ಕಾಲದಲ್ಲಿಯೂ ಆಹಾರ ಸಮಸ್ಯೆ ಇತ್ತು. ತಮ್ಮ ಆಹಾರ ಸಮಸ್ಯೆಯನ್ನು ನಿವಾರಿಸಿಕೊಳ್ಳಲು ದೇವಾಲಯಗಳಲ್ಲಿ ಅನೇಕ ಕೆಲಸ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಸಾರಿಗೆ ಸಮಸ್ಯೆ, ಈಗ ಸಾರಿಗೆ ಸಮಸ್ಯೆ ಅಲ್ಪ ಸ್ವಲ್ಪ ಸುಧಾರಣೆಯಾಗಿದೆ. ಆದರೆ ಅಂದಿನ ಕಾಲದಲ್ಲಿ ಆನೆ, ಕತ್ತೆ, ಒಂಟೆ, ಕುದುರೆ, ಎತ್ತಿನಗಾಡಿ, ಎಮ್ಮೆ, ಇನ್ನೂ ಮೊದಲಾದ ಪ್ರಾಣಿಗಳನ್ನು ತಮ್ಮ ವಾಹನಗಳಾಗಿ

ಮಾಡಿಕೊಂಡಿರುವುದನ್ನು ನಾವು ಪ್ರಸ್ತುತ ಅನೇಕ ದೇವಾಲಯಗಳಲ್ಲಿ ಕಂಡುಬರುವ ಭಿತ್ತಿಶಿಲ್ಪಗಳಲ್ಲಿ ಕಾಣಬಹುದಾಗಿದೆ. ಅಲ್ಲದೆ ದೇವಾನುದೇವತೆಯ ವಾಹನಗಳು ಕೂಡ ಪ್ರಾಣಿ ಪಕ್ಷಿಗಳಾಗಿವೆ. ಇವುಗಳನ್ನು ದೇವಾಲಯಗಳಲ್ಲಿ ಕಾಣಬಹುದು ಶಿಕ್ಷಣದ ಕೊರತೆ ಅಂದಿನ ಕಾಲದಲ್ಲಿತ್ತು. ಅದಕ್ಕೋಸ್ಕರವಾಗಿಯೇ ರಾಜರುಗಳು ಅನೇಕ ಅಗ್ರಹಾರಗಳನ್ನು ತೆರೆದು ದೇವಾಲಯಗಳಲ್ಲಿಯೇ ಮಠಗಳಲ್ಲಿಯೇ ಅಲ್ಲದೆ ಬಸದಿಗಳಲ್ಲಿಯೇ ವಿದ್ಯೆಯನ್ನು ಕಲಿಸುತ್ತಿದ್ದರು. ಜಾತಿಯ ಸಮಸ್ಯೆಯು ಅದು ಇವತ್ತಿನ ಕಾಲದಲ್ಲಿ ಅಂದು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಜಾತಿ ಮುಖ್ಯವಾಗಿ ಕಂಡುಬರುವುದು ಗ್ರಾಮೀಣ ಪ್ರದೇಶದಲ್ಲಿ ಕೀಳು ಜಾತಿಯವರು, ಮೇಲು ಜಾತಿಯವರಿಂದ ತುಳಿತಕ್ಕೆ ಒಳಗಾಗುತ್ತಿದ್ದಾರೆ. ಕೀಳು ಜಾತಿಯವರು ಕೆಲವು ವ್ಯವಸ್ಥೆಯಿಂದ ವಂಚಿತರಾಗಿದ್ದಾರೆ. ಇದನ್ನು ಸಹ ದೇವಾಲಯ ಹಿನ್ನೆಲೆಯನ್ನು ಕಾಣಬಹುದಾಗಿದೆ. ದೇವಾಲಯಗಳಲ್ಲಿ ಜಾತಿಯ ಆಧಾರದ ಮೇಲೆ ಇಂತಹವರು ಇಂತಹದ್ದೇ ಕೆಲಸವನ್ನು ಪಾಲಿಸಬೇಕು ಎಂಬ ನಿಯಮ ಇಂದಿಗೂ ಪ್ರಸ್ತುತ ಕೃಷಿಕರ ವ್ಯಾಪಾರ ಸಮಸ್ಯೆಯ ಪರಿಹಾರವೇನು ಎಂದರೆ ರೈತರು ತಾವು ಬೆಳೆದ ಬೆಳೆಗಳನ್ನು ಸರಿಯಾದ ಬೆಲೆಗೆ ಮಾರಾಟ ಮಾಡಲಾಗುತ್ತಿಲ್ಲ. ಇದು ಇಂದಿನ ಸಮಸ್ಯೆಯಲ್ಲ ರಾಜರ ಕಾಲದಿಂದಲೂ ಬೆಳೆದುಬಂದ ದಾರಿ.

ಈ ಮೇಲಿನ ಎಲ್ಲಾ ಅಂಸಗಳನ್ನು ಗಮನಿಸಿದರೆ, ದೇವಾಲಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಸುಧಾರಣೆಗಳನ್ನು ಮಾಡಬೇಕಾಗುತ್ತದೆ.

**ಆರ್ಥಿಕ ಕೇಂದ್ರವಾಗಿ**

ಯಾವುದೇ ಒಂದು ಪ್ರಾಂತ್ಯದ ಅಭಿವೃದ್ಧಿ ಆಗಬೇಕಾದರೆ ಅದು ಅವರ ಆರ್ಥಿಕ ಅಭಿವೃದ್ಧಿಯನ್ನು ಅವಲಂಬಿಸಿರಲೇಬೇಕು. ಯಾವುದೇ ಕ್ಷೇತ್ರದಲ್ಲಿ ಆರ್ಥಿಕ ಪ್ರಗತಿಯ ಪಾತ್ರ ಅತ್ಯಂತ ಮಹತ್ತರವಾದದ್ದು. ಕ್ರಿ.ಪೂರ್ವಗಳ ಶತಮಾನಗಳಲ್ಲಿಯೇ ರಾಜ್ಯದ ಆಯಾ ಪ್ರಾಂತ್ಯದ ಆರ್ಥಿಕ ಪರಿಸ್ಥಿತಿಯನ್ನು ಕುರಿತು ಸುದೀರ್ಘವಾದ ಚರ್ಚೆಗಳಾಗಿವೆ. [58] ಒಂದು ದೇಶದ ಆರ್ಥಿಕ ಸಂಪತ್ತು ಅದು ಹೊಂದಿರುವ ಪ್ರಾಕೃತಿಕ ಸಂಪತ್ತುಗಳಾದ ಮಣ್ಣು, ಕಲ್ಲು, ನೀರು, ಕಾಡು, ಖನಿಜ, ಹವಾಗುಣ, ಜನಸಂಪತ್ತು, ದೇವಾಲಯಗಳು, ಬಸದಿಗಳು, ನಾಣ್ಯಸಂಪತ್ತು, ಚಿನ್ನ ಬೆಳ್ಳಿ, ಇನ್ನೂ ಮೊದಲಾದವುಗಳಿಂದ ಆರ್ಥಿಕ ಸಂಪತ್ತು ಬರುತ್ತದೆ. ಇಲ್ಲಿ ಪ್ರಮುಖವಾಗಿ ದೇವಾಲಯಗಳಿಂದ ಆರ್ಥಿಕ ಪರಿಸ್ಥಿತಿಯನ್ನು ತಿಳಿಸಲಾಗಿರುತ್ತದೆ. ಇಲ್ಲಿ ಗಮನಿಸಿದರೆ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಆಯಾ ಪ್ರದೇಶದಲ್ಲಿ ಕಂಡುಬರುವ ದೇವಾಲಯಗಳಿಗೆ ಪೂರಕವಾಗಿ ಆರ್ಥಿಕ ವ್ಯವಸ್ಥೆ ಹರಿದು ಬರುತ್ತಿರುವುದು ಅಂದಿನ ಕಾಲದ ಶಿಲಾಶಾಸನಗಳಿಂದ

ತಿಳಿದುಬರುತ್ತದೆ. [59] ನಿತ್ಯ ಪೂಜೆಗಳಿಂದ ಆರ್ಥಿಕ ವ್ಯವಸ್ಥೆ ಕಂಡುಬರುತದೆ. ಬಸದಿಯಲ್ಲಿ ದೇವಾಲಯಗಳಲ್ಲಿ ನಡೆಯುತ್ತಿದ್ದ ಪೂಜಾವಿಧಿಗಳಲ್ಲಿ ಅಭಿಷೇಕ, ಅರ್ಚನೆ, ಅಲಂಕಾರ, ನೈವೇದ್ಯ, ಆರತಿ, ಸ್ತವನ, ನಮಸ್ಕಾರಗಳು, ನಿತ್ಯವಿಧಿಗಳಾಗಿದ್ದವು. ಇದರಂತೆ, ನೀರು, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ ಮತ್ತು ಫಲ ಈ ಎಂಟು ವಿಧದಿಂದ ಮಾಡುವ ಪೂಜೆಯು ಅಷ್ಟವಿಧಾರ್ಚನೆ ಎನಿಸಿದೆ. ಅಂದಿನ ಕಾಲದಲ್ಲಿ ಶ್ರಾವಕರು ನಿಶ್ಚಿತ ಪೂಜಾ ಕಾರ್ಯಕ್ಕೆಂದು ದಾನ ನೀಡಿದ್ದನ್ನು ಶಾಸನಗಳು ದಾಖಲಿಸಿವೆ.

**ಅಭಿಷೇಕ**

ಅಭಿಷನ ಶಬ್ಧದಿಂದ ಅಭಿಷೇಕ ಎಂಬ ಪದವು ಬಂದಿದೆ. ಇದಕ್ಕೆ ಸ್ನಾನಯಜ್ಞಕ್ಕೆ ಸಂಬಂಧಿಸಿದ ಸ್ನಾನ ಎಂದು ಕರೆಯಲಾಗಿದೆ. ಜೈನಮತದಲ್ಲಿ ಅಭಿಷೇಕಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ಶ್ರವಣಬೆಳಗೊಳದ ಗೊಮ್ಮಟೇಶ್ವರನ ಪೂಜೆ ಪ್ರಚಲಿತಗೊಂಡ ಮೇಲೆ ಅಂದರೆ 12ನೇ ಶತಮಾನದ ನಂತರದಲ್ಲಿ ಗೊಮ್ಮಟೇಶ್ವರ ಮೂರ್ತಿಯ ನಿತ್ಯಪಡಿಯಾಗಿ ಮೂರು ಮಾನ ಹಾಲನ್ನು ತೆಗೆದುಕೊಳ್ಳಲಿಕ್ಕೆ ಹಲಸೂರ ಸೋಮಸೆಟ್ಟಿಯ ಮಗ ಕೀರ್ತಿಸೆಟ್ಟಿಯರು ಮೂರು ಗದ್ಯಾಣವನ್ನು ಅಕ್ಷಯ ಭಂಡಾರವನ್ನಾಗಿ ಇಟ್ಟಿರುತ್ತಾರೆ.[60] ಮಾದಿಸೆಟ್ಟಿಯು ಹಾಲಿನ ಅಭಿಷೇಕಕ್ಕಾಗಿ ಒಂದು ಮಾನ ಹಾಲನ್ನು ನೀಡುತ್ತಿದ್ದನು. [61] ಗೇರುಸೊಪ್ಪೆಯ ಗೋವಿಂದಸೆಟ್ಟಿಯು ಅಕ್ಷಯ ಭಂಡಾರವಾಗಿ ಇಟ್ಟಾ ಹಣದ ಬಡ್ಡಿಯಿಂದ ಪ್ರತಿದಿನವೂ ಗೊಮ್ಮಟೇಶ್ವರನಅಭಿಷೇಕಕ್ಕೆ ಒಂದು ಬಳ್ಳ ಹಾಲನ್ನು ಕೊಡುತ್ತಿದ್ದನೆಂದು ತಿಳಿದುಬರುತ್ತದೆ. [62] ಶ್ರವಣಬೆಳಗೊಳದ ಭಂಡಾರಿ ಬಸದಿಯಲ್ಲಿ ದೇವರ ನಿತ್ಯಾಭಿಷೇಕಕ್ಕೆಂದು ಶ್ರಾವಕರು ಇಟ್ಟಿದ್ದ ಅಕ್ಷಯ ಭಂಡಾರದ ನಿಧಿಯು 7 ಗದ್ಯಾಣ 50 ಪಣವಾಗಿತ್ತು. ಅಕ್ಷಯ ನಿಧಿಗೆ ನಿರ್ದಿಷ್ಟವಾದ ಬಡ್ಡಿಯನ್ನು ಸಂದಾಯ ಮಾಡುತ್ತಿತ್ತು. ಈ ಹಣದಿಂದ ನಿತ್ಯಾಭಿಷೇಕ ಪೂಜೆಗಳು ನಿರಂತರವಾಗಿ ನಡೆಯುತ್ತಿತ್ತು. ಈ ಹಿನ್ನೆಲೆಯಿಂದ ಅಕ್ಷಯ ಭಂಡಾರದ ನಿಧಿಗಳ್ನನು ಹೊಂದಿದ್ದ ಬಸದಿಗಳಲ್ಲಿ ಪೂಜಾ ವ್ಯವಸ್ಥೆಗೆ ಲೋಪಬಾರದೆ ನಿರಂತರವಾಗಿ ನಡೆಯುತ್ತಿತ್ತೆಂದು ತಿಳಿಯಬಹುದಾಗಿದೆ. ಶ್ರವಣಬೆಳಗೊಳದ ನಕರ ಜಿನಾಲಯದ ಆದಿದೇವರ ನಿತ್ಯಾಭಿಷೇಕದಲ್ಲಿ ಒಂದು ಬಳ್ಳ ಹಾಲನ್ನು ಹುಲಿಗೆರೆಯ ಸೋಮಣನವರು ಐದು ಗದ್ಯಾಣ ಹೊನ್ನನ್ನು ನೀಡಿದ್ದನು ಎಂಬುದು ತಿಳಿದುಬರುತ್ತದೆ. [63]

ಬಸದಿಯಲ್ಲಿ ನಿತ್ಯಪೂಜೆಯ ಒಂದು ಅಂಗವಾಗಿ ದೀಪವನ್ನು ಹಚ್ಚುತ್ತಿದ್ದುದಲ್ಲದೇ ನಂದಾದೀಪದ ವ್ಯವಸ್ಥೆಯೂ ಇತ್ತೆಂದು ತಿಳಿದುಬರುತ್ತದೆ. ಕುಂಬೇನಹಳ್ಳಿಯ ಪರವಾದಿಮಲ್ಲ ಜಿನಾಲಯದ ದೇವರಿಗೆ ನಂದಾದೀವಿಗೆಯನ್ನು ಬೆಳಗಿಸಲು ಮಹಾ ಪ್ರಧಾನಿ ಕಮ್ಮಟದ

ಮಾಚಯ್ಯ ಮತ್ತು ಅವನ ಮಾವ ಬಲ್ಲಯ್ಯ ಗಾಣದ ಸುಂಕವನ್ನು ಬಿಟ್ಟುಕೊಡುತ್ತಾರೆ. [64] ಶ್ರವಣಬೆಳಗೊಳದ ಸವತಿಗಂಧಾವರಣ ಬಸದಿಗೆ ಮಹೇದ್ರ ಕೀರ್ತಿಯು 313 ಈಚಿನ ದೀಪಗಳನ್ನು ದಾನ ನೀಡಿರುತ್ತಾನೆ. [65] ತಗಡೂರಿನ ಜಿನಾಲಯದ ಕಲಿಬೊಪ್ಪದೇವನ ಚರುವಿಗೆಂದು ನೇಮವೆರ್ಗ್ಗಡೆಯ ಮಗನು ತಾವರೆಗೆರೆಯಲ್ಲಿ ಒಂದು ಖಂಡುಗ ಗದ್ದೆಯನ್ನು ದತ್ತಿ ಬಿಡುತ್ತಾನೆ. [66] ಹೊಂನಚಗೆರೆಯ ಸಂಭುದೇವ, ಬೊಂಮಣ ದೋರಯ್ಯ, ಚವುಡಯ್ಯನವರು ಸೇರಿ ಗೊಮ್ಮಟದೇವರ ಅಮೃತಪಡಿಗಾಗಿ ಮತ್ತಯ್ಯನ ಕೆರೆಯಲ್ಲಿ ಗದ್ದೆಯನ್ನು ಸುತ್ತಾಲ ಚತುರ್ವಿಂಶತಿ ತೀರ್ಥಂಕರರ ಅಮೃತಪಡಿಗಾಗಿ ಮೊದಲೇರಿಯಲ್ಲಿ ಒಂದು ಸಲಗ ಗದ್ದೆಯನ್ನು ಬಿಟ್ಟಿರುವುದು ತಿಳಿದುಬರುತ್ತದೆ. [67] ಶ್ರವಣಬೆಳಗೊಳವು ಕ್ರಿ.ಶ.6ನೇ ಶತಮಾನದಲ್ಲಿ ಜನರು, ಧನಕನಕ, ಸಸ್ಯ, ಗೋಮಹಿಷಾದಿಂದ ಕೂಡಿತ್ತೆಂದು ತಿಳಿದುಬರುತ್ತದೆ. [68] ಗಂಗರಾಜನು ದೇವರ ಅಷ್ಟವಿಧಾರ್ಚನೆಗೆಂದು ಗೋವಿಂದವಾಡಿ ಗ್ರಾಮವನ್ನು ಬಿಟ್ಟಿರುತ್ತಾನೆ. ಗೊಮ್ಮಟ ದೇವರ ನಿತ್ಯಾಭಿಷೇಕಕ್ಕಾಗಿ ನಿತ್ಯಪಡಿ ಹಾಲಿಗಾಗಿ, ಹೂವಿನಪಡಿಗಾಗಿ, ಅಮೃತಪಡಿಗಾಗಿ ಹಲವು ಶ್ರಾವಕರು ದಾನ ಬಿಟ್ಟಿರುವ ಉಲ್ಲೇಖಗಳಿವೆ. ನಿತ್ಯಪಡಿ ನಡೆಸಲು ಅಕ್ಷಯ ಭಂಡಾರ ನಿಧಿಯನ್ನು ಸ್ಥಾಪಿಸಿದ್ದರಲ್ಲದೆ ಗೊಮ್ಮಟ ದೇವರಿಗೆಂದು ಹೊಲ, ಗದ್ದೆ, ತೋಟ, ಬೆದ್ದಲುಗಳನ್ನು ಬಿಟ್ಟಿದ್ದರು. ಶ್ರವಣ ಬೆಳಗೊಳದ ಪ್ರವೇಶದ್ಗಲಿ ಅಂದಿನ ಕಾಲದಲ್ಲಿಯೇ ವಾಣಿಜ್ಯ ವ್ಯವಹಾರಗಳು ನಡೆಯುತ್ತಿದ್ದವು. ಅಲ್ಲಿಯ ದೇಶೀಯ ವರ್ತಕರಿಗೆ ವಸ್ತ್ರ, ಸುಗಂಧ ಲೇಪನ ಸಾಮಗ್ರಿ, ಹಾಲು, ಬೆಣ್ಣೆ, ಮೊಸರು, ಹೂವು, ಎಣ್ಣೆ, ಶ್ರೀಗಂಧ ಮೊದಲಾದ ವ್ಯಾಪಾರಗಳು ನಡೆಯುತ್ತಿತ್ತು. ಈ ಪ್ರದೇಶದಲ್ಲಿ ಮಣ್ಣಿನ ಕಂಚಿನ ಕುಡಿಕೆ, ಮಡಿಕೆ, ಕುಂಬಗಲ ಬೇಡಿಗೆ ಹೆಚ್ಚಾಗಿರುವಂತೆ ತಿಳಿದುಬರುತ್ತದೆ. ಊರಿನ ಸುಂಕಾಧಿಕಾರಿ ಹೆಗ್ಗಡೆಲಕ್ಕಾಯ ಮತ್ತು ಹುಳ್ಳಮಯ್ಯನು ರಾಜನಲ್ಲಿ ಪ್ರಾರ್ಥಿಸಿ ಆ ಊರಿನ ತಿಪ್ಪೆಸುಂಕದ ಅಡಕೆ, ಹೇರಿಂಗೆ 200, ಹಸುಂಬೆಗೆ 50, ಬಳ್ಳ ಹಸುಬೆಗೆ 1 ಮಾನ ಮರೆ ಪನ್ನಾಯದಲ್ಲಿ ಎಲೆಯ ಹೇರಿಂಗೆ ಹಾಗ 1, ಮೇಲೆಲೆ 200 ಮತ್ತು ಗಾಣದೆರೆಯನ್ನು 24 ಮನೆ ದೆರೆಯನ್ನು ದಾನ ಬಿಡುತ್ತಾರೆ. [69] ಕ್ರಿ.ಶ.1181 ರಲ್ಲಿ ವೀರಬಲ್ಲಾಳನ ಮಂತ್ರಿಯಾಗಿದ್ದ ಚಂದ್ರಮಾಳಿಯ ಪತ್ನಿ ಅಚಿಯಕ್ಕನು ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿರುತ್ತಾಳೆ. ಈ ಬಸದಿಗಾಗಿ ರಾಜನಿಂದ ಕೇಳಿ ಪಡೆದು ಬೊಮ್ಮೇನಹಳ್ಳಿಯನ್ನು ಬಾಳಚಂದ್ರಪಂಡಿತ ದೇವರಿಗೆ ದಾನಬಿಟ್ಟಿರುತ್ತಾಳೆ. ಅಕ್ಕನ ಬಸದಿಯ ದೇವರ ಅಷ್ಟ ವಿಧಾರ್ಚನೆಗೆಂದು ನಾನಾ ದೇಸಿಯರು ಅನೇಕ ತೆರಿಗೆಗಳನ್ನು ಬಿಟ್ಟುಕೊಟ್ಟಿರುತ್ತಾರೆ. ಈ ಬಸದಿಗೆ ಬರುತ್ತಿದ್ದ ದವಸ ಧಾನ್ಯಗಳ ವಿಲೇವಾರಿ ಹೆಂದಿದ್ದ ಪೆರುಮಾಳ್ ಎಂಬ ದವಸಿಗನಿಗೆ 1 ಸಲಗೆ ಗದ್ದೆಯನ್ನು 5 ಬೆದ್ದಲೆಯನ್ನು ಕಮತದ ಕೆಯಿಯಲಿ ನೂರು ಬೆದ್ದಲೆಯನ್ನು ಕೊಟ್ಟಿರುತ್ತಾರೆ. ಇದು ಆ ಬಸದಿಯ ಸಂಪದ್ಭರಿತವಾಗಿತ್ತೆಂದು

ತಿಳಿಯುತ್ತದೆ. ಹೊಯ್ಸಳ ರಾಜ್ಯದ ಪಟ್ಟಣಸೆಟ್ಟಿಯಾಗಿದ್ದ ನಾಗವರ್ಮನು ನಗರಜಿನಾಲಯವನ್ನು ಜೀರ್ಣೋದ್ಧಾರ ಮಾಡಿಸಿ ಮೊದಲೇರಿಯ ತೋಟಾದಲ್ಲಿ ಆರು ಸಲಗ ಗದ್ದೆ ಹತ್ತು ಕೊಳಗ ಬೆದ್ದಲೆ ಮತ್ತು ಎರಡು ಮನೆ, ಅಂಗಡಿ ಎರಡು ಗಾಣ ಎರಡು ಒಟ್ಟು ಹದಿಮೂರು ಹಣವನ್ನು ದಾನ ಬಿಡುತ್ತಾನೆ. ಜಿನನಾಥಪುರದ ಸಮಸ್ತ ಮಾಣಿಕ್ಯ ನಕರರು ಒಟ್ಟಾಗಿ ಸೇರಿ ಆದಿದೇವರ ಜೀರ್ಣೋದ್ಧಾರಕ್ಕೆ ಮತ್ತು ಉಪಕರಣ ಶ್ರೀ ಕಾರ್ಯಗಳಿಗೆಂದು ತಮಗೆ ಬಂದ ನೂರು ಗದ್ಯಾಣದಲ್ಲಿ ಒಂದು ಗದ್ಯಾಣವನ್ನು ದಾನಬಿಟ್ಟಿರುತ್ತಾರೆ.

ಅತ್ತಿಹಳ್ಳಿಯ ಕ್ರಿ.ಶ.1183 ರ ಶಾಸನ ಪಾಠದಿಂದ ವೀರಬಲ್ಲಾಳನ ಪ್ರೀತಿಯ ಹೆಂಡತಿಯ ಬಮ್ಮಲದೇವಿ ತಮ್ಮ ಮನೆತನ ಮತ್ತು ತಂದೆ–ತಾಯಿಯರ ಪರಿಚಯ ಮಾಡಿ ಧಾರ್ಮಿಕ ಪ್ರವೃತ್ತಿವುಳ್ಳ ಬಮ್ಮಲದೇವಿ ಶೈವ ಧರ್ಮದವಳಾಗಿದ್ದು, ಇವಳು ಅಭಿನವ ಪಾರ್ವತಿ ಎನಿಸಿಕೊಂಡ ಬಮ್ಮೆಲದೇವಿ ಗಂಡನ ಜೊತೆಯಲ್ಲಿ ಹಲಕೂರಿನ ಕಲಿದೇವರ ನೈವೇದ್ಯ ನಂದಾದೀವಿಗೆಗೆ ಲಾಕುಳಾಗಮ ಸಮಯ ಸಮುದ್ಧರಣ ಎಕ್ಕೋಟಿ ಮುನೀಂದ್ರ ಕಾಳಾಮುಖ ಸಂಪ್ರದಾಯದ ರಾಮನಾಥ ದೇಅವ್ರ ಪಾದಾರಾಧಕ ಕಲ್ಯಾಣ ಶಕ್ತಿ ಪಂಡಿತರ ಪಾದವನ್ನು ತೊಳೆದು ದಾನ ಕೊಟ್ಟಿರುವಳು. ಅತ್ತಿಹಳ್ಳಿಯ ಅಮೃತೇಶ್ವರ ದೇವಾಲಯದ ಅಂರರಂಗ ಭೋಗಕ್ಕೆ ಅಲ್ಲಿಯ ಸ್ಥಾನಿಕನಾದ ಹೊನ್ನಜೀಯನ ಮಗ ಚೌಡಜೀಯನಿಗೆ 100 ಕಂಬ ಬೆದ್ದಲ ಭೂಮಿ ದಾನ ಮಾಡಿರುವುದನ್ನು ಸಹ ತಿಳಿಸುತ್ತದೆ. [70] ವೀರಬಲ್ಲಾಳನಿಗೆ ಚೋಳರ ಜೊತೆಗೆ ಇದ್ದಂತಹ ಸ್ನೇಹ ಸಾಕ್ಷಿಯಾಗಿ ರಕ್ತ ಬಾಂಧವ್ಯದಲ್ಲಿ ಮುಂದುವರೆದು, ಆ ಮನೆತನದ ಹೆಣ್ಣೊಂದನ್ನು ಮದುವೆಯಾಗಿ ಅವಳನ್ನು ಚೋಳ ಮಹಾದೇವಿ ಎಂದು ಕರೆದ ಈಕೆಯನ್ನು ಸಹ ಶಾಸನವು ಪಿರಿಯರಿಸಿ ಪಟ್ಟಮಹಾದೇವಿ ಚೋಳಮಹಾದೇವಿಯರು ಎಂದುಕರೆಯಲಾಗಿದೆ. ಈಕೆ ಕೆಂಬಾಳುವಿನಲ್ಲಿ ಅಧಿಕಾರ ನಿರ್ವಹಿಸುತ್ತಿದ್ದಳು. ಆಗ ಕೆಲವು ದುಷ್ಟ ಜನರ ಮಾತು ಕೇಳಿ ಬೇವೂರನ್ನು ಮುತ್ತಿ ದಾಳಿಯನ್ನು ಮಾಡಿದಳು. ಆ ದಾಳಿಯಲ್ಲಿ ಕೇತಮಲ್ಲನಾಯಕನು ತನ್ನ ಊರಿನ ಕಾಳಗದಲ್ಲಿ ಪ್ರಾಣಬಿಟ್ಟನು. ಆಗ ನಿಜವಾದ ವಿಷಯ ತಿಳಿದ ಅರಸಿ ತಾನು ದುಡುಕಿ ತೆಗೆದುಕೊಂಡ ನಿರ್ಧಾರದ ಅರಿವಾಗಿ ತನ್ನ ಭಂಡಾರಿ ರಾಯಣ್ಣ ಮತ್ತು ನಾಚಣ್ಣ ಹೆಗ್ಗಡೆಗಳನ್ನು ಕರೆದು ಯೆಮ್ಮ ಮಕ್ಕಳ ನಾವು ನೋಯಿಸಿದೆವು. ನಿವು ಹೋಗಿ ಕೇತಮಲ್ಲ ನಾಯಕನ ಕುಟುಂಬದವರಿಗೆ ಸಮಾಧಾನ ಹೇಳಿ ಬನ್ನಿ ಎಂದು ಕಳುಹಿಸಿದಳು. ಮತ್ತು ಮೃತನ ಮಗನಾದ ನರಸಿಂಹನಾಯಕನಿಗೆ ದಾಳಿಯಲ್ಲಿ ಪ್ರಾಣತೆತ್ತ ವ್ಯಕ್ತಿ ಕೇತಮಲ್ಲ ನಾಯಕನ ಹೆಸರಿನಲ್ಲಿ ಗದ್ದೆಯನ್ನು ಕೊಡುಗೆಯಾಗಿ ಬಿಟ್ಟಳು. [71] ಕ್ರಿ.ಶ. 1276 ರಲ್ಲಿ ಬಾಳಗಂಚಿ ಶಾಸನದ ಪ್ರಕಾರ ಮುಮ್ಮಡಿ ವೀರನರಸಿಂಹ ದೇವರು ದೋರಸಮುದ್ರದಿಂದ ಆಳುತ್ತಿರುವಾಗ ಮಹಾ ಪ್ರಧಾನ ಪೆರುಮಾಳದೇವನು ಉದುಭವ ವಿಶ್ವನಾಥಪುರವಾದ ಬಾಳಗಚ್ಚನ

ಅಗ್ರಹಾರವನ್ನು ಮಹಾಜನರಿಂದ ಕೊಂಡು ಆಯಿಂದ್ರ ಪ್ರವದ ಪಂಚಿಕೇಶ್ವರ ದೇವರ ಧರ್ಮಕ್ಕೆ ಆರಣ ಪೂಜೆಯ ಧರ್ಮ ದಾನ ನೀಡಿರುವುದು ತಿಳಿದುಬರುತ್ತದೆ. [72] ಹೊಯ್ಸಳ ಸೋಮೇಶರನ ಆಳ್ವಿಕೆಯ ಕಾಲದಲ್ಲಿ ನುಗ್ಗೇಹಳ್ಳಿಯ ಕ್ರಿ.ಶ.1253 ರ ಶಾಸನದ ಪ್ರಕಾರವಾಗಿ ಮಹಾ ಪ್ರಧಾನ ಬೊಮಣ್ಣ ದಂಡಾಯಕರ ಅಕ್ಕಲಕ್ಕವ್ವೆಯಕ್ಕನವರು ಪ್ರತಿದಿನ ಎಂಟು ಜನ ಬ್ರಾಹ್ಮಣರ ಊಟಕ್ಕೆ ಭೂದಾನ ಮಾಡಿದ ವಿಚಾರ ತಿಳಿದುಬರುತ್ತದೆ. [73]

ಈ ಮೇಲಿನ ಕೆಲವೊಂದು ವಿಚಾರಗಳನ್ನು ಗಮನಿಸಿದರೆ, ದೇವಾಲಯಗಳು ಆರ್ಥಿಕ ಪರಿಸ್ಥಿತಿಯನ್ನು ಹೊಂದಿದ್ದವು. ದೇವಸ್ಥಾನಗಳಿಗೆ ಬಸದಿಗಳಿಗೆ, ಮಠಗಳಿಗೆ ಭೂಮಿ ಮತ್ತು ಹಣದ ರೂಪದಲ್ಲಿ ದಾನದತ್ತಿಗಳು ಬರುತ್ತಿದ್ದವು. ದೇವಾಲಯಗಳು ಇಂತಹ ರಾಜಮಹಾರಾಜರು, ರಾಣಿಯರು, ನರ್ತಕರು, ದಾನಿಗಳು ಇನ್ನೂ ಮೊದಲಾದ ದಾನಿಗಳಿಂದ ಬಂದಂತಹ ಆದಾಯದಿಂದ ದೇವಾಲಯದ ಬಂದಾಯವನ್ನು ವೃದ್ಧಿಗೊಳಿಸಿಕೊಂಡು ಖರ್ಚು ವೆಚ್ಚಗಳನ್ನು ಸರಿಪಡಿಸಿಕೊಳ್ಳುತ್ತಿದ್ದರು. ದೇವಾಲಯಗಳಿಗೆ ಇನ್ನಿತರ ನಾನಾ ಮೂಲಗಳಿಂದ ಆದಾಯ ಬರುತ್ತಿತ್ತು. ಗ್ರಾಮಗಳ ಹೆಸರನ್ನು ಪ್ರತಿ ನಾಮಕರಣ ಮಾಡಿ ಅವುಗಳನ್ನು ದೇವರ ಸೇವೆಗೆ ಕೊಡುತ್ತಿದ್ದರು. ದಾನಿಗಳು ಒಂದು ಗ್ರಾಮವನ್ನು ಅಲ್ಲದೆ ಇನ್ನಿತರ ದತ್ತಿಯನ್ನು ನೀಡಿರುವುದು ತಿಳಿದುಬರುತ್ತದೆ.

ದೇವಾಲಯಗಳಿಗೆ ಹರಿದು ಬರುವ ಆದಾಯದಲ್ಲಿ ಮೂರನೇ ಒಂದು ಭಾಗ ಒಡವೆಗಳದ್ದು, ದಾನಿಗಳು ತಮ್ಮ ಸೇವೆಯಲ್ಲಿ ದೇವಾಲಯಗಳಿಗೆ, ಬಂಗಾರ, ಬೆಳ್ಳಿ, ಮುತ್ತು, ರತ್ನ, ವಜ್ರ, ವೈಡೂರ್ಯಗಳನ್ನು ತಮ್ಮ ತಮ್ಮ ಪ್ರೀತಿಯ ದೇವರುಗಳಿಗೆ- ದೇವತೆಗಳಿಗೆ ಕೊಡುತ್ತಿದ್ದರು. ಇದು ರಾಜರಿಂದ ಹಿಡಿದು ರಾಣಿಯರು, ಮಂತ್ರಿಗಳು, ದಂಡನಾಯಕರು, ಗುರುಗಳು, ವ್ಯಾಪಾರಿಗಳು, ಸಾಮಂತರು, ಸಾರ್ವಜನಿಕರು, ದಾನದತ್ತಿಯನ್ನು ಕೊಟ್ಟಿರುವುದನ್ನು ಕಾಣಬಹುದಾಗಿದೆ. ಚನ್ನರಾಯಪಟ್ಟಣದ ಶಾಸನದಲ್ಲಿ ವೀರ ಬಲ್ಲಾಳ ದೇವರಾಯರ ಆಯ್ತಾರೋಗ್ಯ ಐಶ್ವರ್ಯೋಭಿವೃದ್ಧಿಗಾಗಿ ಕಬ್ಬಹುನಾಡ ಅಮೃತಪುರವಾದ ಕೊಳತ್ತೂರು ಅಗ್ರಹಾರ ಮಾಡಿ ಅಲ್ಲಿಯ ಮೂಲಸ್ಥಾನ ರಾಮೇಶ್ವರ ದೇವರಿಗೆ ನಿತ್ಯ ನೈವೇದ್ಯ, ನಂದಾದೀವಿಗೆ ಗದೆ ಸಲಗ ನಾಲ್ಕನ್ನು ವಿಷ್ಣುವರ್ಧನ ಪರಮೇಶ್ವರ ದೇವರಿಗೆ ಗದ್ದೆ ಸಲಗ ಮೂರನ್ನೂ ಸೋಮಸಮುದ್ರದ ಸಾತಳೇಶ್ವರ ದೇವರಿಗೆ ವೃತ್ತಿಯೆರೆಡು ಋಗ್ವೇದ ಖಂಡಿಕಕ್ಕೆ ವೃತ್ತಿಯೊಂದು ಯಜುರ್ವೇದ ಖಂಡಿಕಕ್ಕೆ ವೃತ್ತಿಯೊಂದು ಭಟ್ಟವೃತ್ತಿಯೊಂದು ಪಂಚಿಕೇಶ್ವರ ಅಗ್ಗಟ್ಟಿಕೆಗೆ ಪ್ರತಿಯೊಂದನ್ನು ಹೀಗೆ ಹಲವಾರು ದಾನ ನೀಡಿರುವುದು ತಿಳಿದುಬರುತ್ತದೆ. [74]

ಆನೆಕೆರೆಯ ಶಾಸನದಲ್ಲಿ ವೀರಬಲ್ಲಾಳ ದೋರಸಮುದ್ರ ನೆಲೆವೀಡಿನಲ್ಲಿ ರಾಜ್ಯ ಏಳುತ್ತಿರಲು ತತ್ಪಾದಜೀವಿ ಮಂಡಳಿಕ ದಂಡಾಧೀಶ, ಮಾಚಣಂ ಶ್ರೀ ಮನ್ಮಹಾಪ್ರಧಾನ ಧ್ಯಾನ ಬುಧನ ಪ್ರಸನ್ನ ಕೇಶವ ದಿವ್ಯ ಶ್ರೀಪಾದ ಪದಂಗಳಿಗೆ ಸಕ ವರ್ಷ 1113ನೇ ಸಾಮ್ಯಸಂವತ್ಸರದ ಆದಿತ್ಯವಾದ ಕಬ್ಬು ಹುನಾಡೊಳಗಿನ ಕೇಶವಪುರ ನಾಮಧೇಯ ಅಗ್ರಹಾರ ಆನೆಕೆರೆಯ ಸರ್ವಭಾಷೆ ಪರಿಹಾರವಾಗಿ ಗದ್ಯಾಣ 100 ಕ್ಕೆ 350 ಮೊದಲ ಕುಲದೊಳಗೆ ಹಣವೆರಡರ ಸೇವೆ ಶ್ರೀಮತ್ ಪ್ರಸನ್ನ ಕೇಶವ ದೇವರಪಾದ ತೊಳೆದು ಶ್ರೀ ಮದಜ್ಜೀಶ್ವರ ದೇವರ ಸನ್ನಿದಾನದಲ್ಲಿ ವೀರಬಲ್ಲಾಳ ಹಸ್ತಾದಿರಿ ಧಾರಾಪೂರ್ವಕ ಮಾಡಿಸಿಬಿಟ್ಟಿರುವನು. [75]

ಚನ್ನರಾಯಪಟ್ಟಣ ತಾಲ್ಲೂಕಿನ ಹೆಬ್ಬಾಳು ಗ್ರಾಮದಲ್ಲಿ ಕ್ರಿ.ಶ.12ನೇ ಶತಮಾನದ ಶಾಸನವೊಂದರ್ಲಲಿ ಜೀವನೆಯ ಹೆಗ್ಗಡೆ ಎಂಬುವನು ದೇವರನ್ನು ಪರ್ತಿಷ್ಠಾಪಿಸಿದುದಲ್ಲದೆ ಹೊಸ ಕೆರೆಯನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. [76] ಚನ್ನರಾಯಪಟ್ಟಣ ತಾಲ್ಲೂಕಿನ ಸಂತೆ ಶಿವರದ 12ನೇ ಶತಮಾನದ ಶಾಸನದಲ್ಲಿ ಬಾಚರಸನು ದೇವರಿಗಾಗಿ ಹೊಸ ಕೆರೆಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಬಾಳಗಂಚಿಯ್ ಅಕ್ರಿ.ಶ.1132-33 ರ ಶಾಸನದ ಪ್ರಕಾರವಾಗಿ ಕುಂಬೇರ್‌ಜೀಯ ಎಂಬುವವನು ಕೆರೆ ಕಟ್ಟಿಸಿದನೆಂದು ದಾಖಲಾಗಿರುವುದಲ್ಲದೆ, ಬೊಮ್ಮನಹಳ್ಳಿಯ 1138 ರ ಶಾಸನದ ಪ್ರಕಾರ ಕಿರಿಯ ಬಸವಾಚಾರಿ ಎಂಬುವವನು ಕೆರೆಯನ್ನು ಕಟ್ಟಿಸಿ ದೇವಾಲಯ ನಿರ್ಮಿಸಿ ಸನ್ಯಾಸ ಸ್ವೀಕರಿಸಿದನೆಂದು ತಿಳಿದುಬರುತ್ತದೆ. [77] ಬಾಳಗಟ್ಟೆಯ ಕ್ರಿ.ಶ.1178ರ ಪ್ರಕಾರವಾಗಿ ದೇವಾಲಯದೊಂದಿಗೆ ಕೆರೆ ಕಟ್ಟಿಸಿರುವ ಬಗ್ಗೆ ಉಲ್ಲೇಖವಿದೆ. [78]

ಪ್ರಾಯಶಃ ದೇವಾಲಯದ ಭೂಮಿಗಳಿಗೆ ನೀರಾವರಿ ಸೌಕರ್ಯ ಒದಗಿಸುವ ಉದ್ದೇಶದಿಂದ ಕೆರೆಗಳಿಗೆ ತೂಬನ್ನು ನಿರ್ಮಿಸಿರುವುದು ತಿಳಿದುಬರುತ್ತದೆ. ಕರ್ನಾಟಕ ಹಾಗೂ ಹಾಸನ ಜಿಲ್ಲೆಯಾದ್ಯಂತ ದೊರೆತಿರುವ ಶಾಸನಗಳಲ್ಲಿ ಬಹುತೇಕ ದಾನ ಶಾಸನಗಳು, ಅವುಗಳಲ್ಲಿ ಭೂದಾನ ಮಾಡಿರುವುದೇ ಹೆಚ್ಚು ದೊರೆಯುತ್ತದೆ. ಪ್ರಾಚೀನ ಕಾಲದಿಂದಲು ಭೂದಾನಗಳನ್ನು ಧಾರ್ಮಿಕ ಉದ್ದೇಶಗಳಿಗಾಗಿ ಅಲ್ಲದೆ, ಆರ್ಥಿಕ, ಸಾಮಾಜಿಕವಾಗಿ ನೀಡುತ್ತಾ ಬಂದಿರುವುದು ಕಂಡುಬರುತ್ತದೆ. ಧಾರ್ಮಿಕ ಮಹೋನ್ನತಿ ಮತ್ತು ರಾಜಕೀಯ ಸಾಮಾಜಿಕ ಪ್ರತಿಷ್ಠೆಗಳು ದಾನದ ಕಾರ್ಯಗಳಿಗೆ ಪ್ರೇರಿತವಾಗಿ ಕಾರ್ಯನಿರ್ವಹಿಸಿವೆ. ಚನ್ನರಾಯಪಟ್ಟಣ ತಾಲ್ಲೂಕಿನ ಪ್ರದೇಶದಲ್ಲಿ ವಿವಿಧ ಉದ್ದೇಶಗಳಿಗಾಗಿ ನೀಡಿರುವ ಶಾಸನಗಳಲ್ಲಿ ಭೂ ದಾನಗಳನ್ನು ನೀಡುವಾಗ ಕೆರೆ ಕೆಳಗಿನ ಅಚ್ಚುಕಟ್ಟಿನ ಭೂಮಿಯನ್ನು ದಾನವಾಗಿ ನೀಡಿದೆ.

ಈಗಾಗಿ ಬಹುತೇಕ ದಾನಗಳು ದತ್ತಿಗಳಾಗಿದ್ದು, ಕೆರೆ, ಕೆರೆ ಕೆಳಗಿನ ಅಚ್ಚುಕಟ್ಟು ಭೂಮಿಗಳೇ ದಾನದ ವಸ್ತುಗಳಾಗಿರುವುದನ್ನು ಕಾಣಬಹುದಾಗಿದೆ. ಕೃಷಿ ಆರ್ಥಿಕಾಭಿವೃದ್ಧಿ

ಚಟುವಟಿಕೆಗಳಿಗೆ ದೇವಾಲಯಗಳು ಕೇಂದ್ರಬಿಂದುವಾಗಿ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ. ರಾಜರು, ಸಾಮಂತರು, ಅಧಿಕಾರಿಗಳು, ರಾಣಿಯರು, ವ್ಯಾಪಾರಿಗಳು, ವ್ಯಕ್ತಿಗಳು, ಸ್ಥಳೀಯ ಗಾವುಂಡರು ಮತ್ತು ಜನಸಮುದಾಯಗಳು ಸಕ್ರಿಯವಾಗಿ ಇಂತಹ ಚಟುವಟಿಕೆಗಳಲ್ಲಿ ಭಾಗಿಯಾಗಿರುವುದನ್ನು ಕಾಣಬಹುದಾಗಿದೆ. [79] ಧಾರ್ಮಿಕ ಕೇಂದ್ರವೆನಿಸಿದ ಶ್ರವಣಬೆಳಗೊಳ ಪರಿಸರದಲ್ಲಿ ಹೆಚ್ಚು ಕಾಮಗಾರಿಗಳು ಕಂಡುಬಂದಿವೆ. ದೇವಾಲಯಗಳ ನಿರ್ಮಾಣ ಅಲ್ಲದೆ ಕೆರೆ ನಿರ್ಮಾಣ ಅಗಾಧ ಪ್ರಮಾಣದಲ್ಲಿ ಕಂಡುಬಂದಿದೆ.

ದೇವಾಲಯಗಳು ಖಜಾನೆಗಳಾಗಿದ್ದು, ಎಲ್ಲಾ ರೀತಿಯ ಆರ್ಥಿಕ ಚಟುವಟಿಕೆಗಳ ಕೇಂದ್ರಬಿಂದುಗಳಾಗಿದ್ದವು. ಅಲ್ಲದೆ ದೇವಾಲಯಗಳು ಖಜಾನೆಗಳಾಗಿದ್ದರಿಮ್ದ ಶತೃಗಳು ಮೊದಲು ದೇವಾಲಯಗಳ ಮೇಲೆ ಆಕ್ರಮಣ ನಡೆಸುತ್ತಿದ್ದರು. ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಬೇಕೆಂದರೆ ಬೊಕ್ಕಸಕ್ಕೆ ಬರುವ ಆದಾಯದಿಂದ ಮಾತ್ರ ಸಾಧ್ಯ. ದೇವಾಲಯಗಳ ತೆರಿಗೆ ಸಂಗ್ರಹಕ್ಕೆಂದೇ ಅಧಿಕಾರಿಗಳು ಇರುತ್ತಿದ್ದರು. ಸಂಗ್ರಹವಾದ ಹಣಕ್ಕೆ ಕೋಶಾಧ್ಯಕ್ಷರು ಇರುತ್ತಿದ್ದರು. ನಾಯ ಪದ್ಧತಿಯು ಚಲಾವಣೆಯಲ್ಲಿತ್ತು. ಚಿನ್ನ, ಬೆಳ್ಳಿ, ತಾಮ್ರ ಮತ್ತು ಪ್ರೊಟಿನ್ ನಾಟ್ಯಗಳನ್ನು ಹಚ್ಚು ಹಾಕಿಸುತ್ತಿದ್ದರು. ವರಾಹ, ಗದ್ಯಾಣ, ಪೊನ್ ಗದ್ಯಾಣ, ನಾಗ್ ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ನಾಣ್ಯಗಳ ಚಲಾವಣೆಯಲ್ಲಿ ತೆರಿಗೆಗಳು ಆಯಾ ಪ್ರಾಂತ್ಯದ ಆದಾಯದಲ್ಲಿ ಪ್ರಮುಖವಾಗಿತ್ತು. ಕೃಷಿಯಿಂದ ಉತ್ಪಾದಿಸುವ ವಸ್ತುಗಳು ವ್ಯಾಪಾರದ ವಸ್ತುಗಳು ಕೆಲವೊಮ್ಮೆ ದೇವರಿಗೆ ದಾನರೂಪದಲ್ಲಿ ತೆರಿಗೆಗಳನ್ನು ಜನಸಾಮಾನ್ಯರು ದೇವಾಲಯಗಳಿಗೆ ನೀಡುತ್ತಿದ್ದರು. ರಾಜ ಮಹಾರಾಜರಿಗೆ ಸಲ್ಲಿಸುವಂತಹ ತೆರಿಗೆಗಳಲ್ಲಿ ಕೆಲವನ್ನು ದೇವಾಲಯಗಳಿಗೆ ಸಲ್ಲಿಸುವುದರಿಂದ ದೇವಾಲಯದ ನಿರ್ವಹಣೆ ಮತ್ತು ಅಭಿವೃದ್ಧಿ ಸಾಧ್ಯವಾಗುತ್ತಿತ್ತು. ಪ್ರಾಯಶಃ ಈ ರೀತಿಯ ವ್ಯವಸ್ಥೆಗಳನ್ನು ನೋಡಿ ಅಂದಿನ ಕಾಲದ ಜನರು ದಾನದ ರೂಪದಲ್ಲಿಯು ದೇವಾಲಯಕ್ಕೆ (ದೇವರಿಗೆ) ತೆರಿಗೆಯನ್ನು ಕೊಡುತ್ತಿದ್ದರು ಎಂಬುದು ತಿಳಿದುಬರುತ್ತದೆ. ಇದರಿಂದ ವ್ಯಾಪಾರ ಮತ್ತು ವಾಣಿಜ್ಯ ಪ್ರಾಚೀನ ಕಾಲದಿಂದಲೂ ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿಯೇ ಬೆಳೆದು ಬಂದಿರುವುದು ತಿಳಿದುಬರುತ್ತದೆ. ಆರ್ಥಿಕ ಪ್ರಗತಿಗೆ ಪೂರಕವಾಗಿ ಉದ್ಯೋಗಗಳು ಕೂಡ್ ಅಪ್ರಮುಖ ಪಾತ್ರವನ್ನು ವಹಿಸುತ್ತಿದೆ.

ಉದ್ಯೋಗಿಗಳು ಮುಖ್ಯವಾಗಿ ಆಯಾ ಪರಿಸರ ಹಾಗೂ ಜನರ ಬೇಕು–ಬೇಡ'ಗಳಿಗೆ ಪೂರಕವಾಗಿ ಹುಟ್ಟಿಕೊಳ್ಳುತ್ತವೆ. ಮುಖ್ಯವಾಗಿ, ಬಡಿಗ, ಕಮ್ಮಾರ, ಅಕ್ಕಸಾಲಿಗ, ನಾವಿಂದ, ಮಾಲೇಗಾರ, ಗಣಿಗ, ವರ್ತಕ ಇವೆಲ್ಲವುಗಳ ಉದ್ಯೋಗದ ಸರಿವ್ಯಾಪ್ತಿಯಲ್ಲಿ ಬರುತ್ತವೆ. ಅಂದರೆ ದೈನಂದಿನ ಜೀವನಕ್ಕೆ ಬೇಕಾಗುವಂತಹ ವಸ್ತುಗಳು ವಿತರಣೆ, ಉತ್ಪಾದನೆ ಮಾಡಿ

ಅವುಗಳನ್ನು ಪೂರೈಸುವುದು ಇದರಲ್ಲಿ ಸೇರಿರುತ್ತದೆ. ಇದರಂತೆಯೇ ಪಾಠಶಾಲೆಗಳಲ್ಲಿ ಘಟಕ ಸ್ಥಳಗಳಲ್ಲಿ ವಿದ್ಯಾಕೇಂದ್ರಗಳಲ್ಲಿ ಬೋಧನೆ ಮಾಡುವ ಪುರಾಣ ಪ್ರವಚನಗಳನ್ನು ಹೇಳುವ ಶಿಕ್ಷಕರು, ಅರ್ಚಕರು ದೇವಾಲಯದ ಕಾರ್ಯದಲ್ಲಿ ಭಾಗಿಯಾಗುವ ಜಾಗಟೆಯವರು, ಡಕ್ಕಸೆಯವರು, ಮದ್ದಳೆಯವರು, ನೃತ್ಯಗಾರರು ಪಾತ್ರವಹಿಸುತ್ತಾರೆ. ಹೀಗೆ ದೇವಸ್ಥಾನದ ಚಟುವಟಿಕೆಗಳಲ್ಲಿ ಭಾಗಿಯಾಗುವ ಎಲ್ಲರೂ ಕೂಡ ಉದ್ಯೋಗ ಪ್ರಮುಖವಾದ ಕಾರ್ಯವೇ ಆಗಿರುತ್ತದೆ. ಆರ್ಥಿಕ ಪರಿಸ್ಥಿತಿಗೆ ಪೂರಕವಾದಂತೆ ಮೇಲಿನ ವಿಚಾರಗಳು ಒಂದು ಪರಿಪೂರ್ಣವಾದ ಚಿತ್ರಣವನ್ನು ಒದಗಿಸುತ್ತದೆ.

ದೇವಾಲಯಗಳಿಗೆ, ಬ್ರಹ್ಮಪುರಿಗಳಿಗೆ, ಮಠಗಳಿಗೆ, ಬಸದಿಗಳಿಗೆ, ವಿದ್ಯಾಕೇಂದ್ರಗಳಿಗೆ ಹಾಗೂ ಮಹಾಜನಗಳಿಗೆ ಮತ್ತು ಸಾಮಾನ್ಯ ಜನರಿಗೆ ನೀಡಿದ ದಾನದತ್ತಿಗಳನ್ನು ತೆಗೆದುಕೊಂಡರೆ, ಅಂದಿನ ಕಾಲದಲ್ಲಿ ನಡೆಯುತ್ತಿದ್ದಂತಹ ಆಚರಣೆಗಳು ಸಹ ಆರ್ಥಿಕ ಪ್ರಗತಿಯ ಲಾಭದಾಯಕದಲ್ಲಿ ಪ್ರಗತಿಯನ್ನು ಸಾಧಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಿಂದ ಈ ಮೇಲೆ ತಿಳಿಸಲಾಗಿರುವ ಎಲ್ಲಾ ರೀತಿಯ ಆಧಾರಗಳಿಂದ ದೇವಾಲಯಗಳು ಸಹ ಆರ್ಥಿಕ ವ್ಯವಸ್ಥೆಯಲ್ಲಿ ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸಿವೆ ಎಂಬುದು ಹಲವಾರು ಆಧಾರಗಳಿಂದ ದೃಢಪಡುತ್ತದೆ.

## ಶೈಕ್ಷಣಿಕ ಕೇಂದ್ರವಾಗಿ ದೇವಾಲಯಗಳು

ಪ್ರಾಚೀನ ಇತಿಹಾಸವನ್ನು ಗಮನಿಸಿದರೆ, ಪ್ರಾಚೀನ ಪರಂಪರೆಯಲ್ಲಿ ಶೈಕ್ಷಣಿಕ ಹಿನ್ನೆಲೆಯನ್ನು ನೋಡಿದರೆ, ವಿದ್ಯಾಭ್ಯಾಸ ಪದ್ಧತಿಯು ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ಮನುಷ್ಯ ಜೀವನದಲ್ಲಿ ಜ್ಞಾನವನ್ನು ಪಡೆಯುವುದಾದರೆ, ಮೊದಲಿಗೆ ತನ್ನ ಆತ್ಮವನ್ನು ಶುದ್ಧೀಕರಿಸಬೇಕು. ಯಾವುದೇ ಒಂದು ಪ್ರದೇಶದ ಪರಿಸ್ಥಿತಿಯನ್ನು ತಿಳಿಯಬೇಕಾದರೆ ಮೊದಲಿಗೆ ಸ್ಥಳೀಯ ವಿದ್ಯಾರ್ಜನೆ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ವಿದ್ಯೆಗಿಂತ ಶ್ರೇಷ್ಠವಾದದ್ದು ಬೇರೊಂದಿಲ್ಲ. ಸರ್ವ ದಾನಗಳಲ್ಲಿ ವಿದ್ಯೆಯೇ ನಿಜವಾದ ದಾನ. ಏಕೆಂದರೆ ವಿದ್ಯೆಯನ್ನು ಅಪಹರಿಸಲು ಯಾರಿಂದಲೂ ಸಾಧ್ಯವಿಲ್ಲ. ಅದೇ ರೀತಿ ಅನ್ನದಾನವೂ ಶ್ರೇಷ್ಠತೆಯನ್ನು ಹೊಂದಿದೆ. ಆದರೆ ವಿದ್ಯಾ ದಾನವು ಮಾನವನ ಬದುಕಿನ ಸರ್ವ ರೀತಿಯ ಬೌದ್ಧಿಕ ಬೆಳವಣಿಗೆಯ ಶಕ್ತಿಗೆ ಪೂರಕವಾಗಿರುತ್ತದೆ. ವ್ಯಕ್ತಿಯ ಬೆಳವಣಿಗೆಯನ್ನು ಹೊಂದುತ್ತಾ ಹೋದಂತೆ, ವಿದ್ಯೆಯ ಗುರಿಯು ಸಹ ಅದಕ್ಕೆ ಅನುಗುಣವಾಗಿ ವೃದ್ಧಿಸಿಕೊಳ್ಳುತ್ತಿದ್ದರು. ಪ್ರಾಚೀನ ಕಾಲದಲ್ಲಿ ವಿದ್ಯಾ ಕೇಂದ್ರಗಳೆಂದು ಕರೆಸಿಕೊಳ್ಳುವ ಸಂಸ್ಥೆಗಳಿರಲಿಲ್ಲ. ಆದರೆ ಗುರುಕುಲ ಪದ್ಧತಿ ಇತ್ತೆಂದು ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ವಿದ್ಯೆ ಕಲಿಸುವ ಗುರುವಿನ ಮನೆಯೇ

ಶಾಲೆಯಾಗಿತ್ತು. ವಿದ್ಯಾರ್ಥಿಗಳು ಪಾಠ ಪ್ರವಚನಗಳನ್ನು ಕಲಿಯುವ ಜೊತೆಗೆ ಗುರುವಿನ ಮನೆಯಲ್ಲಿ, ಗುರುಗಳ ಸೇವೆ ಪಾಲಿಸುತ್ತಿದ್ದರು. ಅಂದಿನ ಕಾಲದಲ್ಲಿ ಗುರುಗಳಾದವರು ಯಾವುದೇ ರೀತಿಯ ಸಂಭಾವನೆಯನ್ನು ಪಡೆಯದೆ, ವಿದ್ಯೆಯ ದಾಹವನ್ನು ನೀಗಿಸುತ್ತಿದ್ದರು. ಊರಿನ ಜನ ರಾಜರು, ಮಹಾ ಸಾಮಂತರು ಇನ್ನಿತರ ಅಧಿಕಾರಿಗಳು ಗುರುಕುಲಕ್ಕೆ ದಾನ–ದತ್ತಿ ನೀಡುತ್ತಿದ್ದರು. ಹೀಗೆ ದಾನ ಕೊಡುವುದರಿಂದ ಅವರಿಗೆ ಪುಣ್ಯವಾಗುತ್ತದೆ ಎಂದು ಭಾವಿಸಿ ಭೂದಾನ ಹಣದಾನ ಇನ್ನಿತರ ದಾನಗಳನ್ನು ನೀಡುತ್ತಿದ್ದರು. ಕರ್ನಾಟಕದ ಇತಿಹಾಸವನ್ನು ಗಮನಿಸಿದರೆ ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯಲ್ಲಿ ಅನೇಕ ದೇವಾಲಯಗಳ ಮಠಗಳ, ಅಗ್ರಹಾರಗಳ, ಬ್ರಹ್ಮಪುರಿಗಳು, ವಿದ್ಯಾಕೇಂದ್ರಗಳಾಗಿ ಬದಲಾವಣೆಯಾಗಿರುವುದನ್ನು ಗಮನಿಸಿದ್ದೇವೆ. ಇದು ಅಂದಿನ ಕಾಲದ ರಾಜಮನೆತನಗಳ ವಂಶವಳಿಯ ಇತಿಹಾಸದಿಂದ ತಿಳಿದುಬರುತ್ತದೆ. ಆಯಾ ರಾಜಮನೆತನದವರು ಹೊರಡಿಸಿದ ಶಾಸನಗಳಲ್ಲಿ ಅಂದಿನ ಕಾಲದ ಶಿಕ್ಷಣ ಮತ್ತು ವಿದ್ಯಾಕೇಂದ್ರಗಳ ಬಗ್ಗೆ ಮಾಹಿತಿ ತಿಳಿದುಬರುತ್ತದೆ.

ದೇವಾಲಯಗಳು, ಮಠಗಳು, ಬ್ರಹ್ಮಪುರಿಗಳು, ಬಸದಿಗಳು, ಪ್ರಾಚೀನ ಕಾಲದಿಂದಲೂ ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ತರವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಇಂತಹವುಗಳು ಸಾರ್ವಜನಿಕರಿಗೆ ಉಪಯುಕ್ತವಾಗಿದ್ದು, ಪ್ರಾರಂಭದಿಂದಲೂ ಶಿಕ್ಷಣವನ್ನು ನೀಡುವಂತಹ ಕೆಲಸವನ್ನು ಮಾಡುತ್ತಿವೆ. ಕರ್ನಾಟಕದಲ್ಲಿ ಅನೇಕ ಧರ್ಮಗಳಿಗೆ ಪೂರಕವಾದ ದೇವಾಲಯಗಳು ಬೆಳೆದು ನಿಂತಿವೆ. ಈ ದೇವಾಲಯಗಳು, ಶೈವ ವೈಷ್ಣವ ಜೈನ, ವೀರಶೈವ, ಕ್ರೈಸ್ತ, ಮಹಮದೀಯ ಪವಿತ್ರ ವಾಸಸ್ಥಾನಗಳು ಸಹ ಆಗಿದ್ದವು. ಈ ರೀತಿಯ ಪವಿತ್ರ ಸ್ಥಳಗಳಲ್ಲಿ ವಿದ್ಯೆಯನ್ನು ಕಲಿಯುವಂತಹವರಿಗೆ ವಿದ್ಯೆಯನ್ನು ಕಲಿಸುತ್ತಿದ್ದರು. ಅಂದಿನ ಕಾಲದ ಜನರು ಬ್ರಾಹ್ಮಣ ವಿದ್ವಾಂಸರನ್ನು ಒಂದು ಕಡೆ ಸೇರಿಸುವುದರಿಂದ ಕಲಿಯುವಂತಹ ಜನತೆಗೆ ವಿದ್ಯಾರ್ಜನೆಗೆ ಉಪಕಾರ ಆಗುತ್ತಿತ್ತು ಎಂದು ರಾಜರು ಸಹ ನಂಬಿದ್ದರು. ತಮ್ಮ ಪ್ರಾಂತ್ಯ ಸುವ್ಯವಸ್ಥಿತ ಮತ್ತು ಚಾಣಾಕ್ಷ ಆಡಳಿತವನ್ನು ನಿರ್ವಹಿಸಿಕೊಂಡು ಹೋಗಲು ಅವಸ್ಯಕವಿರುವ ಆಡಳಿತಾಧಿಕಾರಿಗಳು, ಮಂತ್ರಿಮಂಡಲ, ನ್ಯಾಯಾಧೀಶರು ಇನ್ನೂ ಮೊದಲಾದ ಬುದ್ಧಿವಂತರನ್ನು ತರಬೇತಿ ನೀಡಿ ಕೆಲಸಕ್ಕೆ ತೆಗೆದುಕೊಳ್ಳುತ್ತಿದ್ದರು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ವಿದ್ವಾಂಸರು ವಾಸವಾಗಿದ್ದ ನೆಲೆಗಳು ಬ್ರಹ್ಮಪುರಿ ಎಂದು ಕರೆಯಲಾಗುತ್ತಿತು. ಇದು ಸಹ ವಿದ್ಯಾಪ್ರಸಾರ ಕೇಂದ್ರವಾಗಿತ್ತೆಂದು ಹೇಳುತ್ತಾರೆ. ಅಗ್ರಹಾರ ಮತ್ತು ಬ್ರಹ್ಮಪುರಿಗಳು ಬ್ರಾಹ್ಮಣರ ಮೀಸಲು ಸ್ಥಳಗಳಾಗಿದ್ದವು. ಆದರೆ ಇವೆರಡರಲ್ಲಿಯೂ ವ್ಯತ್ಯಾಸಗಳಿವೆ. ಅಗ್ರಹಾರ ಎಂಬುದು ಒಂದು ಊರಾದರೆ ಬ್ರಹ್ಮಪುರಿ ಒಂದು ನಗರದ ಭಾಗವಾಗಿತ್ತು. ಆದರೆ ಇವೆರಡೂ

ಪ್ರಾಚೀನ ಕಾಲದ ಶಿಕ್ಷಣ ಕ್ಷೇತ್ರದಲ್ಲಿ ಪ್ರಮುಖವಾದ ಪಾತ್ರ ವಹಿಸಿವೆ. ಧರ್ಮವು ಭಾರತೀಯ ಸಮಾಜದಲ್ಲಿ ಅವಿಭಾಜ್ಯ ಅಂಗವಾಗಿದೆ.

ಅಲ್ಲದೆ ಅನೇಕ ಧರ್ಮಗಳ ನೆಲೆವೀಡಾಗಿದೆ. ವೈದಿಕ ಕಾಲದಿಂದಲೂ ಅನೇಕ ಧರ್ಮಗಳು ಇಲ್ಲಿ ತಲೆ ಎತ್ತಿದವು. ಉದಾಹರಣೆಗೆ ವೈಧಿಕ ಧರ್ಮ, ಜೈನಧರ್ಮ, ಭಾಗವತ ಧರ್ಮ ಇತ್ಯಾದಿ ಇತಿಹಾಸದುದ್ದಕ್ಕೂ ರಾಜಕೀಯ ಕ್ಷೇತ್ರದಲ್ಲಿ ಬದಲಾವಣೆಗಳನ್ನು ನಾವು ಕಾಣುತ್ತೇವೆ. ಆದರೆ ಯಾವುದೇ ರಾಜವಂಶದವರು ಅಧಿಕಾರದಲ್ಲಿ ಇರಲಿಲ್ಲ. ಅವರು ತಮ್ಮ ವೈಯಕ್ತಿಕ ಧರ್ಮವನ್ನಲ್ಲದೆ, ಉಳಿದೆಲ್ಲಾ ಸಮಕಾಲೀನ ಧರ್ಮಗಳನ್ನು ಪ್ರೋತ್ಸಾಹಿಸಿದ್ದನ್ನು ಕಾಣುತ್ತೇವೆ. ಹೀಗಾಗಿ ಧಾರ್ಮಿಕ ಬೆಳವಣಿಗೆಗೆ ಪ್ರಾಚೀನ ಕಾಲದಲ್ಲಿ ರಾಜಕೀಯ ಬದಲಾವಣೆಗಳಿಂದ ಶೈಕ್ಷಣಿಕ ಕ್ಷೇತ್ರಕ್ಕೆ ಬಹುಮುಖ್ಯವಾದ ಕೊಡುಗೆಯಾಗಿದೆ.

ಕರ್ನಾಟಕದ ಹಾಸನಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರವಣ ಬೆಳಗೊಳ ಶೈಕ್ಷಣಿಕ ಕೇಂದ್ರ, ಇದು ಜಗತ್ಪ್ರಸಿದ್ಧವಾದ ನೆಲೆಯೂ ಹೌದು. ಶೈಕ್ಷಣಿಕ ಎಂದರೆ ಕಲಿಕೆ ಎಂಬ ಅರ್ಥವಿದೆ. ಇಂತಹ ಕಲಿಕೆಗಳಿಂದ, ಭಾಷೆ, ಸಂಸ್ಕೃತಿ, ಕಲೆ, ಜನಪದ, ಯುದ್ಧ, ಶಿಲ್ಪಗಳು, ನಾಗರೀಕತೆ, ಧರ್ಮ, ಜನಾಂಗ, ಪ್ರವೃತ್ತಿ ಇನ್ನೂ ಮೊದಲಾದ ಅಂಶಗಳನ್ನು ಗಮನಿಸಿದರೆ, ಇಂತಹ ಕಲಿಕೆಗಾಗಿ ಪ್ರವಾಸಿಗರು ಬರುತ್ತಾರೆ. ಶ್ರವಣ ಬೆಳಗೊಳದ ಇಂದ್ರಗಿರಿ ಬೆಟ್ಟದ ಮೇಲೆ ವಿಶ್ವವಿಖ್ಯಾತ ಬಾಹುಬಲಿ ಶಿಲ್ಪವಿರುವುದರಿಂದ ಇದು ವಿಶ್ವದ ಏಕೈಕ ಏಕಶಿಲಾಮೂರ್ತಿಯಾಗಿರುವುದರಿಂದ ಇದರ ಒಂದು ಅಧ್ಯಯನಕ್ಕಾಗಿಯೇ ಶೈಕ್ಷಣಿಕ ಪ್ರವಾಸಕ್ಕೆ ಪ್ರವಾಸಿಗರು ಬರುತ್ತಾರೆ. ಶ್ರವಣಬೆಳಗೊಳ ಅಗ್ರಹಾರ, ಬೆಳುಗಲಿ, ನುಗ್ಗೇಹಳ್ಳಿ, ಆನೇಕೆರೆ, ಕೆಂಬಾಳು, ಸಂತೆಶಿವಾರ ಇನ್ನೂ ಮೊದಲಾದ ನೆಲೆಗಳು ಶೈಕ್ಷಣಿಕ ಕೇಂದ್ರಗಳಾಗಿವೆ. ಶ್ರವಣಬೆಳಗೊಳ ಜೈನರ ಪವಿತ್ರ ಯಾತ್ರಾಸ್ಥಳ. ಶಾಸನಗಳ ಹಿನ್ನೆಲೆಯಲ್ಲಿ ಈ ಊರನ್ನು ಕಟವಸ್ತ್ರ, ಕಟಸ್ತ್ರ, ಕಟ್ಟಪ್ಪ, ಕಟಪ, ಕಳಪ್ಪ, ವೆಳ್ಗೊಳ, ಬೆಳ್ಗೊಳ, ಧವಳಸರತೀರ್ಥ, ಬೆಳಗೊಳತೀರ್ಥ, ಶ್ವೇತ ಸರೋವರ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.[81] ಕ್ರಿ.ಶ.7ನೇ ಶತಮಾನದ ಶಾಸನದ ಪ್ರಕಾರ 41 ಜನರ ಸಲ್ಲೇಖನ ವಿಧಿವಿಧಾನಗಳಿಂದ ದೇಹವನ್ನು ಮುಡಿಸಿದ ಸಂಗತಿಯನ್ನು ತಿಳಿಸುವ ಜೈನ ಶಾಸನಗಳಿವೆ. ಶೈಕ್ಷಣಿಕವಾಗಿ ದೇವಾಲಯಗಳು ಜ್ಞಾನದ ಸೆಲೆಯೆಂದು ಹೇಳಬಹುದು. ಅಂದಿನ ಕಾಲದ ದೇವಾಲಯಗಳು ಶಿಕ್ಷಣ ಕೇಂದ್ರಗಳಾಗಿದ್ದವು. ಮಠ, ಮಾನ್ಯಗಳು ಸಹ ಶಿಕ್ಷಣ ಕ್ಷೇತ್ರಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿದೆ. ಶ್ರವಣಬೆಳಗೊಳದಲ್ಲಿ ವರ್ಷದ ಎಲ್ಲಾ ತಿಂಗಳುಗಳಲ್ಲಿಯೂ ಪ್ರವಾಸಿಗರು ಭೇಟಿ ನೀಡುತ್ತಾರೆ. ಆದರೂ ಸಹ ಕೆಲವು ತಿಂಗಳುಗಳು ಮಾತ್ರ ಪ್ರವಾಸಿಗರಿಗೆ ಪ್ರಿಯವಾದ

ಮಾಸಗಳಾಗಿವೆ. ಜನವರಿ, ಸೆಪ್ಟೆಂಬರ್, ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಪ್ರವಾಸಿಗರ ಹೆಚ್ಚಿನ ಸಂಖ್ಯೆಯಲ್ಲಿ ಭೇಟಿ ನೀಡುತ್ತಾರೆ. ಅದರಲ್ಲೂ ಮೇ ತಿಂಗಳು ಅತ್ಯಂತ ಹೆಚ್ಚು ಪ್ರವಾಸಿಗರು ಭೇಟಿ ನೀಡುವ ತಿಂಗಳಾಗಿದೆ. ಮನುಷ್ಯನ ಮನಸ್ಸನ್ನು ಸೆಳೆದು ಸಾಮಾನ್ಯ ಜನರುಗಳಲ್ಲಿ ಸಾಂಸಾರಿಕ ಕುತೂಹಲವನ್ನು ತಿಳಿಸುವಂತಹ ಶಿಲ್ಪಗಳಿವೆ. ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ, ಇನ್ನೂ ಮೊದಲಾದ ಘಟನೆಯನ್ನು ತಿಳಿಸುವ ಶಿಲ್ಪಗಳು ನುಗ್ಗೇಹಳ್ಳಿಯ ದೇವಾಲಯದಲ್ಲಿ ಕಂಡುಬರುತ್ತವೆ.

ಪ್ರಾಚೀನ ಕಾಲದ ದೇವಾಲಯಗಳು ಧಾರ್ಮಿಕ ಸಂಸ್ಥೆಯಾಗಿ ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸುತ್ತದೆ. ಅಲ್ಲದೆ ನಮ್ಮನ್ನು ಶಿಕ್ಷಕರನ್ನಾಗಿ ಮಾಡಿ ನಮ್ಮಲ್ಲಿನ ಬುದ್ಧಿಮಟ್ಟವನ್ನು ಹಾಗೂ ಜ್ಞಾನವನ್ನು ಹೆಚ್ಚಿಸಿ, ಮಾನವನು ವಿಶ್ವಮಾನವನನ್ನಾಗಿ ಮಾಡುವುದರಲ್ಲಿ ಸಹಕಾರಿಯಾಗಿದೆ. ಸಮಾಜದಲ್ಲಿ ನೆಲೆಗೊಂಡಿರುವ ಅನೇಕ ಧರ್ಮಗಳು ಅನೇಕ ಧಾರ್ಮಿಕ ಸಂಘಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಈ ಹಾದಿಯಲ್ಲಿ ಶೈಕ್ಷಣಿಕ ವಲಯದಲ್ಲಿ ಧಾರ್ಮಿಕ ವಲಯದಲ್ಲಿ ಅಮೋಘ ಸಾಧನೆಯನ್ನು ಮೆರೆದಿದೆ. ಶಾಲಾ ಕಾಲಾಜುಗಳನ್ನು ಹಾಗೂ ವಿದ್ಯಾಕೇಂದ್ರಗಳನ್ನು ಸ್ಥಾಪಿಸುವುದರ ಮೂಲಕ ಶೈಕ್ಷಣಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿದೆ. ಕ್ರಾಂತಿಕಾರಿ ಜಗಜ್ಯೋತಿ ಬಸವಣ್ಣನವರ ವಚನದಂತೆ ಒಂದು ಸಂಘ ಸಂಸ್ಥೆಗಳು ಜನಸಾಮಾನ್ಯರನ್ನು ಕತ್ತಲಿನಿಂದ ಬೆಳಕಿನ ಕಡೆಗೆ ಅಂದರೆ ಅಜ್ಞಾನದಿಂದ ಸುಜ್ಞಾನದ ಕಡೆಗೆ ತೆಗೆದುಕೊಂಡು ಹೋಗುವಂತೆ ಮಾಡಿದೆ. ಪ್ರಸ್ತುತ ಹಾಸನಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ವಿವಿಧ ನೆಲೆಯಲ್ಲಿ ನೆಲೆಗೊಂಡಿರುವ ಅನೇಕ ಧರ್ಮಗಳು ಬೆಳೆದುಬಂದಿವೆ. ಅವರು ತಮ್ಮದೇ ಆದ ಸಂಘಸಂಸ್ಥೆಗಳು ಮತ್ತು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಆ ಮೂಲಕ ಧರ್ಮದ ಜ್ಞಾನ ಹಾಗೂ ವಿದ್ಯಾದಾನವನ್ನು ನೀಡುತ್ತಿವೆ. ಈ ಎಲ್ಲಾ ಧರ್ಮಗಳು ವಿವಿಧ ಮಾದರಿಯಲ್ಲಿ ತಮ್ಮದೇ ಆದ ಶೈಕ್ಷಣಿಕ ಪ್ರಸಾರವನ್ನು ನಡೆಸುತ್ತಿದೆ. ಉದಾಹರಣೆಗೆ ವೀರಶೈವ, ಜೈನಧರ್ಮವು ಮಠಮಾನ್ಯಗಳು, ಶಲಾ ಕಾಲೇಜುಗಳನ್ನು ನಡೆಸುವುದರ ಮುಖಾಂತರ ಶೈಕ್ಷಣಿಕ ರಂಗದಲ್ಲಿ ತನ್ನದೇ ಆದ ಪರಂಪರೆಯನ್ನು ಬೆಳೆಸಿಕೊಂಡಿದೆ. ಮಠಮಾನ್ಯಗಳು ಕೇವಲ ಶಿಕ್ಷಣಕ್ಕೆ ಪೂರಕವಾಗಿರದೆ ನೈತಿಕ ಮೌಲ್ಯಗಳನ್ನು ಕಲಿಸುವುದರ ಮೂಲಕ ಹಲವಾರು ಬುದ್ಧಿವಂತ, ಪ್ರಜ್ಞಾವಂತ ಜನಸಮುದಾಯವನ್ನು ಬೆಳೆಯುವಂತೆ ಮಾಡುತ್ತಿದೆ. ಹಾಗೆಯೇ ಕ್ರೈಸ್ತ ಧರ್ಮವೂ ಕೂಡ ಶೈಕ್ಷಣಿಕ ಕ್ಷೇತ್ರದಲ್ಲಿ ವಿಶ್ವವ್ಯಾಪ್ತಿ ಕೊಡುಗೆಯನ್ನು ನೀಡುವಲ್ಲಿ ಸಹಕಾರಿಯಾಗಿದೆ. ಈ ಎಲ್ಲಾ ಬೆಳವಣಿಗೆಯ ಹಿನ್ನೆಲೆಯಿಂದ ದೇವಾಲಯಗಳು ಆಯಾ ಧರ್ಮದ ಮೂಲಕ ಧರ್ಮ ಪ್ರಚಾರದ ಜೊತೆ ಜೊತೆಯಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಬೆಳೆದುಕೊಂಡು ಬಂದಿದೆ ಎಂದು ತಿಳಿಯಬಹುದಾಗಿದೆ.

## ಅಡಿಟಿಪ್ಪಣಿಗಳು

1. ದಿವಾಕರ್ ಆರ್.ಆರ್.– ಕರ್ನಾಟಕದ ಪರಂಪರೆ, ಸಂಪುಟ–1, ಪು.170.
2. ಸರ್ ಜಾನ್ ಮಾರ್ಶಲ್– ಮೆಹೆಂಜೋದಾರೋ ಅಂಡ್ ದಿ ಈಮ್ದು ಸಿವಿಲೈಜೇಷನ್, ಪು.52.
3. ಅಲೈಹಿನ್ ದ್ಯಾನಿಯಲ್– ಹಿಂದೂ ಪಾಂಥಿ ಇಜಮ್– ಪು.188–190.
4. ಎಂ.ಚಿದಾನಂದಮೂರ್ತಿ– ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.
5. ಅದೇ
6. ದಿವಾಕರ್ ಆರ್.ಆರ್.– ಪೂರ್ವೋಕ್ತ, ಸಂ.1 ಪು.44.
7. ರಾಜಶೇಕರ್ ಎಸ್.– ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ, ಪು.12.
8. ಭಂಡಾರ್ಕರ್ ಆರ್.ಜಿ.– ವೈಷ್ಣವಿಸಮ್ ಶೈವಿಸಮ್ ಅಂಡ್ ಮೈನರ್ ರಿಲಜಿಯನ್ ಸಿಸ್ಟಮ್, ಪು.172.
9. ಅದೇ
10. ದಿವಾಕರ್ ಆರ್.ಆರ್.– ಪೂರ್ವೋಕ್ತ, ಸಂ.1 ಪು.181.
11. ಕೃಷ್ಣರಾಯ ಕೆ.– ಕರ್ನಾಟಕದ ಲಾಕುಳ ಶೈವರ ಇತಿಹಾಸ, ಪು.10.
12. ಎ.ಕ.ಸಂ.9, ಬೇಲೂರು ಶಾಸನ ಸಂಖ್ಯೆ–425.
13. ಅದೇ ಶಾಸನ ಸಂಖ್ಯೆ–51
14. ಅದೇ ಶಾಸನ ಸಂಖ್ಯೆ –487
15. ಎದುರ್ಕಳ ಕೆ– ಶಂಕರನಾರಾಯಣ ಭಟ್ಟ, ಹಿಂದೂ ಧರ್ಮದ ಪರಿಚಯ, ಪು.360.
16. ಕನ್ನಡ ರತ್ನಕೋಶ– ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪು.311.
17. ಎಂ.ಎ.ಆರ್.– 1936, ಪು.139.
18. ದಿವಾಕರ್ ಆರ್.ಆರ್.– ಪೂರ್ವೋಕ್ತ, ಸಂ.1 ಪು.258.
19. ಆರ್.ಎಸ್.ಶರ್ಮ– ಪ್ರಾಚೀನ ಭಾರತ– 1997, ಪು.61.
20. ಅದೇ ಪು.213.
21. ಎ.ಕ.ಸಂ.10, ಚನ್ನರಾಯಪಟ್ಟಣ ಶಾಸನ ಸಂಖ್ಯೆ–158.
22. ಎಂ.ಚಿದಾನಂದಮೂರ್ತಿ– ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.
23. ಅದೇ, ಪು.73.
24. ದಿವಾಕರ್ ಆರ್.ಆರ್.– ಕರ್ನಾಟಕದ ಪರಂಪರೆ, ಸಂಪುಟ–1, ಪು.354.

25. ಕನ್ನಡ ವಿಶ್ವಕೋಶ– ಸಂ.8, ಪು.356.

26. ಮಿರ್ಜಿ ಅಣ್ಣರಾಯ– ಜೈನಧರ್ಮ, ಪು.537.

27. ಹಂಪನಾಗರಾಜಯ್ಯ– ಸಾಂತರರು ಒಂದು ಅಧ್ಯಯನ, ಪು.231.

28. ಎ.ಕ.ಸಂ.02– ಶ್ರವಣ ಬೆಳಗೊಳದ ಶಿವಮಾರ ಶಾಸನದಿಂದ ವ್ಯಕ್ತವಾಗುತ್ತದೆ.

29. Ec.II., 1975, ಕ475

30. Ec.IX, (1990) ರಿ.144.

31. ಹಾಸನ ಜಿಲ್ಲೆಯ ಗ್ಯಾಜೆಟಿಯರ್.

32. ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಕಂಡುಬರುವಂತಹ ದೇವಾಲಯವನ್ನು ಗಮನಿಸಲಾಗಿರುತ್ತದೆ.

33. ಹಾ.ಮಾ.ನಾಯಕ ಮತ್ತು ಇತರರು – ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ 1981, ಪು.202.

34. ಆರ್.ವೆಂಕಟೇಶ್ ಮೂರ್ತಿ– ಇತಿಹಾಸ ದರ್ಶನ, ಸಂ.7, ಪು.34.

35. ಬಿ.ಎಲ್.ರೈಸ್‌ರವರು ಮೈಸೂರು ಗ್ಯಾಜೆಟಿಯರ್, ಸಂ.1, ಪು.222.

36. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–82.

37. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–82.

38. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–98.

39. ಅದೇ ಶ್ರವಣ ಬೆಳಗೊಳ ಶಾಸನ ಸಂಖ್ಯೆ–136.

40. ಎ.ಕ.ಸಂ. 10, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–82.

41. ಎ.ಕ.ಸಂ. 10, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–547.

42. ಪ್ರೊ.ಎಸ್.ರತ್ನಮ್ಮ, ಭಗ್ನ ಜಿನಾಲಯಗಳು, ಅತ್ತಿಮಬ್ಬೆ ಪ್ರಕಾಶನ, ಮೈಸೂರು–2001, ಪು.59.

43. ಎಫಿಗ್ರಾಫಿಯ ಕರ್ನಾಟಕ (ಪರಿಷ್ಕೃತ) ಸಂ.2, ಶ್ರವಣಬೆಳಗೊಳ, ಶಾಸನ ಸಂಖ್ಯೆ–157.

44. ಅದೇ ಶ್ರವಣ ಬೆಳಗೊಳ ಶಾಸನ ಸಂಖ್ಯೆ–504

45. ಅದೇ ಶ್ರವಣ ಬೆಳಗೊಳ ಶಾಸನ ಸಂಖ್ಯೆ–342 ಮತ್ತು 355

46. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–94.

47. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–92.

48. ಎ.ಕ.ಸಂ. 10, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–85.

49. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–136.

50. ಅದೇ ಶ್ರವಣ ಬೆಳಗೊಳ ಶಾಸನ ಸಂಖ್ಯೆ–26

51. ಚನ್ನರಾಯಪಟ್ಟಣ, ಶಾಸನ ಸಂಖ್ಯೆ–9

52. ಶ್ರವಣ ಬೆಳಗೊಳ, ಶಾಸನ ಸಂಖ್ಯೆ–532

53. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–134, ಕ್ರಿ.ಶ.1276

54. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–45.

55. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–357.

56. ಹಾಸನ ಜಿಲ್ಲೆಗೆ ಸೇರಿದ ಎಫಿಗ್ರಾಫಿಯ ಕರ್ನಾಟಕ ಸಂಪುಟಗಳಲ್ಲಿ ಕಾಣಬಹುದಾಗಿದೆ.

57. ಉದಾಹರಣೆಗೆ ಹೊಯ್ಸಳ ವಿಷ್ಣುವರ್ಧನನ ಹೆಂಡತಿ ಶಾಂತಲೆಯು ದೇವಾಲಯ ಮತ್ತು ಬಸದಿಗಳನ್ನು ನಿರ್ಮಿಸಿದ್ದಾಳೆ.

58. ಕೌಟಿಲ್ಯ ಅರ್ಥಶಾಸ್ತ್ರ ಗ್ರಂಥದಿಂದ ನಿರೂಪಿಸಲಾಗಿರುತ್ತದೆ.

59. ಹಾಸನ ಜಿಲ್ಲೆಯ ಪ್ರದೇಶಗಳಿಗೆ ಸೀಮಿತವಾದ ಎಫಿಗ್ರಾಫಿಯ ಕರ್ನಾಟಕ ಸಂಪುಟಗಳು ಮೈಸೂರು ವಿವಿ ಮೈಸೂರು ಇದರಲ್ಲಿ ಸಾಕಷ್ಟು ಸಂಖ್ಯೆ ಶಾಸನಗಳಿಂದ ತಿಳಿದುಬರುತ್ತದೆ.

60. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–347.

61. ಅದೇ ಶಾಸನ ಸಂಖ್ಯೆ–300

62. ಅದೇ ಶಾಸನ ಸಂಖ್ಯೆ–308

63. ಅದೇ ಶಾಸನ ಸಂಖ್ಯೆ–458

64. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–572

65. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–162.

66. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–52.

67. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–348.

68. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–1.

69. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–481

70. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–113

71. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–72

72. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–134

73. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–111

74. ಎ.ಕ.ಸಂ. 2, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–15

75. ಅದೇ

76. ಎ.ಕ.ಸಂ. 10, ಚನ್ನರಾಯಪಟ್ಟಣ, ಶಾಸನ ಸಂಖ್ಯೆ–130

77. ಶ್ರವಣ ಬೆಳಗೊಳ, ಶಾಸನ ಸಂಖ್ಯೆ–26

78. ಚನ್ನರಾಯಪಟ್ಟಣ, ಶಾಸನ ಸಂಖ್ಯೆ–75

79. ಹಾಸನ ಜಿಲ್ಲೆಯ ಶಾಸನಗಳನ್ನು ಅಧ್ಯಯನ ಮಾಡಿದಾಗ ಈ ರೀತಿಯ ವಿಚಾರಗಳು ಸ್ಪಷ್ಟವಾಗಿ ದೊರಕುತ್ತವೆ.

80. ಎ.ಕ.ಸಂ. 10, ಶ್ರವಣ ಬೆಳಗೊಳ, ಶಾಸನ ಸಂಖ್ಯೆ–34

81. ಶ್ರವಣ ಬೆಳಗೊಳ, ಶಾಸನ ಸಂಖ್ಯೆ–54

# ಅಧ್ಯಾಯ-6

## ಕರ್ನಾಟಕದ ವಾಸ್ತುಶಿಲ್ಪಕ್ಕೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣದ ಕೊಡುಗೆ

ಕರ್ನಾಟಕದ ಇತಿಹಾಸದಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಅತ್ಯಂತ ಮಹತ್ವ ಪೂರ್ಣವಾದ ಸ್ಥಾನಮಾನವಿರುವುದು ಕಂಡುಬರುತ್ತದೆ. ಕರ್ನಾಟಕವನ್ನು ಕುರಿತಂತೆ ವಾಸ್ತು ಮತ್ತು ಶಿಲ್ಪಕಲೆಗಳ ಬೆಳವಣಿಗೆಯನ್ನು ಗಮನಿಸಿದರೆ ಹಾಸನ ಜಿಲ್ಲೆ ಹಾಗೂ ಚನ್ನರಾಯಪಟ್ಟಣವು ಸಹ ಪ್ರಪಂಚದಲ್ಲಿಯೇ ಹೆಸರು ಪಡೆದಿರುವುದು ಕಂಡು ಬರುತ್ತದೆ. ವಾಸ್ತು ಮತ್ತು ಶಿಲ್ಪಕಲೆಯನ್ನು ಕುರಿತು ಹೊಸ ಹೊಸ ಪ್ರಯೋಗಗಳು ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಶಿಲ್ಪಕಲೆಗಳ ಸಂಶೋಧನೆಗಳು ನಡೆಯುತ್ತಿವೆ. ಇಂತಹ ಮಾದರಿಯ ಸಂಶೋಧನೆಗಳಿಂದ ವಾಸ್ತು ಮತ್ತು ಶಿಲ್ಪಕಲೆಯ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಪ್ರಾರಂಭದಲ್ಲಿ ದೇವಾಲಯಗಳು ಮಣ್ಣಿನಿಂದ ಮತ್ತು ಮರದ ವಾಸ್ತುವಿನಿಂದ ಕೂಡಿದ್ದು ತದನಂತರ ಕಲ್ಲಿನ ವಾಸ್ತು ಪರಂಪರೆ ಮುಂದುವರಿಯಿತು. ಮೊಟ್ಟ ಮೊದಲಬಾರಿಗೆ ಕರ್ನಾಟಕದಲ್ಲಿ ಕಲ್ಲಿನಿಂದ ನಿರ್ಮಿತವಾದ ದೇವಾಲಯಗಳನ್ನು ಪ್ರಾರಂಭಿಸಿದವರು ಬಾದಾಮಿಯ ಚಾಲುಕ್ಯರು ಇದರಿಂದ ಇವರ ಪರಂಪರೆಯಿಂದ ದಕ್ಷಿಣ ಭಾರತದಲ್ಲಿಯೇ ಕಲ್ಲಿನ ದೇವಾಲಯಗಳು ನಿರ್ಮಾಣಗೊಂಡವು. [1]

ಈ ರೀತಿಯ ಸಂಪ್ರದಾಯ, ಪರಂಪರೆ ಅಂದಿನ ಕಾಲದ ಸಾಂಸ್ಕೃತಿಕ ಸಂಬಂಧಗಳು ಅಲ್ಲದೆ ಒಬ್ಬರಿಗೊಬ್ಬರ ಸಹಕಾರ, ವಿನಿಮಯ ಇತ್ಯಾದಿಗಳಿಂದ ದಕ್ಷಿಣ ಭಾರತದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಕಲ್ಲಿನ ದೇವಸ್ಥಾನಗಳು ಬೆಳವಣಿಗೆಯಾಗುವುದಕ್ಕೆ ಸಹಕಾರಿಯಾಯಿತು. ಪ್ರಾಯಶಃ ಇಂತಹ ಪ್ರೇರಣೆಯೇ ಈ ಭಾಗದ ಅಂದರೆ ಚೆನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿ ಕಂಡು ಬರುವ ದೇವಾಲಯಗಳ ನಿರ್ಮಾಣವಾಗಿರಬಹುದು. ಇಂತಹ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆ ಒಳಗೆ ಈ ಭಾಗದ ವಾಸ್ತು ಮತ್ತು ಶಿಲ್ಪ ಕಲೆಯ ಉದಯಗೊಂಡು ಬಾದಾಮಿ ಚಾಲುಕ್ಯರ ನಂತರ ಕಾಲದಲ್ಲಿ ಬಂದು ಆಳ್ವಿಕೆ ನಡೆಸಿರುವ ರಾಜವಂಶಗಳಾದ ತಲಕಾಡಿನ ಗಂಗರು, ನೊಳಂಬರು, ರಾಷ್ಟ್ರಕೂಟರು, ಚೋಳರು, ಕಲ್ಯಾಣಿಚಾಲುಕ್ಯರು, ಹೊಯ್ಸಳರು, ಯಾದವರು, ಕಳಚೂರಿಗಳು, ಚಂಗಾಳ್ವರು, ಕೊಂಗಾಳ್ವರು, ವಿಜಯನಗರದ ಅರಸರು ಮತ್ತು ಮೈಸೂರು ಒಡೆಯರು ಇನ್ನೂ ಮುಂತಾದ ರಾಜವಂಶದ ರಾಜರುಗಳು ತಮ್ಮ ಆಶ್ರಯದಲ್ಲಿ ಕರ್ನಾಟಕದ ವಾಸ್ತುಶಿಲ್ಪ ಕಲೆಯ ಬೆಳವಣಿಗೆಯೂ ನಿರಂತರವಾಗಿ ಬೆಳೆಯಲು ಅಲ್ಲದೆ ಸುಂದರವಾದ ದೇವಾಲಯಗಳು ಕಲಾ ಕುಸುರಿನಿಂದ ಕೂಡಿದ ಶಿಲ್ಪ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಈ ಮೇಲೆ ತಿಳಿಸಿರುವ ರಾಜರುಗಳು ಹಿಂದೂ ಧರ್ಮಕ್ಕೆ ಕೊಟ್ಟಂತಹ ಪ್ರೋತ್ಸಾಹವನ್ನು ಜೈನಧರ್ಮಕ್ಕೂ ನೀಡಿರುವುದು ಕಂಡು ಬರುತ್ತದೆ. ಈ ಕಾರಣದಿಂದ ಜೈನ ಧರ್ಮಕ್ಕೂ ನೀಡಿದ ಮೈತ್ರಿಭಾವದಿಂದ ಸಮಾಜದಲ್ಲಿ ಒಂದು ರೀತಿಯಲ್ಲಿ ಪ್ರೀತಿ, ಪ್ರೇಮ, ಸೌಹಾರ್ದತೆ ಬೆಳೆಯಲು ಪ್ರೇರಣೆಯಾಯಿತ್ತೆಂದು ತಿಳಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಗಮನಿಸಿದರೆ ಪ್ರಾಚೀನ ಪರಂಪರೆಯು ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ನಿರಂತರವಾಗಿ ಮುಂದುವರಿಯಲು ಅಂದಿನ ಕಾಲದಲ್ಲಿ ಕರ್ನಾಟಕ ಪ್ರಾಂತ್ಯಗಳನ್ನು ರಾಜಕೀಯವಾಗಿ ಆಡಳಿತ ನಡೆಸಿದ ಎಲ್ಲಾ ರಾಜ ವಂಶಸ್ಥರೂ, ಅಧಿಕಾರಿಗಳು ಹಾಗೂ ಜನಸಾಮಾನ್ಯರು ತಮ್ಮದೇ ಆದ ರೀತಿಯಲ್ಲಿ ಇಂತಹ ಕಾರ್ಯಗಳಿಗೆ ವಿಶಿಷ್ಟವಾದ ಕೊಡುಗೆಗಳನ್ನು ನೀಡಿದ್ದಾರೆ ಎಂಬುದು ಬಿಟ್ಟು ಹೋಗಿರುವ ದೇವಾಲಯಗಳಿಂದ ಮತ್ತು ಶಾಸನಧಾರಗಳಿಂದ ತಿಳಿದು ಬರುತ್ತದೆ. ತಲಕಾಡಿನ ಗಂಗರ ಕಾಲದ ನಂತರ ಕರ್ನಾಟಕದ ರಾಜಕೀಯದಲ್ಲಿ ಅನೇಕ-ಅನೇಕ ರೀತಿಯ ಬದಲಾವಣೆಗಳಾಗಿರುವುದನ್ನು ಸಹ ಕಾಣಬಹುದು. [2]

ಉತ್ತರ ಕರ್ನಾಟಕದಲ್ಲಿ ಮಾನ್ಯಖೇಟದ ರಾಷ್ಟ್ರಕೂಟರು ಆಳ್ವಿಕೆ ನಡೆಸಿ ಅನೇಕ ಭವ್ಯ ದೇವಾಲಯಗಳನ್ನು ಕಟ್ಟಿಸಿದ್ದಾರೆ. ತದನಂತರ ಕ್ರಿ.ಶ. 10ನೇ ಶತಮಾನದ ಕೊನೆಯಲ್ಲಿ ಕಲ್ಯಾಣಿ ಚಾಲುಕ್ಯರು ತಮ್ಮ ರಾಜ್ಯವನ್ನು ಸ್ಥಾಪಿಸಿ ಇವರು ತಮ್ಮ ರಾಜಧಾನಿಯಾದ ಕಲ್ಯಾಣಿಯಲ್ಲಿ ಹೆಚ್ಚು ಕಡಿಮೆ ಸುಮಾರು 250 ವರ್ಷಗಳ ಕಾಲ ರಾಜಕೀಯವಾಗಿ ಆಡಳಿತ ನಡೆಸಿ ನೂರಾರು ಸಂಖ್ಯೆಯಲ್ಲಿ ಉತ್ತಮವಾದ ದ್ರಾವಿಡ ವೇಸರ ಶೈಲಿಯ ದೇವಾಲಯಗಳನ್ನು ನಿರ್ಮಿಸಿದರು. ಈ ದೇವಾಲಯಗಳನ್ನು ಕಟ್ಟಬೇಕಾದರೆ ಇವರಿಗೆ ಆಸಕ್ತಿ ದೊರೆತ್ತಿದ್ದು ಬಾದಾಮಿ ಚಾಲುಕ್ಯರಿಂದ ಎಂಬುದು ಸಹ ಇತಿಹಾಸ ಪುಟಗಳಿಂದ ತಿಳಿದು ಬರುತ್ತದೆ. ಕಲ್ಯಾಣಿ ಚಾಲುಕ್ಯರು ನಿರ್ಮಿಸಿದ ಈ ರೀತಿಯ ದ್ರಾವಿಡ ಮತ್ತು ವೇಸರ ಶೈಲಿಗಳ ಉಗಮದಿಂದಾಗಿ ಅಲ್ಲದೆ ಅಂದಿನ ಕಾಲದ ಹೊತ್ತಿಗೆ ನಡೆದ ಅನೇಕ ಪ್ರಯೋಗಗಳಿಂದಾಗಿ ದ್ರಾವಿಡ ಶೈಲಿಯ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಹಲವಾರು ರೀತಿಯ ಬದಲಾವಣೆಗಳನ್ನು ತಮ್ಮ ದೇವಾಲಯಗಳಲ್ಲಿ ಸೇರಿಸಿಕೊಂಡಿರುವುದು ಸಹ ಕಂಡು ಬರುತ್ತದೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಚಾಲುಕ್ಯರು ನೀಡಿರುವ ಒಂದು ಮಹತ್ವದ ಬದಲಾವಣೆ ಎಂದರೆ ದೇವಾಲಯಗಳ ಕಟ್ಟುವ ಸಂದರ್ಭದಲ್ಲಿ ವಾಸ್ತು ಕೃತಿಯನ್ನು ಬದಲಾಯಿಸಿರುವುದು ಸಹ ಗಮನಾರ್ಹವಾದ ವಿಷಯವಾಗಿದೆ. ಅದುವರೆಗೂ ದೇವಾಲಯಗಳನ್ನು ನಿರ್ಮಿಸುವ ಸಮಯದಲ್ಲಿ ಗ್ರ್ಯಾನೈಟ್ ಅಥವಾ ಮರಳುಕಲ್ಲುಗಳಿಗೆ ಬದಲಾಗಿ ಮೃದುವಾದ ಸೋಪುಗಲ್ಲುಗಳನ್ನು ಬಳಸಿರುವುದು ಕಂಡು ಬರುತ್ತದೆ. ಇದರಿಂದಾಗಿ ವಾಸ್ತು ಅಲಂಕರಣೆಯಲ್ಲಿ ಇಡೀ ದ್ರಾವಿಡ ಶೈಲಿಯ ಬೆಳವಣಿಗೆಯೇ ಬದಲಾಗಿ ಹೋಯಿತು. ಮೊದಲಿಗೆ ಸುಂದರವಾಗಿ, ಸರಳವಾಗಿ ನಿರ್ಮಾಣಗೊಂಡಿದ್ದ ದ್ರಾವಿಡ

ಶೈಲಿಯ ದೇವಾಲಯಗಳು ಹೆಚ್ಚು ಹೆಚ್ಚಾಗಿ ಅಲಂಕರಣೆಯಿಂದ ಮತ್ತು ಸೂಕ್ಷ್ಮವಾದ ಕೆತ್ತನೆಗಳಿಂದ ನಿರ್ಮಿತಗೊಂಡವು. ಈ ಕಾರಣದಿಂದಾಗಿ ಪ್ರಾರಂಭದ ಮೂಲ ವಾಸ್ತು ಲಕ್ಷಣವನ್ನು ಮತ್ತು ಮೂಲ ವಾಸ್ತು ಪರಂಪರೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಈ ಹಿನ್ನಲೆಯಿಂದ ಕೆಲವೊಂದು ದೇವಾಲಯಗಳು ದ್ರಾವಿಡ ದೇವಾಲಯ ವೆನಿಸಿಕೊಂಡರು ಸಹ, ಅದರ ಹೊರ ಭಾಗದಲ್ಲಿ ಕಂಡು ಬರುವ ವಾಸ್ತು ಲಕ್ಷಣದಿಂದಾಗಿ ಕಲಾಭಿತಜ್ಞರು ಈ ಮಾದರಿಯ ಶೈಲಿಯನ್ನು ಕಲ್ಯಾಣಿ ಚಾಲುಕ್ಯರ ಶೈಲಿ ಎಂದೇ ಪ್ರತ್ಯೇಕವಾಗಿ ಕರೆಯುವ ಬಳಕೆಗೆ ಸಹಕಾರಿಯಾಯಿತು. [3] ಕ್ರಿ.ಶ. 11ನೇ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರಾರಂಭವಾಗಿ ಕಾಲಾನುಕ್ರಮದಲ್ಲಿ ದಕ್ಷಿಣ ಕರ್ನಾಟಕದ ಶಿವಮೊಗ್ಗ ಜಿಲ್ಲೆಯವರೆಗೂ ಬೆಳೆದಿರುವುದನ್ನು ಇದರಿಂದಾಗಿ ಈ ಭಾಗದಲ್ಲಿ ನೂರಾರು ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಯಿತು. ಈ ಮಾದರಿಯಲ್ಲಿ ಬೆಳವಣಿಗೆಯಿಂದ ಕೆಲವು ರೀತಿಯಲ್ಲಿ ಸಣ್ಣ ಪುಟ್ಟ ಬದಲವಣೆಗಳೊಂದಿಗೆ ಹೊಯ್ಸಳ ವಾಸ್ತು ಶೈಲಿಯ ಬೆಳವಣಿಗೆಯಾಗಿ ಕರ್ನಾಟಕದಲ್ಲಿ ಹೊಯ್ಸಳ ಶೈಲಿಯು ಪ್ರಖ್ಯಾತಿ ಹೊಂದಿ ಹೊಯ್ಸಳರ ಶೈಲಿಯಂದೇ ಹೆಸರು ಮಾಡಿರುವುದು ಕಂಡುಬರುತ್ತದೆ. [4] ಕಲ್ಯಾಣಿ ಚಾಲುಕ್ಯ ಶೈಲಿಯ ವಾಸ್ತು ಮಾಧ್ಯಮದಿಂದ ಬೆಳೆದ ಶೈಲಿ ಎಂದರೆ ಅದು ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳ ಶೈಲಿ ಎಂದು ಅಭಿಪ್ರಾಯವಿದೆ. ಹೊಯ್ಸಳರು ಚಾಲುಕ್ಯರ ರೀತಿಯಲ್ಲೇ ವಾಸ್ತು ಮಾಧ್ಯಮವನ್ನು ಬಳಸಿಕೊಂಡು ಈ ಭಾಗದಲ್ಲಿ ನೂರಾರು ದೇವಾಲಯಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಅದರೆ ಜೊತೆಗೆ ನಾಗರ ಮತ್ತು ದ್ರಾವಿಡ ಶೈಲಿಯ ಕೆಲವು ಪ್ರಮುಖ ಅಂಶಗಳನ್ನು ಸೇರಿಸಿಕೊಂಡು ಮಿಶ್ರ ಮಾಡಿ ವೇಸರ ಶೈಲಿಯ ಬೆಳವಣಿಗೆಯನ್ನು ತಂದರು. [5] ಹೊಯ್ಸಳರು ಕರ್ನಾಟಕದ ಬೇರೆ ಬೇರೆ ಪ್ರಾಂತ್ಯದಲ್ಲಿ ರಾಜಕೀಯವಾಗಿ ತಮ್ಮದೆಯಾದ ಹಿಡಿತವನ್ನು ಸಾಧಿಸಿ ಸುಮಾರು 400ವರ್ಷಗಳ ಕಾಲ ನಿರಂತರವಾಗಿ ಕರ್ನಾಟಕದಲ್ಲಿ ಆಡಳಿತವನ್ನು ನಡೆಸಿದರು.

ಇವರ ಆಡಳಿತದ ಕಾಲದಲ್ಲಿ ಕರ್ನಾಟಕವೂ ಕೇವಲ ರಾಜಕೀಯವಾಗಿ ಮಾತ್ರ ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲ. ಆದರೆ ಹೊಯ್ಸಳರ ಕಾಲವೂ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದ್ದಿತ್ತು. ಹೊಯ್ಸಳರು ವೇಸರ ಶೈಲಿಯ ಬೆಳವಣಿಗೆಯ ಜೊತೆಗೆ ಸಾಕಷ್ಟು ಸಂಖ್ಯೆಯಲ್ಲಿ ಅಲಂಕರಣೆಯಲ್ಲಿ ಕೆತ್ತನೆಯಲ್ಲಿ ದ್ರಾವಿಡ ವಾಸ್ತು ಪರಂಪರೆಯನ್ನು ಬೆಳೆಯಲು ಕಾರಣ ಕರ್ತರಾದರು. ಆದರೆ ಇದರ ದ್ರಾವಿಡ ವಾಸ್ತು ಶೈಲಿಯ ದೇವಾಲಯಗಳಂತೆ ಕಂಡುಬರುವುದಿಲ್ಲ. ಆದರೆ ದ್ರಾವಿಡ ವಾಸ್ತುಶೈಲಿಯ ಅಲಂಕಾರ ಕೆತ್ತನೆಗಳನ್ನು ಪೂರ್ಣ

ಪ್ರಮಾಣದ ಕಟ್ಟಡಗಳನ್ನಾಗಿ ಪರಿವರ್ತಿಸಿದವರಲ್ಲಿ ಬಾದಾಮಿ ಚಾಲುಕ್ಯರೇ ಮೊದಲಿಗರು ಎಂದು ಮಾತ್ರ ಹೇಳಬಹುದಾಗಿದೆ.

ಮಹಾಕೂಟದ ಬಾಣಂತಿಗುಡಿ ಮತ್ತು ಐಹೊಳೆಯ ರಾವಣಪಡಿ ಗುಹಾಲಯದ ಸಮೀಪದ ಚಿಕ್ಕ ದೇವಾಲಯ ಇಂಥ ಮೊಟ್ಟಮೊದಲ ದೇವಾಲಯಗಳಿಗೆ ಉದಹಾರಣೆ ಯಾಗಿದೆ.[6] ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳರ ಈ ಹೊಸ ಪ್ರಯೋಗಗಳಿಂದಾಗಿ ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗುತ್ತಿದ್ದಂತಹ ಶುದ್ಧ ದ್ರಾವಿಡ ದೇವಾಲಯಗಳು ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಸೋಪುಗಲ್ಲಿನಲ್ಲಿ ನಿರ್ಮಾಣಗೊಂಡವು. ಆದರೆ ಚೋಳಾಕ್ರಮಿತ ಆಗ್ನೇಯ ಕರ್ನಾಟಕದ ಸಾಕಷ್ಟು ಪ್ರದೇಶ ಮಾತ್ರ ಈ ಪ್ರಭಾವದಿಂದ ದೂರವೇ ಉಳಿದಿತ್ತು. ಇದಕ್ಕೆ ಕಾರಣವೇನೆಂದರೆ ತಂಜಾವೂರಿನ ಚೋಳರು ಈ ಭಾಗದಲ್ಲಿ ಪ್ರಬಲರಾಗಿ ಬೇರೂರುವಂತೆ ಮಾಡಿದ್ದ ತಮಿಳು ಸಂಸ್ಕೃತಿಯ ಸಾಂಸ್ಕೃತಿಕ ಪರಂಪರೆ ಅಲ್ಲದೆ ತಮಿಳು ಪರಂಪರೆಯ ವಾಸ್ತುಶಿಲ್ಪ ಪರಂಪರೆ ಹೊಯ್ಸಳ ರಾಜ್ಯದ ಎಲ್ಲೆಡೆ ಸೋಪುಗಲ್ಲಿನ ಹೊಯ್ಸಳ ನಿರ್ಮಿತ ದೇವಾಲಯಗಳು ಕಂಡು ಬಂದವು. ಆದರೆ ಹೊಯ್ಸಳರು ತಮ್ಮದೇ ಆದಂತಹ ವಾಸ್ತು ಮಾಧ್ಯಮವನ್ನು ಬಳಸಿ ಶಿಲ್ಪಗಳನ್ನು ಇನ್ನೂ ಹೆಚ್ಚು, ಹೆಚ್ಚು ಸುಂದರವಾಗಿ ದೇವಾಲಯಗಳಲ್ಲಿ ಕಾಣುವಂತೆ ಮಾಡಿದರು.

ಹೊಯ್ಸಳರು ಕರ್ನಾಟಕದಲ್ಲಿ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟ ದೇವಾಲಯಗಳನ್ನು ಕಟ್ಟಿದ್ದಾರೆ. ಇವರು ಕಟ್ಟಿರುವ ದೇವಾಲಯಗಳು ದ್ರಾವಿಡ ಶೈಲಿಗೆ ವಿಭಿನ್ನವಾಗಿದ್ದರೂ ಕೂಡ ದ್ರಾವಿಡ ವಾಸ್ತು ಪರಂಪರೆಯ ಶೈಲಿಯ ಬೆಳವಣಿಗೆಯನ್ನು ಹೊಯ್ಸಳರು ಕಾಪಾಡಿಕೊಂಡು ಬಂದಿರುವುದು ಕಂಡು ಬರುತ್ತದೆ. ಹೊಯ್ಸಳರ ಕಾಲದ ಕಂಬಗಳ ರಚನೆ, ಭಿತ್ತಿ ಶಿಲ್ಪಗಳ ರಚನೆ, ಜಗತಿ, ಅಧಿಷ್ಠಾನ ಮತ್ತು ಅಧಿಷ್ಠಾನದ ಪಟ್ಟಿಕೆಗಳ ರಚನೆ ಇನ್ನೂ ಮೊದಲಾದವು ಕರ್ನಾಟಕದ ಇತಿಹಾಸದಲ್ಲಿ ಮಹತ್ತರವಾದ ಸ್ಥಾನಮಾನವನ್ನು ಪಡೆದುಕೊಂಡಿದೆ. ದೇವಾಲಯದ ಹೊರ ಭಿತ್ತಿಯೇ ಶಿಲ್ಪಗಳು ದೇವಾಲಯದ ಸೌಂದರ್ಯಕ್ಕೆ ಮೆರಗು ನೀಡುವಂತಿವೆಯೇ ಹೊರತು ಸ್ವತಂತ್ರ ಶಿಲ್ಪಗಳಷ್ಟು ಆ ಶಿಲ್ಪಗಳು ಆಕರ್ಷಕವೆನಿಸುವುದಿಲ್ಲ. ಚನ್ನರಾಯಪಟ್ಟಣ ತಾಲೂಕಿನ ಆಯಾ ಪ್ರದೇಶದಲ್ಲಿ ದೇವಾಲಯಗಳನ್ನು ಗಮನಿಸಿದರೆ ವಾಸ್ತು ಮತ್ತು ಶಿಲ್ಪ ಶೈಲಿಗಳು ಗಂಗರ ಕಾಲದಿಂದ ಪ್ರಾರಂಭವಾಗಿ ಮೈಸೂರು ಅರಸರ ಕಾಲದಲ್ಲೂ ಅತ್ಯಂತ ಉನ್ನತ ಮಟ್ಟದಲ್ಲಿ ವಾಸ್ತು ರಚನೆ ಪ್ರಾರಂಭವಾಗಿದೆ ಎನ್ನಬಹುದು. ಗಂಗರ ಕಾಲದಿಂದ ಹೆಚ್ಚು ಪ್ರಭಾವಿತವಾದಂತೆ ಕಂಡು

ಬರುತ್ತದೆ. ಉದಾಹರಣೆಗೆ ಶ್ರವಣಬೆಳಗೊಳದಲ್ಲಿ ಗಂಗರ ಕಾಲಕ್ಕೆ ಸೇರಿಸಬಹುದಾದ ಅನೇಕ-ಅನೇಕ ದೇವಾಲಯಗಳು, ಬಸದಿಗಳೂ, ಶಿಲ್ಪಗಳು, ಮಾನಸ್ತಂಭಗಳು ಕಂಡು ಬರುತ್ತವೆ. [7]

ಶ್ರವಣಬೆಳಗೊಳದ ಪ್ರಾಂತ್ಯದಲ್ಲಿ ಕಂಡು ಬರುವ ಶಿಲ್ಪ ಕಲಾ ಬೆಳವಣಿಗೆಯಲ್ಲಿ ವಿವಿಧ ರೀತಿಯ ಕಾಲಮಾನ, ಕಾಲಘಟ್ಟಗಳನ್ನು ನಾವು ಕಾಣಬಹುದಾಗಿದೆ. ದೇವಸ್ಥಾನಗಳಲ್ಲಿ ಅದರಲ್ಲೂ ವಿಶೇಷವಾಗಿ ದೇವಾಲಯಗಳ ತಲವಿನ್ಯಾಸ, ಬಾಹ್ಯವಿನ್ಯಾಸಗಳು ಹೊಸ ಆಯಾಮದೊಂದಿಗೆ ಅತ್ಯುನ್ನತವಾದಂತಹ ಬೆಳವಣಿಗೆಯ ಶಿಖರವನ್ನು ತಲುಪಿದೆ. ಹಾಸನ ಜಿಲ್ಲೆಯಲ್ಲಿ ಕಂಡು ಬರುವ ಹೊಯ್ಸಳರ ಕಾಲದ ಸ್ಥಪತಿಗಳು ಕಟ್ಟಿಸಿದ ಹಾಗೂ ದೇವಾಲಯಗಳಲ್ಲಿ ಕಂಡು ಬರುವ ನಕ್ಷತ್ರಾಕಾರದ ತಳವಿನ್ಯಾಸವಿದೆ ಮತ್ತು ಬಾಹ್ಯ ವಿನ್ಯಾಸ ಹಾಗೂ ಶಿಖರಗಳ ಕಲ್ಪನೆ ಹಾಸನ ಜಿಲ್ಲೆಯ ನಾನಾ ಪ್ರಾಂತ್ಯಗಳ ದೇವಾಲಯಗಳಲ್ಲಿ ಪರ್ಯಾವಸನವಾಗಿದೆ. ಇವುಗಳ ಜೊತೆಯಲ್ಲಿ ದೇವಾಲಯದ ಅಲಂಕರಣ ಹಾಗೂ ದೇವಾಲಯದ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸುವ ಕಂಬಗಳು, ತೊಲೆ, ಭುವನೇಶ್ವರಿಗಳು, ಭಿತ್ತಿ, ಶಿಲ್ಪಗಳು, ಶಿಖರಗಳು, ವಲಭಿಗಳು ಸುಂದರ ರಚನೆಗಳು ನಯನಾಜೂಕಾಗಿ ಉತ್ತಮವಾದ ಬೆಳವಣಿಗೆಯನ್ನು ಹೊಂದಿರುವುದು ಕಂಡು ಬರುತ್ತದೆ. ಉದಾಹರಣೆಗೆ ಯಂತ್ರದಿಂದ ತಿರುಗಿಸಿ ವೃತ್ತಾಕಾರದ ದುಂಡಾದ ದಿಂಡುಳ್ಳ ಕಂಬಗಳು ಹೊಯ್ಸಳರ ಕಾಲದ ವಾಸ್ತು ಲಕ್ಷಣಗಳ ಬೆಳವಣಿಗೆಯ ಪ್ರಮುಖ ಭಾಗವಾಗಿದೆ. ಭುವನೇಶ್ವರಿಯ ಭಾಗಗಳಲ್ಲಿ ಸಣ್ಣ ಸಣ್ಣ ಶಿಲ್ಪಗಳು ಸುಂದರವಾಗಿ ಮೂಡಿ ಬಂದಿರುತ್ತವೆ. ಆನೆಕೆರೆ, ಅಗ್ರಹಾರಬೆಳುಗಲಿ, ನುಗ್ಗೇಹಳ್ಳಿ ಮೊದಲಾದ ಊರುಗಳಲ್ಲಿ ಕಂಡು ಬರುವ ದೇವಾಲಯಗಳೇ ಇದಕ್ಕೆ ಪೂರಕವಾಗಿ ಸಾಕ್ಷಿಯಾಗಿವೆ. ಇವುಗಳು ದೇವಾಲಯದಲ್ಲಿ ಒಳ ಅಲಂಕರಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುವುದು ಕಂಬಗಳಲ್ಲಿ ಕಾಣುತ್ತೇವೆ. ದ್ರಾವಿಡ ಕಲೆಯ ಬೆಳವಣಿಗೆಯು ನಿರಂತರವಾಗಿ ಬೆಳೆದು ಬಂದಿರುವ ಇತಿಹಾಸವನ್ನು ನೋಡಿದರೆ ಅದು ಕರ್ನಾಟಕದಲ್ಲಿ ಮಾತ್ರ ಎಂದರೆ ತಪ್ಪಾಗಲಾರದು. ಮೊದಲಿಗೆ ಕದಂಬ ಮತ್ತು ಗಂಗರಿಂದ ಪ್ರಾರಂಭವಾಗಿ ಬೆಳವಣಿಗೆಗೊಂಡ ಶುದ್ಧ ವಾಸ್ತು ಸಂಪ್ರದಾಯ ಚೋಳರ ಕಾಲದಲ್ಲಿ ಮುಂದುವರಿದಿರುವುದು ಕಂಡು ಬರುತ್ತದೆ. [8] ಮುಂದೆ ಹೊಯ್ಸಳರ ಕಾಲದಲ್ಲಿ ಬೇರೆ-ಬೇರೆ ವಾಸ್ತು ಶೈಲಿಯ ಬೆಳವಣಿಗೆಯಿಂದ ಪ್ರಭಾವಿತವಾಗದೆ ಶುದ್ಧವಾಗಿಯೇ ಉಳಿದು, ಮುಂದೆ ವಿಜಯನಗರ ಅರಸರ ಕಾಲದಲ್ಲಿ, ಆದರೆ ಮತ್ತೆ ಬೆಳವಣಿಗೆಯಾಗಿದೆ. ದ್ರಾವಿಡ ವಾಸ್ತುವಿನ ಈ ರೀತಿಯ ಯಾವುದೇ ತಡೆಯಿಲ್ಲದೆ ಬೆಳವಣಿಗೆಗೆ ಮುಖ್ಯ ಕಾರಣಕರ್ತರಾದರು. ಆ ಕಾಲದಲ್ಲಿ ಆಳ್ವಿಕೆ ನಡೆಸಿರುವ ರಾಜ

ಸಂತತಿಯವರು ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕಲೆ ಮತ್ತು ವಾಸ್ತು ಪರಂಪರೆಗೆ ಪ್ರಾಮುಖ್ಯತೆ ನೀಡಿದ್ದಾರೆ.

ಗಂಗರ ಕಾಲದಲ್ಲಿ ಈ ಭಾಗದಲ್ಲಿ ಹೆಚ್ಚು ಶೈವ ದೇವಾಲಯಗಳು ಅಲ್ಲದೆ ಜೈನ ಬಸದಿಗಳು ನಿರ್ಮಾಣಗೊಂಡಿವೆ. ಈ ಕಾರಣದಿಂದ ಗಂಗರು ಮೂಲತಃ ಜೈನ ಧರ್ಮಿಯರಾಗಿದ್ದರೆಂದು ಹೇಳಬಹುದಾಗಿದೆ. ಇವರ ವಾಸ್ತುಶಿಲ್ಪದ ಅನುಕರಣೆಯ ಮಾದರಿಯನ್ನು ನೊಳಂಬರ ಕಾಲದಲ್ಲಿಯೂ ಇರುವುದು ಕಂಡು ಬರುತ್ತದೆ. [9] ಈ ಎಲ್ಲಾ ಬೆಳವಣಿಗೆಯನ್ನು ಗಮನಿಸಿದರೆ ಕ್ರಿ.ಶ. 10–13ನೇ ಶತಮಾನಗಳು ಕರ್ನಾಟಕದಲ್ಲಿ ವಿಶೇಷ ಕಲಾ ಚಟುವಟಿಕೆಗಳ ಬೆಳವಣಿಗೆಯನ್ನು ಕಾಣುವಂತಾಗಿದೆ. ಈ ಮೇಲಿನ ಕೆಲವೊಂದು ಆಧಾರಗಳಿಂದ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹಲವಾರು ರಾಜ ಸಂತತಿಯ ರಾಜರುಗಳು ದೇವಾಲಯಗಳನ್ನು ನಿರ್ಮಿಸುವ ಪರಿಪಾಠವನ್ನು ಬೆಳೆಸಿಕೊಂಡಿರುವುದು ತಿಳಿದುಬರುತ್ತದೆ.

ಚನ್ನರಾಯಪಟ್ಟಣ ತಾಲೂಕು ಪ್ರದೇಶದ ದೇವಾಲಯಗಳನ್ನು ಗಮನಿಸಿದರೆ ಶೈವ, ವೈಷ್ಣವ, ಜೈನಬಸದಿಗಳು ಕಂಡು ಬರುತ್ತವೆ. ಅದರಲ್ಲೂ ಈ ತಾಲೂಕಿನಲ್ಲಿ ವಿಜಯನಗರ ಅರಸರ ಮತ್ತು ಮೈಸೂರು ಒಡೆಯರ ಕಾಲದಲ್ಲಿ ಜೈನ ಬಸದಿಗಳ ನಿರ್ಮಾಣ ಕಾರ್ಯ ಕಡಿಮೆ ಎನ್ನಬಹುದು. ಚನ್ನರಾಯಪಟ್ಟಣ ತಾಲೂಕಿನ ಕುಂದೂರುನಲ್ಲಿ ಕಂದೂರು ಮಠ ಮತ್ತು ಶಿವದೇವಾಲಯ, ಸುಬ್ರಮಣೇಶ್ವರ, ಚನ್ನಕೇಶವ, ಈಶ್ವರ ದೇವಾಲಯಗಳಾದ ಬಾಗೂರುನಲ್ಲಿ ನರಸಿಂಹಸ್ವಾಮಿ ದೇವಾಲಯ, ವೇಣುಗೋಪಾಲ, ನಾಗೇಶ್ವರ ದೇವಾಲಯಗಳಿವೆ. ಮರಾಗೂರುನಲ್ಲಿ ಶಂಭುಲಿಂಗೇಶ್ವರ ದೇವಾಲಯವಿದೆ. ಕೆಂಬಾಳುನಲ್ಲಿ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ, ಈಶ್ವರ ದೇವಾಲಯಗಳಿವೆ, ಒಲ್ಲುಗಟ್ಟಿಯಲ್ಲಿ ದೇವಾಲಯ ಸಂಪೂರ್ಣನಾಶವಾಗಿದೆ. ಬೃಹತ್ ಸಮಾಧಿ ನೆಲೆಗಳು ಹಾಗೂ ಸಳ ಹುಲಿಯನ್ನು ಕೊಲ್ಲುತ್ತಿರುವುದು ಕಂಡು ಬರುತ್ತದೆ. ಬಿದರೆಯಲ್ಲಿ ಈಶ್ವರ ದೇವಾಲಯ, ಅಣತಿಯಲ್ಲಿ ಸೋಮೇಶ್ವರ ದೇವಾಲಯ, ಲಕ್ಷ್ಮೀಕಾಂತ ದೇವಾಲಯ, ನವಿಲೆಯಲ್ಲಿ ನಾಗೇಶ್ವರ ದೇವಾಲಯ ಅಲ್ಲದೆ ಪಾರ್ವತಮ್ಮ ಮತ್ತು ಸೋಮೇಶ್ವರ ದೇವಾಲಯ, ಲಕ್ಷ್ಮೀಕಾಂತ ದೇವಾಲಯ, ಸಂತೇಶಿವರದಲ್ಲಿ ಮಲ್ಲೇಶ್ವರ ಮತ್ತು ಗಂಗದೇಶ್ವರ ದೇವಾಲಯಗಳಿವೆ. ಅಗ್ರಹಾರ ಬೆಳಗುಲಿಯಲ್ಲಿ ಅಮೃತೇಶ್ವರ, ಸೋಮೇಶ್ವರ, ದಿಂಡಗೂರುನಲ್ಲಿ ಕೇಶವ ದೇವಾಲಯ, ಸೋಮೇಶ್ವರ ದೇವಾಲಯ, ಜಂಬೂರುನಲ್ಲಿ ಜಂಭುಕೇಶ್ವರ ದೇವಾಲಯ, ಗಂಜಗೆರೆಯಲ್ಲಿ ಪಾಳು ಲಿಂಗೇಶ್ವರ ಗುಡಿ, ಬಸವನಪುರದಲ್ಲಿ ಈಶ್ವರ ದೇವಾಲಯ, ಅಕ್ಕನಹಳ್ಳಿಯಲ್ಲಿ ಪಾಳು

ಮಂಟಪ, ಮೊದಲಗೆರೆಯಲ್ಲಿ, ಈಶ್ವರದೇವಾಲಯ, ದಿಡಿಗದಲ್ಲಿ ಲಕ್ಷ್ಮೀ ನರಸಿಂಹ ದೇವಾಲಯ, ಮೊಸಕನಹಳ್ಳಿ ಈಶ್ವರದೇವಾಲಯ ಆನೆಕೆರೆಯಲ್ಲಿ ಚನ್ನಕೇಶ್ವ ದೇವಾಲಯ ಅನೇಕ ವೀರಗಲ್ಲುಗಳು ಕಂಡುಬರುತ್ತವೆ. ಚಿಕ್ಕಬೆಟ್ಟದ ಮಹಾದ್ವಾರ, ಚಿಕ್ಕಬೆಟ್ಟ ಬಾಹುಬಲಿ ಶಿಲ್ಪ, ತೋರಣ ಮಂಟಪ, ಭದ್ರಬಾಹು ಗುಹೆ, ಶ್ರುತಕೇವಲ ಭದ್ರಬಾಹು, ಶ್ರೀ ಚರಣ, ಮಾನಸ್ತಂಭ, ಶಿಲಾಶಾಸನ ಮಂಟಪಗಳು, ಮಾರಸಿಂಹನ ಮಾನಸ್ತಂಭ, ಚಂದ್ರನಾಥ, ಅನಂತನಾಥ, ಪಾರ್ಶ್ವನಾಥ, ಶಾಂತಿನಾಥ, ಸುಪಾರ್ಶ್ವನಾಥ, ಆದಿನಾಥ, ಚಂದ್ರಗುಪ್ತ ಬಸದಿ, ಚಂದ್ರಗುಪ್ತ ಮೌರ್ಯ ರಾಣಿ ಮತ್ತು ಮಂತ್ರಿ ಸೇನಾಧಿಪತಿಗಳು, ಜಾಲಂಧರದಲ್ಲಿ ಶಿಲ್ಪ ಚಿತ್ರಗಳು, ಚಾವುಂಡರಾಯ ಬಸದಿ, ಭಗವಾನ್ ನೇಮಿನಾಥ, ಪಾರ್ಶ್ವನಾಥ, ಗೋಮದಯಕ್ಷ, ಕೂಷ್ಮಾಂಡಿನಿ ಯಕ್ಷಿ ಚಾವುಂಡರಾಯನ ಧರ್ಮಪತ್ನಿ ಅಜಿತಾದೇವಿ, ಚಾವುಂಡರಾಯ ಅಜಿತಾದೇವಿಯ ಬಾವಭಂಗಿ, ಅಜಿತಾದೇವಿಯಿಂದ ಪುಷ್ಪ ಸಮರ್ಪಣೆ, ವಿಚಾರ ಮಗ್ನಳಾದ ಅಜಿತಾದೇವಿ, ಯುದ್ಧದೃಶ್ಯ, ಕೊಂಬು ಇರುವ ಸಿಂಹ, ನೇಮಿನಾಥ ತೀರ್ಥಂಕರ ಅಜಿತಾದೇವಿಯ ಕುತೂಹಲ ಅಕ್ಕನ ಬಸದಿ, ಪಾತಾಳ ಯಕ್ಷ ಸ್ತಂಭದ ಮಂಟಪ, ಸವತಿ ಗಂದವಾರಣ ಬಸದಿ, ಅಖಂಡಬಾಗಿಲು ಮತ್ತು ಭರತ ಮಯೂರ ಬಸದಿ, ಒಡಗಲ್ಲ ಬಸದಿ, ತ್ಯಾಗದ ಕಂಬ, ಮಜ್ಜಿಗಣ್ಣ ಬಸದಿ, ಶಾಸನಬಸದಿ, ಜಿನನಾಥಪುರ ಇನ್ನೂ ಮುಂತಾದ ಊರುಗಳಲ್ಲಿ ಜೈನರ ವಾಸ್ತು ಪರಂಪರೆಯ ಬಸದಿಗಳು ಕಂಡು ಬರುತ್ತವೆ.

ಈ ಹಿನ್ನೆಲೆಯಿಂದ ಚನ್ನರಾಯಪಟ್ಟಣ ತಾಲೂಕಿನಲ್ಲಿ ಕಲಾ ಚಟುವಟಿಕೆಯ ಪ್ರಭಾವ ನಡೆದಿರುವುದು ಕಂಡುಬರುತ್ತದೆ. ಹೊಯ್ಸಳರ ಕಾಲದ ದೇವಾಲಯಗಳು ಅಂದು ಪ್ರಚಲಿತದಲ್ಲಿದ್ದ ಮತ್ತು ಆ ಕಾಲಕ್ಕೆ ಕರ್ನಾಟಕದ ವಾಸ್ತು ಶಿಲ್ಪ ಬೆಳವಣಿಗೆಗೆ ಹೊಸತನವನ್ನು ಬೆಳೆಸಿದ ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪ ಬೆಳವಣಿಗೆಯಲ್ಲಿ ಪ್ರತ್ಯೇಕವಾಗಿ ಅಲ್ಲದೆ ಪರೋಕ್ಷವಾಗಿ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. [10]

ವಿಜಯನಗರದ ಅರಸರು ಸಹ ಈ ಭಾಗದಲ್ಲಿ ವಾಸ್ತುಶಿಲ್ಪಕ್ಕೆ ತಮ್ಮದೇ ಆದ ವಿಶೇಷ ಕೊಡುಗೆಯನ್ನು ಕೊಟ್ಟಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ವಾಸ್ತುಶಿಲ್ಪ ಬೆಳವಣಿಗೆಯಲ್ಲಿ ಹಲವಾರು ಬದಲಾವಣೆಗಳನ್ನು ತಂದರು. ಹಲವಾರು ಹೊಸ ಹೊಸ ಪ್ರಯೋಗಗಳನ್ನು ಮಾಡಿದರು. ವಿಜಯನಗರದ ಅರಸರು ಕೇವಲ ಧಾರ್ಮಿಕ ವಾಸ್ತು ರಚನಾ ನೋಟವಲ್ಲದೆ, ಲೌಕಿಕ ಕಟ್ಟಡಗಳ ಬೆಳವಣಿಗೆಗೂ ಸಹ ಕಾರಣ ಕರ್ತರಾಗಿದ್ದಾರೆ. ಶೈವ ಮತ್ತು ವೈಷ್ಣವ ದೇವಾಲಯಗಳಲ್ಲಿ ಸ್ತ್ರೀದೇವತೆಗೆ (ಲಕ್ಷ್ಮೀ, ಪಾರ್ವತಿ, ಸರಸ್ವತಿ) ದೇವತೆಯರಿಗೆ ಬೇರೆ ಗುಡಿಯನ್ನು ನಿರ್ಮಿಸುವ ಪರಿಪಾಠವನ್ನು ಬೆಳೆಸಿದರು. ಸ್ತ್ರೀದೇವತೆಗೆ ಪ್ರತ್ಯೇಕವಾದ

ಮಂದಿರವನ್ನು ನಿರ್ಮಿಸಿರುವುದು ಸಹ ಚನ್ನರಾಯಪಟ್ಟಣ ಪ್ರಾಂತ್ಯದಲ್ಲಿ ಕಂಡುಬರುತ್ತದೆ. ಶ್ರೀ ವೈಷ್ಣವ ಹಾಗೂ ವೈಷ್ಣವ ದೇವಾಲಯಗಳಲ್ಲಿ ಗಂಗಾ ಮತ್ತು ಯಮುನಾ, ಗೋದಾವರಿ, ಕಾವೇರಿ ನದಿಗಳು ಸಹ ದೇವತೆಗಳಾಗಿವೆ. ಈ ದೇವಿಯರು ತಮ್ಮ ತಮ್ಮ ವಾಹನಗಳ ಮೇಲೆ ಆಸೀನರಾಗಿದ್ದು, ವಾಹನಗಳ ಬಾಯಿಂದ ಹೊಮ್ಮಿರುವ ದಟ್ಟವಾದ ಎಲ್, ಬಳ್ಳಿ, ಹೂಗಳ ಅಲಂಕರಣದ ಮಧ್ಯದಲ್ಲಿ ಮಹಾವಿಷ್ಣುವಿನ ದಶಾವತಾರಗಳನ್ನು ಕಡಯಲಾಗಿರುತ್ತದೆ. [11] ವಿಜಯನಗರ ಅರಸರ ಕಾಲದ ಸಾಮಂತ ರಾಜರೂ ಸಹ ಇವರ ವಾಸ್ತುಶಿಲ್ಪ ಪರಂಪರೆಯನು ಅನುಸರಿಸಿದರು. ಈ ತಾಲುಕಿಗೆ ಸೇರಿದಂತೆ ಇವರು ಕೆಲವೇ ಕೆಲವು ಕೆಲವು ದೇವಾಲಯಗಳನ್ನು ಕಟ್ಟಿಸಿರುವುದು ಕಂಡು ಬರುತ್ತದೆ.

ದೇವಾಲಯಗಳಲ್ಲಿ ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜನ ಜೀವನದ ವಿವಿಧ ರೂಪಗಳನ್ನು ಶಿಲ್ಪಲಕ್ಷಣದಲ್ಲಿ ಕಡೆಯಲಾಗಿರುತ್ತದೆ. ಅದು ದೇವತಾ ಶಿಲ್ಪಗಳಾಗಿರಲಿ, ಶಿಲ್ಪಗಳಾಗಿರಲಿ ಅವುಗಳಲ್ಲಿ ಅಂದಿನ ಕಾಲದ ಜನ ಜೀವನದ ವೇಷ-ಭೂಷಣ, ಸಂಗೀತ ಉಪಕರಣಗಳು, ಗ್ರಹಾಲಂಕಾರ, ಪೀಠೋಪಕರಣಗಳು ಹಾಗೂ ಇನ್ನಿತರ ಯುದ್ಧಮಾಡುತ್ತಿರುವ ದೃಶ್ಯಾವಳಿಗಳು ಅತ್ಯಂತ ಅದ್ಭುತವಾಗಿ ಕೆತ್ತಿರುವುದು ಕಂಡುಬರುತ್ತದೆ. ಸಸ್ಯ ಸಂಪತ್ತು, ಪ್ರಾಣಿ ವರ್ಗದ ಸನ್ನಿವೇಶಗಳು ಸಹ ವಿಶೇಷವಾಗಿ ಹೊಯ್ಸಳ ಮತ್ತು ವಿಜಯನಗರ ಅರಸರ ಕಾಲದ ದೇವಾಲಯಗಳಲ್ಲಿ ಕಂಡುಬರುತ್ತವೆ. ಹೊಯ್ಸಳ ಮತ್ತು ವಿಜಯನಗರ ಅರಸರ ಕಾಲದ ದೇವಾಲಯಗಳಲ್ಲಿ ಶಿಲ್ಪಗಳಲ್ಲಿ ನೈಜವಾಗಿ ಅರಳಿ ನಿಂತಿವೆ.

ಗಂಗರ, ಹೊಯ್ಸಳರ, ವಿಜಯನಗರ ಅರಸರ, ಮೈಸೂರು ಒಡೆಯರ ಕಾಲದ ಶಿಲ್ಪಗಳು ಚನ್ನರಾಯಪಟ್ಟಣ ಪ್ರಾಂತ್ಯದಲ್ಲಿ ವಾಸ್ತುರಚನೆಯಾಗಿರಬಹುದು. ಶಿಲ್ಪರಚನಾ ಕ್ರಮದಲ್ಲಿರ ಬಹುದು. ಅವುಗಳಲ್ಲಿ ಹೊಸ ಬಗೆಯ ಸನ್ನಿವೇಶಗಳನ್ನು ತೋರಿಸಿರುತ್ತಾರೆ. ಅಂದಿನ ಕಾಲದ ಸಮಕಾಲೀನ ಪರಿಸ್ಥಿತಿಯಲ್ಲಿ ಅವರು ಧರಿಸುತ್ತಿದ್ದ ಉಡುಗೆ ತೊಡುಗೆಗಳು, ಆಭರಣಗಳು ಮೊದಲಾದ ವಿವರಗಳು ಶಿಲ್ಪ ಕೆತ್ತನೆಯಲ್ಲಿ ಕಂಡು ಬರುತ್ತವೆ. ಗತಕಾಲದ ಜನರು ನಮಗೆ ಬಿಟ್ಟು ಹೋಗಿರುವ ಇಂತಹ ಅತ್ಯುತ್ತಮ ಕೃತಿಗಳು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭಂಡಾರವಾಗಿದೆ ಎನ್ನಬಹುದು. ಭಾರತೀಯ ಪರಂಪರೆಯ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದ ಕಥಾನಕವೂ ಜೈನರ ಕಲ್ಪನೆಯಲ್ಲಿ ಅಲ್ಪ ಬದಲಾವಣೆಗೊಂದಿಗೆ ಪೌರಾಣಿಕ ಕಥೆಯಾಗಿ ರೂಪುಗೊಂಡಿದೆ. ಜೈನರು ಕಲಿಸುವ ರತಿ-ಮನ್ಮಥ, ರಾಮ-ಸೀತೆ, ಕೃಷ್ಣ, ನಾಗೇಂದ್ರ ಮೊದಲಾದ ಶಿಲ್ಪಗಳಲ್ಲಿ ಮತೀಯ ವ್ಯತ್ಯಾಸಗಳು ಕಾಣಬರುವುದಿಲ್ಲ. ಒಟ್ಟಿನಲ್ಲಿ ಶಿಲ್ಪ ಜಗತ್ತಿನಲ್ಲಿ ಜೈನ ಮತ್ತು ವೈಧಿಕ ಪರಂಪರೆಯಲ್ಲಿ ಹೆಚ್ಚಿನ ಸಾಮ್ಯಗಳೇ ಕಾಣಬರುತ್ತವೆ.

ಹಲವಾರು ಬಸದಿಗಳಲ್ಲಿ ಸೂರ್ಯ, ನಾಗರಕಲ್ಲು, ಸರಸ್ವತಿ, ಸರಸ್ವತೀ, ಲಕ್ಷ್ಮೀ, ಬ್ರಹ್ಮ ಮತ್ತು ಇಂದ್ರ ಶಿಲ್ಪಗಳು ಪೂಜೆಗೊಳ್ಳುತ್ತವೆ. ಇದರಂತೆ ವೈಷ್ಣವ ದೇವಾಲಯಗಳ ಭಿತ್ತಿಯ ಭಾಗದಲ್ಲಿ ದಶವತಾರದ ಶಿಲ್ಪಗಳನು ಬುದ್ಧನ ಸ್ಥಾನದ ಆಸೀನ ಜಿನ ಬಿಂಬಗಳನ್ನು ಕಾಣುತ್ತೇವೆ. ಅನೇಕ ವೈಧಿಕ ದೇವಾಲಯಗಳಲ್ಲಿ ಕಂಡು ಬರುವ ಸರಸ್ವತೀ ಶಿಲ್ಪವೂ ವೈಧಿಕ ಪರಂಪರೆಯ ಸರಸ್ವತಿಯ ಶಿಲ್ಪವಾಗಿರದೇ ಜಿನ ಶಿಲ್ಪವಾಗಿರುವುದು ರೂಢಿಯಲ್ಲಿದೆ. ಕ್ರಿ.ಶ. 12ನೇ ಶತಮಾನದ ನಂತರ ಶ್ರೀ ವೈಷ್ಣವ ಧರ್ಮದ ದೇವಾಲಯಗಳು ಕೆಲವು ಆಚಾರಗಳಿಂದ ಜನ ಸಾಮಾನ್ಯರನ್ನು ತನ್ನ ಕಡೆಗೆ ಸೆಳೆಯಿತು. ವೈಧಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಬಂದಂತಹ ಈ ಮತದವರ ಕೆಲವು ಆಕರ್ಷಕ ಶಿಲ್ಪಗಳಿವೆ.

ಚನ್ನರಾಯಪಟ್ಟಣ ತಾಲೂಕಿನ ಪ್ರದೇಶದಲ್ಲಿ ಮಾಸ್ತಿಕಲ್ಲುಗಳು ಕಂಡುಬರುತ್ತವೆ. ಇದರ ಉದ್ದೇಶವೇನೆಂದರೆ ಯಾವುದೇ ಒಬ್ಬ ವ್ಯಕ್ತಿ ವೃದ್ಧಾಪ್ಯದಿಂದಾಗಲೀ, ಅನಾರೋಗ್ಯದಿಂದಾಗಲೀ, ಯುದ್ಧದಲ್ಲಿಯಾಗಲೀ ಅಥವಾ ಮತ್ತಾವುದೇ ಕಾರಣದಿಂದಾಗಲಿ ಮರಣ ಹೊಂದಿದಾಗ ಆತನ ಪತ್ನಿ ಅಥವಾ ಪತ್ನಿಯರು ಸಹಗಮನ ಮಾಡುತ್ತಿದ್ದರು, ಇಂತಹವರನು ಮಹಾಸತಿಯರೆಂದು ಜನರು ಕೊಂಡಾಡುತ್ತಿದ್ದರು. ಹೀಗೆ ಸಹಗಮನ ಮಾಡಿದ ಸ್ತ್ರೀಯರ ಮಹಾಸತಿಕಲ್ಲು ಅಥವಾ ಮಾಸ್ತಿಕಲ್ಲು ಎಂದು ಕಡೆಯಲಾಗುತ್ತದೆ.

ಗಂಡನ ಜೊತೆ ಹೀಗೆ ಸಹಗಮನ ಮಾಡುವ ಸ್ತ್ರೀಯರು ದೈವತ್ವಕ್ಕೇರಿ ಎಲ್ಲರಿಂದಲೂ ಪೂಜಿಸಲ್ಪಡುತ್ತಿದ್ದರು, ಆದ್ದರಿಂದ ಆಕೆಯು ಸಹಗಮನ ಮಾಡಿದಾಗ ಸ್ಥಳದಲಿ ಶಿಲಾಸ್ಮಾರಕವನ್ನು ಸ್ತಾಪಿಸುತ್ತಿದ್ದರು. ಕರ್ನಾಟಕದಾದ್ಯಂತ ಇಂತಹ ಮಾಸ್ತಿಕಲ್ಲುಗಳು ಸಾವಿರಾರು ಸಂಖ್ಯೆಯಲ್ಲಿ ಕಂಡು ಬರುತ್ತವೆ. ಮಾಸ್ತಿಕಲ್ಲುಗಳಲ್ಲಿ ಕೆಲವೊಮ್ಮೆ ಶಿಲ್ಪದ ಜೊತೆಗೆ ಸಹಗಮನ ಮಾಡಿದ ಹೆಂಗಸಿನ ಬಗ್ಗೆ ಆಕೆಯ ಕುಟುಂಬದ ಬಗ್ಗೆ ಹಾಗೂ ಆಕೆಯು ಸಹಗಮನ ಮಾಡಿದ ರೀತಿಯ ಬಗ್ಗೆ ವಿವರವಾದ ವರ್ಣನೆಯನ್ನು ಶಾಸನ ರೂಪದಲ್ಲಿ ತಿಳಿಸಲಾಗಿರುತ್ತದೆ. ಮಾಸ್ತಿಕಲ್ಲಿನ ಶಿಲ್ಪದಲ್ಲಿ ಒಂದು ಶಿಲಾಸ್ತಂಭವಿರುತ್ತದೆ. ಆ ಸ್ತಂಭದಿಂದ ಹೊರಬಂದಿರುವ ಒಂದು ತೋಳು ಅಭಯ ಹಸ್ತವನ್ನು ಹಿಡಿದಂತಿರುತ್ತದೆ. ತೋಳಿನ ಮುಂಗೈಯ ಭಾಗದಲ್ಲಿ ಬಳೆಗಳಿರುತ್ತದೆ. ಹಸ್ತದ ಹೆಬ್ಬೆರಳು ಮತ್ತು ತೋರು ಬೆರಳುಗಳ ಮಧ್ಯ ಮೊದಲ ಫಲವನ್ನು ಹಿಡಿದಂತೆ ಉಬ್ಬು ಶಿಲ್ಪದ ರೂಪದಲ್ಲಿ ಕೆತ್ತಿರುತ್ತಾರೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಶಿಲ್ಪಗಳಿರುತ್ತದೆ. ಈ ರೀತಿಯ ಒಂದು ಕಂಬದಿಂದ ಒಂದು ಕೈ ಹೊರಬಂದಂತೆ ಕೆತ್ತಿದ್ದರೆ ಅದನ್ನು ಒಕ್ಕೈ ಮಾಸ್ತಿ ಎಂದು ಕರೆಯುತ್ತಾರೆ. ಒಬ್ಬ ವ್ಯಕ್ತಿಯ ಒಬ್ಬ ಪತ್ನಿಯು ಸಹಗಮನ ಮಾಡಿದರೆ ಆಗ ಈ ರೀತಿಯಲ್ಲಿ ಒಂದು ಕೈ ಹೊರಬಂದಂತೆ ಶಿಲ್ಪವನ್ನು ಕೆತ್ತಲಾಗುತ್ತದೆ.

ಒಬ್ಬ ವ್ಯಕ್ತಿಯ ಇಬ್ಬರು ಪತ್ನಿಯರು ಸಹಗಮನ ಮಾಡಿದರೆ ಆಗ ಸ್ತಂಭದಿಂದ ಎರಡು ಕೈಗಳು ಹೊರಬಂದಂತೆ ಕೆತ್ತಿರುತ್ತಾರೆ. ಈ ಎರಡು ಕೈಗಳು ಒಂದು ಕೈಕೆಳಗೆ ಮತ್ತೊಂದು ಕೈ ಇರುತ್ತದೆ. ಅಪರೂಪಕ್ಕೆ ಸ್ತಂಭದ ಎರಡು ಬದಿಗೆ ಒಂದೊಂದು ಕೈಗಳಿರುವಂತೆ ಕೆತ್ತಲಾಗಿರುತ್ತದೆ. ಅದೇ ರೀತಿ ವೀರ ಮಾಸ್ತಿಕಲ್ಲು ಸಹ ಇದೆ. ಯುದ್ಧದಲ್ಲಿ ಹೋರಾಡಿ ಮಡಿದ ವ್ಯಕ್ತಿಯ ಪತ್ನಿಯು ಸಹಗಮನ ಮಾಡಿದ್ದರೆ ಅಂತಹ ಸಂದರ್ಭಗಳಲ್ಲಿ ಹೋರಾಡಿ ಮಡಿದ ವೀರನಿಗೂ ಪ್ರಾಮುಖ್ಯತೆಯಿರುವುದರಿಂದ ಆ ವೀರನ ಶಿಲ್ಪವನ್ನು ಪ್ರಧಾನವಾಗಿ ಕಾಣುವಂತೆ ಕೆತ್ತಿರುತ್ತಾರೆ. ಆತನ ಪತ್ನಿಯು ಸಹಗಮನ ಮಾಡಿರುವುದರಿಂದ ಆ ಮಹಾಸತಿಗೂ ಪ್ರಾಮುಖ್ಯತೆಯಿರುತ್ತದೆ. ಆದ್ದರಿಂದ ಆ ವೀರ ಮತ್ತು ಆತನ ಪತ್ನಿ ಇಬ್ಬರ ಶಿಲ್ಪಗಳಿಗೂ ಪ್ರಾಮುಖ್ಯತೆ ಇರುತ್ತದೆ. ಮಹಾಸತಿಯರ ಸ್ಮಾರಕಗಳಾದ ಮಾಸ್ತಿಕಲ್ಲುಗಳನ್ನು ದೈವ ಸ್ವರೂಪವಾಗಿ ಜನರು ದೇವಾಲಯಗಳನ್ನು ನಿರ್ಮಿಸಿ ಪೂಜಿಸುವ ನಿದರ್ಶನಗಳು ಬೇಕಾದಷ್ಟು ದೊರೆಯುತ್ತದೆ. ಇಂದಿಗೂ ವೀರ ಮಾಸ್ತಿಕಲ್ಲುಗಳನ್ನು ಲಕ್ಷಾಂತರ ಭಕತ್ರು ಪೂಜಿಸುತ್ತಾರೆ.

ವೀರಗಲ್ಲುಗಳು ಸಹ ಕಂಡುಬರುತ್ತವೆ. ಇದು ವೀರ ಸ್ಮಾರಕವಾಗಿ ನಿರ್ಮಿಸಿದ ಸ್ಮಾರಕಗಳನ್ನು ವೀರಗಲ್ಲು ಎಂದು ಕರೆಯಲಾಗುತ್ತದೆ. ಯುದ್ಧದಲ್ಲಿ ಹೋರಾಡಿ ಮಡಿದ ಅಥವಾ ಹಸುಗಳನ್ನು ಕಳ್ಳರು ಕದ್ದುಹೋಗುವಾಗ ಅಥವಾ ಸ್ತ್ರೀರಯ ಮಾನಭಂಗಕ್ಕೆ ಯಾರಾದರೂ ಪ್ರಯತ್ನಿಸುವಾಗ ಹೀಗೆ ಯಾವುದೇ ಸಂದರ್ಭದಲ್ಲಾಗಲಿ ರಕ್ಷಿಸಲು ಹೋರಾಡಿ ಮಡಿದ ವೀರನ ಸ್ಮಾರನ ಶಿಲೆಗಳನ್ನು ವೀರಗಲ್ಲು ಎಂದು ಕರೆಯಲಾಗುತ್ತದೆ.

ವೀರಗಲ್ಲುಗಳಲ್ಲಿ ಒಂದು ಹಂತದ ಶಿಲ್ಪವನ್ನು ಹೊಂದಿರುವ ವೀರಗಲ್ಲು. ಎರಡು ಹಂತದ ವೀರಗಲ್ಲು, ಮೂರು ಹಂತದ ವೀರಗಲ್ಲು, ಐದು ಹಂತದ ವೀರಗಲ್ಲು. ಹೀಗೆ ಒಂದರಿಂದ ಎಂಟು ಹಂತಗಳವರೆಗಿನ ಶಿಲ್ಪಗಳನ್ನು ಹೊಂದಿರುವ ವೀರಗಲ್ಲುಗಳು ದೊರೆಯುತ್ತವೆ. ಒಂದೇ ಹಂತದ ಶಿಲ್ಪವನ್ನೊಂದಿರುವ ವೀರಗಲ್ಲುಗಳಲ್ಲಿ ವೀರನೊಬ್ಬನು ಆಯುಧ ಪಾಣಿಯಾಗಿ ಒಂದು ಹೆಜ್ಜೆಯನ್ನು ಮುಂದಕ್ಕಿಟ್ಟು ಆಲಿದಾಸನದಲ್ಲಿ ನಿಂತಿರುವಂತೆ ಶಿಲ್ಪವನ್ನು ಕೆತ್ತಲಾಗಿರುತ್ತದೆ. ಆತನ ಕೈಗಳಲ್ಲಿ ಕತ್ತಿ ಗುರಾಣಿ ಅಥವಾ ಬಿಲ್ಲು ಬಾಣಗಳಿರುತ್ತವೆ. ವೀರಗಚ್ಚೆಯನ್ನು ಹಾಕಿಕೊಂಡು ವೀರಮುಡಿಯೊಡನೆ ಧೈರ್ಯದಿಂದ ಮುನ್ನುಗ್ಗುತ್ತಿರುವಂತೆ ವೀರನ ಶಿಲ್ಪನ್ನು ಕೆತ್ತಲಾಗಿರುತ್ತದೆ. ಆತನ ಎದುರಿನಲ್ಲಿ ಶತ್ರುವಿನ ಶಿಲ್ಪವಿರುತ್ತದೆ. ಶತ್ರುವಿನ ಶಿಲ್ಪವನ್ನು ತೀರಾ ಸಣ್ಣದಾಗಿ ತೀರಾ ಸಾಮಾನ್ಯವಾಗಿ ಕಾಣುವಂತೆ ಕೆತ್ತಲಾಗಿರುತ್ತದೆ. ಆ ವೀರಗಲ್ಲಿನ ವೀರನ ದೇಹಕ್ಕೂ ಹಲವು ಬಾಣಗಳು ಚುಚ್ಚಿಕೊಂಡಿರುವಂತೆ ತೋರಿಸಿರುತ್ತಾರೆ.

ವೀರನ ತಲೆಯ ಮೇಲ್ಭಾಗದಲ್ಲಿ ಸೂರ್ಯ ಚಂದ್ರರು ಹಾಗೂ ಆತನ ಇಷ್ಟದೇವತೆಯ ಶಿಲ್ಪವಿರುತ್ತದೆ.

ಎರಡು ಹಂತಗಳ ಶಿಲ್ಪವಿರುವ ವೀರಗಲ್ಲಿನಲ್ಲಿ ಕೆಳಗಿನಿಂದ ಮೊದಲನೆಯ ಹಂತದಲ್ಲಿ ಹೋರಾಡುತ್ತಿರುವ ವೀರನ ಶಿಲ್ಪವಿದ್ದರೆ ಎರಡನೆಯ ಹಂತದಲ್ಲಿ ಆ ವೀರನು ಸ್ವರ್ಗದಲ್ಲಿ ಅಥವಾ ತನ್ನ ಇಷ್ಟದೇವತೆಯ ಸನ್ನಿಧಿಯಲ್ಲಿ ಇರುವಂತೆ ಶಿಲ್ಪವನ್ನು ಕಂಡರಿಸಲಾಗಿರುತ್ತದೆ. ಆ ವೀರನು ಶೈವ ಧರ್ಮಿಯನಾಗಿದ್ದರೆ ಆತ ಶಿವಲಿಂಗದ ಮುಂದೆ ಕೈಮುಗಿದು ಕುಳಿತಿರುವಂತೆ ಅಂದರೆ ಕೈಲಾಸವನ್ನು ಸೇರಿದನೆಂಬ ಅರ್ಥಬರುತ್ತದೆ. ವೈಷ್ಣವನಾಗಿದ್ದರೆ ಮಹಾವಿಷ್ಣುವಿನ ಸನ್ನಿಧಿಯಲ್ಲಿ ಅಂದರೆ ವೈಕುಂಠದಲ್ಲಿರುವಂತೆ ಜೈನಾಗಿದ್ದರೆ ಜಿನನ ಸನ್ನಿಧಿಯಲ್ಲಿ ಅಂದರೆ ಜೈನಕ್ಯನಾದನೆಂದು ತೋರುತ್ತದೆ. ತೀರ ಅಪರೂಪಕ್ಕೆ ಮೂರು ಹಂತಗಳಿಗಿಂತ ಹೆಚ್ಚಿನ ಹಂತಗಳಿರುವ ವೀರಗಲ್ಲುಗಳು ಕಂಡು ಬರುತ್ತದೆ. ವೀರಗಲ್ಲುಗಳನ್ನು ಅವುಗಳ ವೈಶಿಷ್ಟ್ಯತೆಗಳಿಗೆ ಅನುಗುಣವಾಗಿ ತುರುಗೋಳ್, ವೀರಗಲ್ಲು, ಪೆಣ್ಣುಯಾಲ್ ವೀರಗಲ್ಲು, ವೀರ ಮಾಸ್ತಿಗಲ್ಲು, ವೀರ ನಿಷಿದ್ಧಿಗಲ್ಲು ನಮಗೆ ಶ್ರವಣಬೆಳಗೊಳದಲ್ಲಿ ಕಂಡುಬರುತ್ತದೆ. ಇದರ ವೈಶಿಷ್ಟ್ಯವೇನೆಂದರೆ ರಣರಂಗದಲ್ಲಿ ಹೋರಾಡಿ ಗಾಯಗೊಂಡ ವೀರನು ಇನ್ನೂ ಮರಣ ತಪ್ಪದೆಂದು ತಿಳಿದು ಸಲ್ಲೇಖನ ವ್ರತಧಾರಿಯಾಗಿ ಸಮಾಧ ಮರಣ ಪಡೆದುಕೊಂಡಾಗ ನಿರ್ಮಿಸುವ ಸ್ಮಾರಕಗಳನ್ನು ವೀರನಿಷಿಗಲ್ಲು ಎಂದು ಕರೆಯಬಹುದಾಗಿದೆ.

ವೀರ ನಿಸಿಧಿಗಲ್ಲಿನಲ್ಲಿ ಕೆಳಗಿನ ಹಂತದ ಶಿಲ್ಪದಲ್ಲಿ ರಣರಂಗದಲ್ಲಿ ಹೋರಾಡುತ್ತಿರುವ ವೀರನ ಶಿಲ್ಪವಿರುತ್ತದೆ. ಮೇಲ್ಭಾಗದಲ್ಲಿರುವ ಎರಡನೆಯ ಹಂತದಲ್ಲಿ ವೀರನು ಸಲ್ಲೇಖನ ವ್ರತಧಾರಿಯಾಗಿ ಕುಳಿತ ಶಿಲ್ಪವಿರುತ್ತದೆ. ಮೂರನೆಯ ಹಂತದಲ್ಲಿ ಆ ವೀರನು ಜಿನನ ಸನ್ನಿಧಿಯಲ್ಲಿ ಕುಳಿತ ಶಿಲ್ಪವಿರುತ್ತದೆ. ಶ್ರವಣಬೆಳಗೊಳದ ಚಂದ್ರಗಿರಿಬೆಟ್ಟದ ಮೇಲಿರುವ ಬೋಯಿಗನ ವೀರಗಲ್ಲು ಸಾವಿಯಬ್ಬೆಯ ವೀರಗಲ್ಲು, ಕಾಯ್ಕಿಣಿಯ ವೀರಗಲ್ಲುಗಳು ಮುಂತಾದವುಗಳು ವೀರನಸಿದಿಗಲ್ಲಿಗೆ ಉತ್ತಮ ಉದಾಹರಣೆಯಾಗಿದೆ. ಅಚಿತಿಮ ಶ್ರುತಕೇವಲ ಭದ್ರಬಾಹು ಭಟ್ಟಾರಸನು ಕಳ್ವಪ್ರಿನಲ್ಲಿ ಸಮಾಧ ಮರಣಹೊಂದಿದ ನಂತರ ಅವರ ನಿಸಿದಿಯನ್ನು ಚಂದ್ರಗುಪ್ತನು ಪೂಜಿಸುತ್ತಾ ಅಲ್ಲಿಯೇ ಉಳಿದದ್ದನು. ಕೆಲವು ಕಾಲನಂತರ ದಕ್ಷಿಣ ದೇಶಕ್ಕೆ ಹೋಗಿದ್ದ, ಉಳಿದ ಮುನಿ ಸಮುದಾಯದವರು ಭದ್ರಬಾಹು ಭಟ್ಟಾರಕರನಿಸಿದಯ ದರ್ಶನ ಪಡೆದು ನವಿಸಿ ಹೋಗೋಣವೆಂದು ಶ್ರವಣಬೆಳಗೊಳಕ್ಕೆ ಬಂದ ವಿವರಗಳು ವಡ್ಡಾರಾಧನೆಯಲ್ಲಿ ದೊರೆಯುತ್ತವೆ.

ಭದ್ರಬಾಹು ಮುನಿಗಳ ನಿಸಿಧಿಯಿದ್ದುದರಿಂದ ಶ್ರವಣಬೆಳಗೊಳದ ಚಂದ್ರಗಿರಿ ತೀರ್ಥಕ್ಷೇತ್ರ ಸ್ವರೂಪ ಪಡೆದುಕೊಂಡಿತು. ಅಂತಹ ತೀರ್ಥ ಸ್ಥಳಗಳಲ್ಲಿ ಸಮಾಧಿ ಮರಣ ಪಡೆಯುವುದು ಪುಣ್ಯಕರವೆಂದು ಭಾವಿಸಿದ್ದರಿಂದಲೇ ಶ್ರವಣಬೆಳಗೊಳದ ಚಂದ್ರಗಿರಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮುನಿಗಳು ಕಂತಿಯರು, ಶ್ರಾವಕರು, ಶ್ರಾವಕಿಯರು, ಸಮಾಧಿ ಮರಣ ಪಡೆದುಕೊಂಡಿದ್ದಾರೆಂದು ಹೇಳಬಹುದು. ಶ್ರವಣಬೆಳಗೊಳದ ಚಂದ್ರಗಿರಿಯು ಕ್ರಿ.ಪೂ. ಮೂರನೆಯ ಶತಮಾನದಿಂದಲೂ ತೀರ್ಥ ಸ್ಥಳವೆಂಬುದಾಗಿ ಪರಿಗಣಿತವಾಗಿದ್ದುದು ಭದ್ರವಾಹುವಿನ ನಿಸದಿಯಿಂದಲೇ ಎಂದು ಹೇಳಬಹುದು. ಇಂದ್ರಗಿರಿಯು ಚಾವುಂಡರಾಯನಿಂದ ಬಾಹುಬಲಿಯ ಶಿಲ್ಪದ ನಿರ್ಮಾಣದ ನಂತರವಷ್ಟೇ ಪ್ರಾಮುಖ್ಯತೆ ಪಡೆದುಕೊಂಡಿತು. ಕ್ರಿ.ಶ. 1432ರಲ್ಲಿ ಶ್ರವಣಬೆಳಗೊಳದ ಶ್ರುತಮುನಿಗಳ ನಿಸಿದಿ ಶಾಸನವನ್ನು ಮಂಗರಾಜ ಎಂಬ ಕವಿಯು ಬರಿದಿದ್ದಾನೆ. ಈತನು ಒಬ್ಬ ನಿಘಂಟು ರಚನಕಾರ ಎಂಬುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಕ್ರಿ.ಶ. 1517ರ ಮಲೆಯೂರಿನ ಮುನಿಚಂದ್ರ ದೇವರ ನಿಸಿದಿ ಶಾಸನವನ್ನು ವಿದ್ಯಾನಂದೋಪಾಧ್ಯಾಯ ಎಂಬ ಕವಿಯು ರಚಿಸಿದ್ದಾರೆ. ಶ್ರವಣಬೆಳಗೊಳದ ಪಾರ್ಶ್ವನಾಥ ಬಸದಿಯ ಬಲಗಡೆ ಬಂಡೆಯ ಮೇಲೆ ಭದ್ರಬಾಹು ಮತ್ತು ಚಂದ್ರಗುಪ್ತರು ಶ್ರವಣಬೆಳಗೊಳಕ್ಕೆ ಬಂದುದನ್ನು ವಿವರಿಸುವ ಶಾಸನದ ಕೆಳಭಾಗದಲ್ಲಿ ಶ್ರೀ ಕವಿರತ್ನ ಎಂಬ ಶಾಸನವಿದೆ.

ಈ ಶಾಸನವು ಕನ್ನಡದ ಕವಿಚಕ್ರವರ್ತಿ ಹಾಗೂ ರತ್ನತ್ರೆಯರಲ್ಲೊಬ್ಬನೆಂದು ಪ್ರಸಿದ್ಧನಾದ ಸಾಹಸಭೀಮ ವಿಜಯ ಹಾಗೂ ಅಜಿತಪುರಾಣ ಮಹಾಕಾವ್ಯಗಳ ಕರ್ತೃವಾದ ಮಹಾಕವಿ. ರನ್ನನ ಸ್ವಹಸ್ತಾಕ್ಷರವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಶ್ರವಣಬೆಳಗೊಳದ ದೊಡ್ಡಬೆಟ್ಟ ಇಂದ್ರಗಿರಿಯಲ್ಲಿರುವ ತ್ಯಾಗದ ಬ್ರಹ್ಮದೇವರ ಕಂಬವು ಚಾವುಂಡರಾಯನ ನಿಸಿದಿ ಸ್ಮಾರಕವೆಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಡಾ. ಹಂಪನಾ ಅವರು ಕವಿಕಲಿ ಆತ್ಮಜ್ಞಾನಿ ಚಾವುಂಡರಾಯನು ನಿಧನವಾದಾಗ ಆತನ ಪರೋಕ್ಷ ವಿನಿಯಾರ್ಥವಾಗಿ ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲೆ ತ್ಯಾಗದ ಕಂಬವನ್ನು ನಿಲ್ಲಿಸಲಾಗಿದೆ ಎಂದು ಅಭಿಪ್ರಾಯಿಸಿದ್ದಾರೆ.

ವೀರ ನಿಸಿದಿಗಲ್ಲುಗಳು ಶ್ರವಣಬೆಳಗೊಳದಲ್ಲಿರುವ ಸಾವಿಯಬ್ಬೆಯ ಶಾಸನವು ಮೂಲತಃ ಒಂದು ವೀರಗಲ್ಲು, ಅದರ ಶಾಸನ ಪಾಠದಿಂದ ಸಾವಿಯಬ್ಬೆಯು ರಣರಂಗದಲ್ಲೇ ಹೋರಾಡಿ ಬಗಿಯೂರಲ್ಲಿ ಸತ್ತಳೆಂದು ತಿಳಿಯುತ್ತದೆ. ಈ ವೀರಗಲ್ಲಿನ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದು ವೀರಗಲ್ಲು ಹಾಗೂ ನಿಸಿದಿಗಲ್ಲು ಎಂದು ತಿಳಿದುಬರುತ್ತದೆ. ಮೂರು

